# ವಿಜ್ಞಾನ – ಸರಳ ಪರಿಚಯ ಮಾಲೆ

## ಪ್ರೌಢಶಾಲಾ ಶಿಕ್ಷಕರಿಗಾಗಿ ಮತ್ತು ವಿದ್ಯಾರ್ಥಿಗಳಿಗಾಗಿ ಪೂರಕ ಪಠ್ಯ































































20 ಪುಸ್ತಕಗಳ ಒಟ್ಟು ಮುಖಬೆಲೆ ರೂ. 1150. 'ಹೊಸತು' ಚಂದಾದಾರರಿಗೆ ವಿಶೇಷ ರಿಯಾಯಿತಿ. ಶೇ. 20 ಸೋಡಿ ಕಳೆದು ರೂ. 920 + ಅಂಚೆವೆಚ್ಚ ರೂ. 30 ಹೀಗೆ ಒಟ್ಟು ರೂ. 950 ಎಂ. ಓ. ಅಥವಾ ಡಿ.ಡಿ. ಮಾಡಿ ಕೆಳಕಂಡ ವಿಳಾಸಕ್ಕೆ ಕಳಿಸಿ

## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – 560 001.
ದೂರವಾಣಿ : 30578022, 22203580. ಫ್ಯಾಕ್ಸ್ : 30578023.
e-mail : navakarnataka@gmail.com. URL : www.navakarnataka.com blog : http://navakarnataka.blogspot.com

# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...



---

**ಚಿತ್ರಗಳು :** ಪತ್ತಾರ್, ಪ್ರತೀಕ್, ವಿ. ಗೋಪಾಲ್, ಶ್ರೀಹರಿ,

ಎನ್. ಆರ್. ಹೆಗಡೆ ಬೊಮ್ನಳ್ಳಿ, ಕಮಲಂ ಅರಸು, ಜಿಎಂಬೊ

**ಮುಖಚಿತ್ರ :** ಬರಗಾಲದ ಬವಣೆ

**ವರ್ಣಚಿತ್ರ :** ಮುತ್ತು ಹಾಳಕೇರಿ **ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ

## ಈ ತಿಂಗಳು

ಸ್ವಾತಂತ್ರ್ಯೋತ್ಸವ ಸಂದರ್ಭದಲ್ಲಿ ನೂತನ ಅಧ್ಯಕ್ಷ ಪ್ರಣವ್ ಮುಖರ್ಜಿ ಉದಾತ್ತ ವಿಷಯಗಳನ್ನು ಪ್ರಸ್ತಾಪಿಸಿದ್ದಾರೆ. ಆಗಸ್ಟ್ ೧೫ರಂದು ರಾಷ್ಟ್ರವನ್ನು ಉದ್ದೇಶಿಸಿ ಸ್ಫೂರ್ತಿ ತುಂಬುವ ಕೆಲವು ಮಾತುಗಳನ್ನಾಡುವುದು ರೂಢಿ. ತಮ್ಮ ಹಿನ್ನೆಲೆ ಮತ್ತು ಮುನ್ನೆಲೆಗಳನ್ನು ಪ್ರತಿಪಾದಿಸಿ, ಭವ್ಯ ಭವಿಷ್ಯದ ಚಿತ್ರವನ್ನು ಅಧ್ಯಕ್ಷರು ಪ್ರಭಾವಶಾಲಿಯಾಗಿ ಹೆಣೆದರು. ಇಂತಹ ಭಾಷಣಗಳನ್ನು ೬೫ ವರ್ಷಗಳಿಂದ ಕೇಳುತ್ತಾ ಬಂದಿದ್ದೇವೆ. ಎಲ್ಲರೂ ಹೇಳುತ್ತಿದ್ದಂತೆ ಇವರೂ ''ಎರಡನೆಯ ಸ್ವಾತಂತ್ರ್ಯ'' ಮತ್ತು ಅದಕ್ಕಾಗಿ ಅಗತ್ಯವಾದ ಶ್ರಮದ ಬಗ್ಗೆ ಹೇಳಿದರು. ತಾವು ಹಣಕಾಸು ಸಚಿವರಾಗಿ ಮಂಡಿಸಿದ್ದ ಆಯವ್ಯಯ ಸಲಹೆಗಳನ್ನು ತಲೆಕೆಳಗು ಮಾಡುವ ಪ್ರಯತ್ನ ನಡೆಯುತ್ತಿದೆ. ಚಿದಂಬರಂ ಅವರ ಈ ಹುನ್ನಾರವನ್ನು ಮುಖರ್ಜಿ ತಡೆಯಬಲ್ಲರೆ, ಎಂಬುದು ಪ್ರಶ್ನೆ. ಗೃಹಮಂತ್ರಿಯಾಗಿ ನಕ್ಸಲ್ ನಿಗ್ರಹವನ್ನು ಪೂರೈಸುವುದಾಗಿ ಹೇಳುತ್ತಿದ್ದ ಚಿದಂಬರಂ ಈಗ ನಕ್ಸಲರ ಸೃಷ್ಟಿಗೆ ಪ್ರಚೋದನೆ ನೀಡಬಹುದಾದಂತಹ ಆರ್ಥಿಕ ಕ್ರಮಗಳನ್ನು ಜಾರಿಗೊಳಿಸಲು ಉತ್ಸಾಹ ತೋರುತ್ತಿದ್ದಾರೆ. ಅವರ ಆದ್ಯತೆಯ ವಿಷಯವು ಬಂಡವಳಿಗ ವರ್ಗದ, ವಿದೇಶಿ ಬಂಡವಾಳದ ಹೂಡಿಕೆದಾರರ, ಒಲವು ಗಳಿಸಿ ಕೊಳ್ಳುವುದು. ಅದನ್ನು ಅವರೇ ನೇರವಾಗಿ ಹೇಳಿದ್ದಾರೆ. ''ಬಹುರಾಷ್ಟ್ರೀಯ ಕಂಪನಿಗಳು ಭಾರತಕ್ಕೆ ತೆರಿಗೆ ಪಾವತಿಸದೆ ಬೇಕಾದಷ್ಟು ಲಾಭ ಸೂರೆಗೊಳ್ಳಲು ಅವಕಾಶ ಮಾಡಿಕೊಡಬೇಕು'' ಎಂಬುದು ಇದರ ಸಂಕ್ಷಿಪ್ತಾರ್ಥ. ಭಾರತವು ಕಾರ್ಪೊರೇಟ್ ಸಂಸ್ಥೆಗಳ ಖಜಾನೆ ಎಂಬುದು ಅವರ ಧ್ಯೇಯವಾಕ್ಯ. ವೋಡಫೋನ್ ಕಂಪನಿಗೆ ಮುಖರ್ಜಿ ವಿಧಿಸಿದ ೧೨,೦೦೦ ಕೋಟಿ ರೂಪಾಯಿಗಳ ತೆರಿಗೆಯನ್ನು ಮನ್ನಾ ಮಾಡಿದರೆ ಭಾರತಕ್ಕೆ ವಿದೇಶಿ ಬಂಡವಾಳ ಹೇರಳವಾಗಿ ಹರಿದುಬರುತ್ತದೆಂಬುದು ಅವರ ಲೆಕ್ಕಾಚಾರ. ತಮ್ಮ ಕವಚಿದ ಭಾಷೆಯಲ್ಲಿ ಇದನ್ನು ಪ್ರಧಾನಿ ಕೆಂಪುಕೋಟೆಯ ಭಾಷಣದಲ್ಲಿ ಹೇಳಿದ್ದಾರೆ. ಪಾಪ, ಅವರಿಗೆ ಮನಬಂದಂತೆ ಮಾಡಿ ದೇಶಕ್ಕೆ 'ಅಭಿವೃದ್ಧಿ' ಎಂಬ ಬಾಗಿನ ನೀಡಲು ಮುಕ್ತ ಅವಕಾಶವಿಲ್ಲದಿರುವುದು ತೊಂದರೆಯಂತೆ. ಅದೇನು ಅಭಿವೃದ್ಧಿಯೋ ! ಹಾಗಾಗುತ್ತದೆಂದೇ ಭಾವಿಸಿಕೊಂಡರೂ ಅದರಿಂದ ದೇಶದ ಜನಸಾಮಾನ್ಯರಿಗೆ ದಕ್ಕುವ ಸೌಲಭ್ಯವೇನು, ಸುಖವೇನು ? ಈವರೆಗೆ ನಡೆದುಬಂದಿರುವ ದುರಂತ ದುಪ್ಪಟ್ಟಾಗಬಹುದು, ಅಷ್ಟೆ. ಆದರೆ ರಾಷ್ಟ್ರಾಧ್ಯಕ್ಷರು ತಮ್ಮ ಭಾಷಣದಲ್ಲಿ ವ್ಯಕ್ತಪಡಿಸಿದ್ದು ಅಂತಹ ಆಶಯವನ್ನಲ್ಲ. ಹೀಗಾಗಿ ಸ್ವಾತಂತ್ರ್ಯದ ೬೬ನೆಯ ವರ್ಷದಲ್ಲಿ ಈವರೆಗಿನ ಯಾವ ಪ್ರಮುಖ ಬಿಕ್ಕಟ್ಟಿಗೂ ಪರಿಹಾರದ ಸೂಚನೆ ಕಾಣುತ್ತಿಲ್ಲ. ನಿಜವಾದ ಪರಿಹಾರದ ಹಾದಿ ಕಂಡುಕೊಳ್ಳಬೇಕಾದರೆ ನೇಣುಗಂಬ ವೇರಿದ ಭಗತ್ ಸಿಂಗ್ ನ್ಯಾಯಾಲಯದಲ್ಲಿ ನೀಡಿದ್ದ ವಿಶ್ಲೇಷಣೆಯನ್ನು ನಮ್ಮ ಮಾರ್ಗದರ್ಶಿ ಸೂತ್ರವನ್ನಾಗಿಸಿಕೊಳ್ಳಬೇಕು. ಆ ಯುವಕನಿಗೆ ದೇಶದ ಮತ್ತು ಜನಸಾಮಾನ್ಯರ ಆಕಾಂಕ್ಷೆಗಳ ಪೂರೈಕೆಯು ಮೊದಲ ಆದ್ಯತೆಯ ವಿಷಯ. ಆ ಪೂರೈಕೆಗೆ ವೈಜ್ಞಾನಿಕ ಸಮಾಜವಾದಿ ಹಾದಿಯೊಂದೇ ಸಮರ್ಥವಾದುದೆಂಬುದು ಅವನ ಅರಿವಿಗೆ ಬಂದಿತ್ತು, ಅದರ ಆವಿಷ್ಕಾರಕ್ಕಾಗಿ ಆ ಧೀರ ಯುವಕ ಹೋರಾಡಿ ಅಮರನಾದ. ಎಂತೆಂಥವೋ ಪುಡಿ ಮಾತುಗಳನ್ನಾಡಿ ನಿರರ್ಥಕವಾದ ''ಅಭಿವೃದ್ಧಿ''ಯ ಕೆಟ್ಟ ಕನಸುಗಳನ್ನು ನೇಯುವುದನ್ನು ನಿಲ್ಲಿಸುವಂತೆ ಆಗ್ರಹಿಸಿ ಪರ್ಯಾಯ ಹಾದಿಗಾಗಿ ಇಂದಿನ ಯುವಕರು ಹೋರಾಡಬೇಕಾಗಿದೆ. ಚಿದಂಬರಂ-ಮನಮೋಹನ ಸಿಂಗ್ ತಮ್ಮ ನೀಲಿನಕ್ಷೆಯು ಅಭಿವೃದ್ಧಿಗಾಗಿ ಎಂದು ಡಂಗೂರ ಸಾರುತ್ತಿರುತ್ತಾರೆ. ಅದು ಅಭಿವೃದ್ಧಿಯಲ್ಲ, ದೇಶದ ಸಾರ್ವಭೌಮತ್ವದ ನಾಶ ಮತ್ತು ಜನಸಾಮಾನ್ಯರ ಜೀವನಕ್ಕೆ ವಿಷದ ಗಾಳಿ. ಈ ವರ್ಷದ ಸ್ವಾತಂತ್ರ್ಯೋತ್ಸವ ಸಂದರ್ಭದಲ್ಲಿ ಇದನ್ನು ವಿವೇಚಿಸಿಕೊಳ್ಳೋಣ.

* * *

ಒಲಿಂಪಿಕ್ಸ್ ಕ್ರೀಡೆಗಳನ್ನು ಪ್ರಾಚೀನ ಗ್ರೀಸಿನ ವಿಶಿಷ್ಟ ಕೊಡುಗೆಯೆಂದು ಪರಿಗಣಿಸಲಾಗಿದೆ. ಲಂಡನ್ ಕ್ರೀಡೆಗಳ ಮುಕ್ತಾಯ ಸಮಾರಂಭದ ಸಂದರ್ಭದಲ್ಲಿ ಎಲ್ಲ ದೇಶಗಳ ಕ್ರೀಡಾಪಟುಗಳೂ ಒಂದೇ ಗುಂಪಿನಲ್ಲಿ ಕ್ರೀಡಾಂಗಣದ ಮೆರವಣಿಗೆಯಲ್ಲಿ ಪಾಲ್ಗೊಂಡಿದ್ದು ಬಹಳ ಸಂತಸದ ಸಂಗತಿ. ಆಯಾ ದೇಶದ ಬಾವುಟದಡಿ ನಡೆಯುವುದಕ್ಕಿಂತ ವಿಶ್ವದ ಬಾವುಟದಡಿ ಹೆಜ್ಜೆ ಹಾಕಬೇಕೆಂಬ ಯೋಚನೆಯೇ ಮನೋಜ್ಞವಾಗಿದೆ. ಹಾಗೆ ನಡೆದಿದ್ದರಿಂದ ವಿಶ್ವದ ಸಮಸ್ಯೆಗಳು ಮರೆಯಾಗಲಿಲ್ಲ, ನಿಜ; ಆದರೆ ವಿಶ್ವವು ಒಂದಾಗಿ ಮುನ್ನಡೆಯಬೇಕೆಂಬ

(೭ನೇ ಪುಟಕ್ಕೆ)

ತಿಂಗಳ ಪತ್ರಿಕೆ
**ಹೊಸತು**
ನಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ


ಸಂಪುಟ-೧೪ ಸಂಚಿಕೆ-೨ ಸೆಪ್ಟೆಂಬರ್ ೨೦೧೨

**ಗೌರವ ಸಂಪಾದಕ**

ಜಿ. ರಾಮಕೃಷ್ಣ

**ಸಂಪಾದಕ**

ಸಿದ್ದನಗೌಡ ಪಾಟೀಲ

**ಸಹಸಂಪಾದಕರು**

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**

ನವಕರ್ನಾಟಕ ಪ್ರಕಾಶನ

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩



**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**


# ಭ್ರಷ್ಟಾಚಾರದ ವಿರುದ್ಧ ಸಮರ ನಿರಂತರ




ಭ್ರಷ್ಟಾಚಾರ ನಮ್ಮ ವ್ಯವಸ್ಥೆಯಲ್ಲಿ ಭದ್ರವಾಗಿ ಬೇರುಬಿಟ್ಟಿದೆ. ಇದು ಹಿಂದಿನಿಂದ ಬೆಳೆದುಬಂದದ್ದು. ಸ್ವಂತಆಸ್ತಿ, ಹಣ, ಅಧಿಕಾರ ಮನುಕುಲದ ಕೈಸೇರಿದಾಗಿನಿಂದ ಅಕ್ರಮ, ಸ್ವಜನಪಕ್ಷಪಾತ, ಲಂಚಗುಳಿತನ, ಅಧಿಕಾರದ ದುರುಪಯೋಗ ಜೊತೆ ಜೊತೆಯಾಗಿಯೇ ಬೆಳೆದುಬಂದಂಥದ್ದು. ಇದು ಸರ್ವವ್ಯಾಪಿ. ಎಲ್ಲ ದೇಶಗಳಲ್ಲೂ ಇರುವಂಥದ್ದೆ. ವ್ಯತ್ಯಾಸವೆಂದರೆ ಅದು ಯಾವ ಪ್ರಮಾಣದಲ್ಲಿದೆ ಎಂಬುದು. ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಇದನ್ನು ತನ್ನದೇ ಆದ ರೀತಿಯಲ್ಲಿ ಚೆನ್ನಾಗಿ ಪೋಷಿಸುತ್ತ ಬಂದಿದೆ. ನಮ್ಮ ದೇಶದಲ್ಲಿ ಈಗ ಭ್ರಷ್ಟಾಚಾರ ಎನ್ನುವುದು ವಿಪರೀತದ ಮಟ್ಟಕ್ಕೆ ಹೋಗಿದೆ. ಈ ಜಾಡ್ಯವನ್ನು ತೊಲಗಿಸುವುದು ಸುಲಭವಲ್ಲ. ಒಂದು ಕಾನೂನಿನಿಂದಲೋ, ಒಂದು ಹೋರಾಟದಿಂದಲೋ, ಚಳವಳಿಯಿಂದಲೋ ನಿವಾರಿಸಲಾಗದು. ಇದರ ವಿರುದ್ಧ ನಿರಂತರವಾದ ಹೋರಾಟ ನಡೆಸಬೇಕಾಗಿದೆ.

ನಮ್ಮ ವ್ಯವಸ್ಥೆಯ ನಾಲ್ಕೂ ಆಧಾರಸ್ತಂಭಗಳಲ್ಲಿ - ಶಾಸಕಾಂಗ, ಕಾರ್ಯಾಂಗ, ನ್ಯಾಯಾಂಗ ಮಾಧ್ಯಮಗಳಲ್ಲಿ ಅದು ಹರಡಿಕೊಂಡಿರುವುದು ಆತಂಕಕಾರಿ ಸಂಗತಿ. ಸ್ವಾತಂತ್ರ್ಯೋತ್ತರ ಭಾರತದಲ್ಲಿ ಮೊದಲು ಬಹಿರಂಗಕ್ಕೆ ಬಂದ ದೊಡ್ಡ ಭ್ರಷ್ಟಾಚಾರ ಹರಿದಾಸ ಮುಂದ್ರ ಪ್ರಕರಣ. ವಿಮಾ ಕಂಪೆನಿಗಳ ಹಣ ದೋಚಿದ ಉದ್ಯಮಿ ಈತ. ಈ ಪ್ರಕರಣದಲ್ಲಿ ಕೇಂದ್ರ ಹಣಕಾಸಿನ ಸಚಿವರ ತಲೆದಂಡವಾಯಿತು. ಈಗ ಸಾವಿರಾರು ಕೋಟಿ ಅವ್ಯವಹಾರ ನಡೆದರೂ ಕೇಂದ್ರ ಯಾ ರಾಜ್ಯಗಳ ಸಚಿವರು ಕುರ್ಚಿ ಬಿಡುವುದಿಲ್ಲ. ಇರುವ ಕಾನೂನುಗಳ ಅಡಿಯಲ್ಲಿ ಭ್ರಷ್ಟರ ಮೇಲೆ ಕ್ರಮ ಜರುಗಿಸುವುದು ಸಾಧ್ಯವಿದೆ. ಅದಕ್ಕೆ ಆಡಳಿತದಲ್ಲಿರುವ ಸರಕಾರದ ಇಚ್ಛಾಶಕ್ತಿ ಬೇಕು. ಅದಿಲ್ಲದೆ ಎಂಥ ಕಾನೂನು ತಂದರೂ ಅದು ಕಾಗದದ ಮೇಲೇ ಉಳಿಯುತ್ತದೆ. ಇದು ಪರಿಸ್ಥಿತಿ. ಸರಕಾರಿ ಕ್ಷೇತ್ರದಲ್ಲಿ ಸಣ್ಣ ಕೆಲಸವಾಗಬೇಕಾದರೂ ಲಂಚ ಕೊಡಬೇಕಾಗಿರುವುದರಿಂದ ಜನ ಬೇಸತ್ತಿದ್ದಾರೆ, ಆಕ್ರೋಶಗೊಂಡಿದ್ದಾರೆ. ಅದೇ ಸಮಯದಲ್ಲಿ ಒಗ್ಗಿ ಹೋಗಿದ್ದಾರೆ ಎಂದರೆ ಉತ್ಪ್ರೇಕ್ಷೆ ಏನಲ್ಲ.

ಸಮ್ಮಿಶ್ರ ಸರಕಾರದ ವ್ಯವಸ್ಥೆಯಲ್ಲಿ ವಿಪರೀತವಾಗಿ ಹೆಚ್ಚಿರುವ ಸಂದರ್ಭದಲ್ಲಿ ಹುಟ್ಟಿಕೊಂಡದ್ದು 'ಭ್ರಷ್ಟಾಚಾರದ ವಿರುದ್ಧ ಭಾರತ' ಎಂಬ ಚಳವಳಿ. ಮಹಾರಾಷ್ಟ್ರದ ಅಜ್ಞಾತ ಸಾಮಾಜಿಕ ಹೋರಾಟಗಾರ ಅಣ್ಣಾ ಹಜಾರೆ ಅದರ ನಾಯಕ. ಅವರ ಬೆನ್ನಿಗೆ ನಿಂತದ್ದು ಕೆಲವು ಎನ್‌ಜಿಒ ಸಂಘಟನೆಗಳು. ಅವರು ಕಟ್ಟಿಕೊಂಡ ತಂಡದಲ್ಲಿ ಮುಖ್ಯರು ಅರವಿಂದ ಕೇಜ್ರಿವಾಲ್, ಶಾಂತಿಭೂಷಣ್, ಕಿರಣ್ ಬೇಡಿ, ಸಂತೋಷ್ ಹೆಗ್ಡೆ ಮೊದಲಾದವರು. ಅಬ್ಬರದ ಪ್ರಚಾರ ಎಲ್ಲ ಮಾಧ್ಯಮಗಳಿಂದ. ಏಕದಂ ಗಾಂಧಿವಾದಿ ಅಣ್ಣಾ ಹಜಾರೆ ಗಳಿಸಿದ ಜನಪ್ರಿಯತೆ ಅಚ್ಚರಿ ಮೂಡಿಸುವಂಥದ್ದು. ಜನಲೋಕಪಾಲ ಮಸೂದೆಗಾಗಿ ದೆಹಲಿಯಲ್ಲಿ ಉಪವಾಸ ಸತ್ಯಾಗ್ರಹದಿಂದ ಆರಂಭಗೊಂಡ ಚಳವಳಿ ದೇಶಾದ್ಯಂತ ಜನಾಂದೋಳನವಾಗಿ ಹರಡಿತು. ಎಲ್ಲ ವಿರೋಧ ಪಕ್ಷಗಳ, ಮುಖ್ಯವಾಗಿ ಭಾಜಪದ ಬೆಂಬಲ ಬೇರೆ. ದೇಶದ ಮೂಲೆ ಮೂಲೆಗಳಲ್ಲಿ ಅಣ್ಣಾ ಹೋರಾಟಕ್ಕೆ ಒತ್ತಾಸೆಯಾಗಿ ಉಪವಾಸ ಸತ್ಯಾಗ್ರಹ, ಭಾರಿ ಪ್ರದರ್ಶನಗಳು ಕೇಂದ್ರ ಸರಕಾರವನ್ನು ತಲ್ಲಣಗೊಳಿಸಿತು. ಉಪವಾಸ ಕುಳಿತಿದ್ದ ಅಣ್ಣಾ ತಂಡದೊಂದಿಗೆ ಸಂಧಾನ ನಡೆಸಿದ ಸರಕಾರ ಜನಲೋಕಪಾಲ ಮಸೂದೆ ತಯಾರಿಸಲು ಸಮಿತಿಯ ನೇಮಕಕ್ಕೆ ಒಪ್ಪಿತು. ಮೊದಲ ಹಂತದ ಈ ಹೋರಾಟ ಕಂಡ ಯಶಸ್ಸು ಬಹಳ ದಿನ ಉಳಿಯಲಿಲ್ಲ. ಸರಕಾರ ಮಸೂದೆಯನ್ನೇನೋ ಮಂಡಿಸಿದರೂ ಅದು ಅಂಗೀಕೃತವಾಗದೆ ಕೊಳೆಯುತ್ತಿದೆ. ಇದೆಲ್ಲ ಹಳೆಯ ಕತೆ. ಅಣ್ಣಾ ತಂಡದ ಹೋರಾಟ ಅನಂತರ ಹಲವು ತಿರುವುಗಳನ್ನು ಪಡೆದುಕೊಂಡಿತು. ನಿಧಾನವಾಗಿ ಒಂದೊಂದಾಗಿ ರಾಜಕೀಯ ಪಕ್ಷಗಳು ದೂರ ಸರಿದವು. ಭಾಜಪ ಮತ್ತು ಹಿಂದುತ್ವವಾದಿ ಸಂಘಟನೆಗಳನ್ನು ಬಿಟ್ಟು. ಚಳವಳಿ ಒಂದು ಬಗೆಯಲ್ಲಿ ಕಾಂಗ್ರೆಸ್ ವಿರೋಧಿಯಾಗ ತೊಡಗಿದ್ದೇ ಮುಳುವಾಯಿತೇನೋ. ನಾಲ್ಕನೆಯ ಉಪವಾಸದ ಹೊತ್ತಿಗೆ ಅಣ್ಣಾತಂಡದ ಹೋರಾಟಕ್ಕೆ ಜನಬೆಂಬಲ ಕಡಿಮೆಯಾಗ ತೊಡಗಿತು. ಮುಖ್ಯವಾಗಿ ಮಾಧ್ಯಮಗಳಲ್ಲಿ ಪ್ರಚಾರ ಕೂಡ ಕ್ಷೀಣಿಸಿತು. ಹೋರಾಟದ ಬಗ್ಗೆ ತಂಡದಲ್ಲಿ ಬಿರುಕು ಕಾಣಿಸಿಕೊಂಡಿತು.

ಲೋಕಪಾಲ ಮಸೂದೆ ಅಂಗೀಕಾರದಿಂದ ಭ್ರಷ್ಟಾಚಾರ ನಿರ್ಮೂಲವಾಗುತ್ತದೆ ಎಂಬುದಾಗಿ ಚಳವಳಿ ಹುಟ್ಟಿಸಿದ್ದ ಭ್ರಮೆ ಹೆಚ್ಚುಕಾಲ ನಿಲ್ಲಲಿಲ್ಲ. ಅದರಲ್ಲೂ ಚಳವಳಿ ಪಡೆದುಕೊಂಡ ತಿರುವುಗಳು ಜನಸಂಪರ್ಕದಿಂದ ದೂರವಾದುವು. ತಂಡದ ಕೆಲ ಸದಸ್ಯರು ಚುನಾವಣಾ ಕಣಕ್ಕೆ ಇಳಿಯುವುದಕ್ಕೆ ತೋರಿದ ಒಲವು ಬಿರುಕನ್ನು ಇನ್ನಷ್ಟು ಹೆಚ್ಚಿಸಿತು. ನಾಲ್ಕನೆಯ ಬಾರಿ ಉಪವಾಸ ಮುಗಿಸಿದ ಅಣ್ಣಾ ಹಜಾರೆ ಏಕಾಏಕಿ ತಂಡವನ್ನು ವಿಸರ್ಜಿಸಿದ್ದಾರೆ. ಬಿರುಗಾಳಿಯಂತೆ ಎದ್ದ ಚಳವಳಿ ಮಾಧ್ಯಮಗಳ ಪ್ರಚಾರದಿಂದ ವೇಗವಾಗಿ ಜನಪ್ರಿಯತೆ ಗಳಿಸಿ ದೇಶಾದ್ಯಂತ ಹೊಸ ಅಲೆ ಮೂಡಿಸಿದ ಚಳವಳಿ ಅಷ್ಟೇ ವೇಗವಾಗಿ ಅಸ್ತಂಗತವಾಗಿದೆ. ಹಾಗೆಂದ ಮಾತ್ರಕ್ಕೆ ಭ್ರಷ್ಟಾಚಾರದ ವಿರುದ್ಧ ಹೋರಾಟ ಮುಗಿಯಿತೆಂದು ಅರ್ಥವಲ್ಲ. ಮೊದಲೇ ಹೇಳಿರುವ ಹಾಗೆ ಅದು ನಿರಂತರವಾದ್ದು. ಮಾಧ್ಯಮಗಳಲ್ಲಿ ಚರ್ಚೆಗೆ ಗ್ರಾಸವಾಗಿದೆ ಅಣ್ಣಾ ಚಳವಳಿ. ಆತ ಎಡವಿದ್ದೆಲ್ಲಿ ಎಂಬ ಜಿಜ್ಞಾಸೆ. ಒಂದು ಬಗೆಯಲ್ಲಿ ಜಯಪ್ರಕಾಶ ನಾರಾಯಣ್‌ರ ಸಂಪೂರ್ಣ ಕ್ರಾಂತಿಯ ಚಳವಳಿಯನ್ನು ನೆನಪಿಸುತ್ತದೆ ಇದು. ಈ ಹೋರಾಟದ ಫಲಾನುಭವಿ ಹಿಂದುತ್ವವಾದಿ ಪಕ್ಷ ಭಾರತೀಯ ಜನತಾ ಪಾರ್ಟಿ. ಅವಕಾಶ ಮಾಡಿಕೊಟ್ಟದ್ದು ಕಾಂಗ್ರೆಸ್. ಅಣ್ಣಾ ಅಲೆಯಿಂದ ಪ್ರಯೋಜನ ಪಡೆದುಕೊಳ್ಳಲು ಪ್ರಯತ್ನಿಸಿದ ಹಿಂದುತ್ವವಾದಿಗಳಿಗೆ ಭ್ರಮನಿರಸನವಾಗಿರಲು ಸಾಕು. ಅಣ್ಣಾ ಹೋರಾಟದ ಗೊಂದಲದಿಂದ ಸದ್ಯಕ್ಕೆ ಪಾರಾಗಿರುವ ಸರಕಾರ ಭ್ರಷ್ಟಾಚಾರ ತೊಡೆದು ಹಾಕುವುದಕ್ಕೆ ಸೂಕ್ತ ಕ್ರಮಗಳನ್ನು ಕೈಗೊಳ್ಳಬೇಕು. ಪಾರ್ಲಿಮೆಂಟಿನಲ್ಲಿ ಮಂಡಿತವಾಗಿರುವ ಲೋಕಪಾಲ್ ಮಸೂದೆಯನ್ನು ಶೀಘ್ರವಾಗಿ ಅಂಗೀಕರಿಸಬೇಕೆಂದು ಜನ ಒತ್ತಾಯ ತರಬೇಕಾಗಿದೆ. ಭ್ರಷ್ಟಾಚಾರ ಪ್ರಕರಣಗಳನ್ನು ಶೀಘ್ರವಾಗಿ ಇತ್ಯರ್ಥಗೊಳಿಸಲು ನಮ್ಮ ನ್ಯಾಯಾಂಗ ವ್ಯವಸ್ಥೆಯಲ್ಲಿ ಸೂಕ್ತವಾದ ಬದಲಾವಣೆಗಳನ್ನು ತರಬೇಕಾಗಿದೆ. ವಿಶೇಷ ನ್ಯಾಯಾಲಯಗಳ ಸ್ಥಾಪನೆ ಅಗತ್ಯವೆನಿಸಿದೆ. ಈ ಸುಧಾರಣೆಗಳಿಲ್ಲದೆ ಕಾಯಿದೆ ಅಂಗೀಕಾರದಿಂದ ಏನೂ ಪ್ರಯೋಜನವಾಗದು. ಭ್ರಷ್ಟಾಚಾರದಲ್ಲಿ ತೊಡಗಿದ್ದ ರಾಜಕಾರಣಿಗಳು, ಬೇರೆ ಬೇರೆ ನ್ಯಾಯಾಲಯಗಳಲ್ಲಿ ಕಾನೂನು ಹೋರಾಟ ನಡೆಸುತ್ತ ಹಾಯಾಗಿ ತಿರುಗಾಡುತ್ತಿರುವುದನ್ನು ನಾವು ಕಾಣುತ್ತಿದ್ದೇವೆ. ಈ ಸ್ಥಿತಿ ಅಂತ್ಯಗೊಳ್ಳುವವರೆಗೆ ಭ್ರಷ್ಟಾಚಾರದಿಂದ ಮುಕ್ತಿ ಇಲ್ಲ.

ಅಣ್ಣಾ ಹಜಾರೆ ಚಳವಳಿ ಶಿಥಿಲಗೊಳ್ಳುತ್ತಿದ್ದ ಹಾಗೇ ಬಾಬಾ ರಾಮದೇವ್ ಎಂಬ ಯೋಗಿ ಭ್ರಷ್ಟಾಚಾರದ ವಿರುದ್ಧವಾಗಿ ಹುಯಿಲೆಬ್ಬಿಸಿದ್ದಾನೆ. ದೆಹಲಿಯಲ್ಲಿ ನಾಲ್ಕು ದಿನ ಉಪವಾಸ ನಡೆಸಿದ ಈತ ಕ್ರಾಂತಿಯ ಬಗ್ಗೆ ಮಾತನಾಡುತ್ತಿದ್ದಾನೆ. ಅಣ್ಣಾ ತಂಡದ ಜೊತೆ ನಿಕಟ ಸಂಪರ್ಕ ಹೊಂದಿದ್ದ ಈತ ಮಾಧ್ಯಮಗಳ ನೆರವಿನಿಂದ ಮೇಲೆ ಬಂದವನು. ಈತನ ಹಿನ್ನೆಲೆಯೇ ಅನುಮಾನಾಸ್ಪದ. ತೆರಿಗೆ ವಂಚನೆ, ಕಪ್ಪುಹಣ ಸಂಚಯನದ ಹಲವು ಆರೋಪಗಳನ್ನು ಎದುರಿಸುತ್ತಿರುವ ಬಾಬಾ ಹೋರಾಟ ಎಷ್ಟು ಪರಿಣಾಮಕಾರಿ ಎಂದು ನೋಡೋಣ. ಇಂಥ ಹೋರಾಟಗಳು, ಚಳವಳಿಗಳು ಇನ್ನೆಷ್ಟೋ ಬಂದು ಹೋದಾವು. ಆದರೆ ಭ್ರಷ್ಟಾಚಾರದಿಂದ ಮುಕ್ತಿಗೆ ಜನ ಜಾಗ್ರತರಾಗದೆ ಅನ್ಯಮಾರ್ಗವಿಲ್ಲ. ಭ್ರಷ್ಟಾಚಾರದ ವಿರುದ್ಧ ಕೆಳಗಿನಿಂದ ಸುಧಾರಣೆಯಾಗಬೇಕಲ್ಲದೆ, ಮೇಲಿನಿಂದಲ್ಲ, ಔಪಚಾರಿಕವಾದ ಕಾಯಿದೆಯಿಂದಲ್ಲ, ಜನ ಎಚ್ಚರಗೊಳ್ಳಬೇಕು.

## ಯಾರ ಸಂಸ್ಕೃತಿಯ ರಕ್ಷಣೆ ?

**ಭಾ**ರತದಲ್ಲಿ ಕಳೆದ ದಶಕದಲ್ಲಿ ನಡೆದಿರುವಷ್ಟು 'ಸಂಸ್ಕೃತಿ'ಯ ಬಗೆಗಿನ ಚಿಂತನೆ, ಸಂಶೋಧನೆ, ಚಳುವಳಿ, ಹೋರಾಟ – ಇವು ಬೇರೆ ಯಾವ ಸಂದರ್ಭದಲ್ಲೂ ನಡೆದಿಲ್ಲ. ಸಂಸ್ಕೃತಿಯೆನ್ನುವುದು ಒಂದು ಜೀವನಕ್ರಮವೆನ್ನುವುದಾದರೆ ಈ ನಾಡಿನ ಜೀವನಕ್ರಮದಲ್ಲಿ ಹೆಣ್ಣಿನ ಪಾತ್ರವೇನಾಗಿದೆ ಎಂಬುದಕ್ಕೆ ಇತ್ತೀಚಿನ ಕೆಲವು ಘಟನೆಗಳನ್ನು ಗಮನಿಸಿದಾಗ ನಿಜಕ್ಕೂ ಆಶ್ಚರ್ಯ, ಗಾಬರಿ, ಆತಂಕ ನಮ್ಮೆಲ್ಲರನ್ನು ಕಾಡುತ್ತದೆ. ಪೇಜಾವರ ಮಠದ ಸ್ವಾಮೀಜಿಯಿಂದ ಹಿಡಿದು ಕನಿಷ್ಠ ಸಾಮಾನ್ಯನವರೆಗೂ ಸ್ವದೇಶಿ ಸಂಸ್ಕೃತಿಯ ಉದ್ಧಾರದ ಮಾತು ಕೇಳಿಬರುತ್ತಿದೆ. ಹಾಗಾದರೆ ಈಗ ಆಗಬೇಕಿರುವುದು ಯಾರ, ಯಾವ ಸಂಸ್ಕೃತಿಯ ರಕ್ಷಣೆ ? ಹೇಗೆ ಮತ್ತು ಯಾರಿಂದ ರಕ್ಷಿಸಬೇಕು ? ಎಂಬುದಷ್ಟೇ ಈಗ ನಮ್ಮ ಮುಂದಿರುವ ಪ್ರಶ್ನೆಗಳು.

ಎರಡು ತಿಂಗಳ ಹಿಂದೆ ಗುವಾಹಟಿಯಲ್ಲಿ ಅಪ್ರಾಪ್ತ ವಯಸ್ಸಿನ ಹೆಣ್ಣುಮಗಳೊಬ್ಬಳನ್ನು ೧೫-೨೦ ಪುರುಷರು ಬೆತ್ತಲು ಗೊಳಿಸಲು ಯತ್ನಿಸಿದ ಪ್ರಕರಣ ಮಾಧ್ಯಮದಲ್ಲಿ ಅತಿ ರಂಜಿತವಾಗಿ ಪ್ರದರ್ಶಿತವಾಗಿ ಎಲ್ಲರ ಎದೆ ನಡುಗಿಸಿತು. ಅದಾದ ನಂತರ ಮಂಡ್ಯದ ಬಳಿ ರೈಲಿನಲ್ಲಿಯೇ ಹೆಣ್ಣನ್ನು ಮಾರಾಟಕ್ಕೆ ಕರೆದು, ಅವಳು ಒಪ್ಪದ್ದರಿಂದ, ಅವಳ ಮೇಲೆ ಕೈಮಾಡಿ ಅವಳನ್ನು ರೈಲಿನಿಂದ ಹೊರಕ್ಕೆ ತಳ್ಳಿದ ಘಟನೆ ನಡೆದಿದೆ. ಇದಕ್ಕೆಲ್ಲಾ ಕಳಶವಿಟ್ಟಂತೆ ಜುಲೈ ೨೮ರಂದು ಮಂಗಳೂರಿನ ಹೊರವಲಯದಲ್ಲಿರುವ ಖಾಸಗಿ 'ಹೋಂ ಸ್ಟೇ'ನಲ್ಲಿ ಹುಟ್ಟಿದ ಹಬ್ಬ ಆಚರಿಸುತ್ತಿದ್ದ ಕಾಲೇಜು ವಿದ್ಯಾರ್ಥಿಗಳ ಮೇಲೆ ಹಿಂದೂ ಜಾಗರಣ ವೇದಿಕೆ ಕಾರ್ಯಕರ್ತರು ನಡೆಸಿರುವ ದೈಹಿಕ ಹಲ್ಲೆ ಅತ್ಯಂತ ಹೇಯವಾದುದು. ಎಲ್ಲ ಮಾನವ ಸಭ್ಯತೆಯ ಗಡಿರೇಖೆಗಳನ್ನು ಮೀರಿ ನಿಂತದ್ದು, ಅಲ್ಲಿದ್ದ ಹೆಣ್ಣುಮಕ್ಕಳನ್ನು ಅವರ ಬಟ್ಟೆ ಹಿಡಿದು ಎಳೆದಾಡಿ, ಅವರ ಮೇಲೆ ನಡೆಸಿರುವ ದುರ್ವರ್ತನೆಯಲ್ಲದೆ, ವಿದ್ಯಾರ್ಥಿಗಳನ್ನು ಹಿಡಿದು ಅಟ್ಟಾಡಿಸಿಕೊಂಡು ಹೋಗಿ ಹೊಡೆದಿರುವುದು, ಬ್ಲೇಡಿನಿಂದ ಗಾಯ ಮಾಡಿರುವುದು – ಇವೆಲ್ಲಾ ಪ್ರಜಾಪ್ರಭುತ್ವದ ಅಣಕವೇ ಸರಿ. ಇದೊಂದು ಫ್ಯಾಸಿಸ್ಟ್ ಶಕ್ತಿಯ ರುದ್ರನರ್ತನ. ಭಾರತೀಯ ಸಂಸ್ಕೃತಿಯನ್ನು ನಾಶಮಾಡುವ ರೇವ್ ಪಾರ್ಟಿಗಳನ್ನು ಹತ್ತಿಕ್ಕಲು ಈ ರೀತಿಯ 'ನೈತಿಕ ಪೊಲೀಸ್‌ಗಿರಿ'ಯನ್ನು ನಡೆಸುತ್ತಿದ್ದೇವೆಂದು ಹೇಳಿಕೊಂಡಿರುವ ಈ ದಾಳಿಕೋರರ 'ಸಂಸ್ಕತಿ'ಯ ವ್ಯಾಖ್ಯಾನದ ಬಿಸಿಕೆಂಡದಿಂದ ತಪ್ಪಿಸಿಕೊಳ್ಳುವುದೆಂತು ? ಮೂರು ವರ್ಷಗಳ ಹಿಂದೆಯೂ ಇದೇ ರೀತಿ ಮಂಗಳೂರಿನಲ್ಲಿ ಪಬ್ ಮೇಲೆ ದಾಳಿ ಮಾಡಿದ ಶ್ರೀ ರಾಮ ಸೇನೆಯ 'ಗೂಂಡಾ'ಗಳು ತಮ್ಮ ಕೆಲಸ ಹಿಂದೂ ಸಂಸ್ಕೃತಿಯ ರಕ್ಷಣೆಗಾಗಿ ನಡೆಸಿದ್ದು, ಎಂದು ಹೇಳಿಕೊಂಡಿದ್ದರು. ಇವೆಲ್ಲಾ 'ಭಾರತೀಯ ಸಂಸ್ಕೃತಿ' ಎಂದರೆ ಏನು ಎಂಬ ವಿಚಾರವಾಗಿ ನಡೆಸಲಾಗುತ್ತಿರುವ ರಾಜಕೀಯ ಹೋರಾಟದ ರೂಪುರೇಷೆಯ ಭಾಗವಾಗಿಯೇ ಇದೆ. ಹಾಗೂ ಇಂತಹ ಸಂಸ್ಕೃತಿಯ ವ್ಯಾಖ್ಯಾನಗಳನ್ನು ಮತಗಟ್ಟೆಯ ಆಕರ್ಷಣೆಗಾಗಿಯೇ ಮಾಡಿದಂತಹವುಗಳು ಎಂಬುದರಲ್ಲಿ ಅನುಮಾನವೇ ಇಲ್ಲ. ಅದೇನೇ ಇರಲಿ, ಈ ಪ್ರಕರಣವನ್ನು ಬಹಿರಂಗವಾಗಿ ಖಂಡಿಸುತ್ತಿರುವವರು ಮತ್ತು ಖಂಡಿಸುವ ನಾಟಕ ಮಾಡುವವರೂ ಕೂಡ 'ಭಾರತೀಯ ಸಂಸ್ಕೃತಿ'ಯ ಬಗ್ಗೆ ತಮ್ಮದೇ ವ್ಯಾಖ್ಯಾನ ನೀಡುತ್ತಿದ್ದಾರೆ.

ಈ ಎಲ್ಲ ಘಟನೆಗಳು ಕಳೆದ ದಶಕಗಳಲ್ಲಿ ಪ್ರಖರವಾಗುತ್ತಿರುವ ಜಾಗತೀಕರಣ ಮತ್ತು ಅದರಿಂದಾಗಿ ಹೆಚ್ಚುತ್ತಿರುವ ಹಿಂದುತ್ವದ ರಾಜಕಾರಣದ ಪರಿಣಾಮವೇ ಆಗಿದೆ ಎಂಬುದು ಇಂದು ಸ್ಪಷ್ಟವಾಗಿ ಅನಾವರಣವಾಗುತ್ತಿದೆ. ಇದರ ಛಾಯೆಯು ಮಂಗಳೂರಿಗಷ್ಟೇ ಸೀಮಿತವಲ್ಲ. ಇದು ಇಡೀ ದೇಶದ ನಕಾಶೆಯಲ್ಲಿ ವ್ಯಾಪಕವಾಗಿ ಹರಡಿರುವುದನ್ನು ಕಾಣಬಹುದು. ಕೆಲವು ತಿಂಗಳ ಹಿಂದೆ ಹರಿಯಾಣದಲ್ಲಿ ನಲವತ್ತು ವರ್ಷ ವಯಸ್ಸಿನ ಕೆಳಗಿನ ಮಹಿಳೆಯರು ಸಂಜೆಯ ನಂತರ ಹೊರಗೆ ಹೋಗುವಂತಿಲ್ಲ, ಎಂದು ಅಲ್ಲಿನ ಕಾಫ್ ಸಮಿತಿಗಳು ಫತ್ವಾ ಹೊರಡಿಸಿವೆ. ಕಾಶ್ಮೀರದಲ್ಲೂ ತಲೆಗೆ ಸ್ಕಾರ್ಫ್ ಇಲ್ಲದೆ ಹೊರಗೆ ಬಂದವರಿಗೆ ಶಿಕ್ಷೆ ಕಾದಿದೆ. ಈಗಷ್ಟೇ ಜಾರ್ಖಂಡ್‌ನ ವಿಮುಕ್ತಿ ಸಂಘದವರು ಹೆಣ್ಣುಮಕ್ಕಳು ಜೀನ್ಸ್ ತೊಟ್ಟರೆ, ಅವರ ಮೇಲೆ ಆ್ಯಸಿಡ್ ಎಸೆಯುವುದಾಗಿ ಬೆದರಿಕೆ ಹಾಕಿದ್ದಾರೆ. ಇದಕ್ಕೆ ಕೊನೆಯೇ ಇಲ್ಲ. ಈ ಸಾಂಕ್ರಾಮಿಕ ಕಾಯಿಲೆ ಹಬ್ಬಲು ಜಾಗತೀಕರಣದ ತೈಲ ಸಾಥ್ ನೀಡುತ್ತಿದೆ. ಇಂದು ದೇಶದಲ್ಲಿ ಕೋಮುವಾದಿ ರಾಜಕಾರಣವೇ ಇಡಿಯಾಗಿ ಆವರಿಸಿದೆ. ಸರ್ಕಾರ, ಶಿಕ್ಷಣ, ಕಲೆ – ಎಲ್ಲದರಲ್ಲೂ ಇದರ ವಾಸನೆಯು ವ್ಯಾಪಿಸಿರುವುದರಿಂದ ಶಿವಸೇನೆ ಯವರಿರಲಿ, ಭಜರಂಗಬಲದವರಿರಲಿ, ಮುಲ್ಲಾಗಳೇ ಆಗಲಿ, ಎಲ್ಲರೂ ತಮ್ಮ ನೈತಿಕ ಪೊಲೀಸ್‌ಗಿರಿಯ ಲಾಠಿಯನ್ನು ಅವರ ಸಂಸ್ಕೃತಿಯ ವ್ಯಾಖ್ಯಾನಕ್ಕಾಗಿ ಬಳಸು ತ್ತಿದ್ದಾರೆ. ಆದ್ದರಿಂದಲೇ ಅವರು ಉಚ್ಚರಿಸುತ್ತಿರುವ 'ಸಂಸ್ಕೃತಿ' ಸಂಕೀರ್ಣವಷ್ಟೇ ಅಲ್ಲ, ದುರುದ್ದೇಶಪೂರಿತವೂ ಹೌದು.

ಜಾಗತೀಕರಣದ ಸಕಲ ಲಾಭವನ್ನು ಅನುಭವಿಸುತ್ತಲೇ ಸರಕು ಸಂಸ್ಕೃತಿಯ ದುಷ್ಪರಿಣಾಮದ ಬಗ್ಗೆ ಗಂಟಲು ಹರಿದು ಕೊಳ್ಳುತ್ತಾ ನಮ್ಮ ದೇಶಿ ಸಂಸ್ಕೃತಿಯ ನಾಶದ ಬಗ್ಗೆ ಉನ್ಮಾದದಿಂದ ಧ್ವನಿಯೆತ್ತುವ ಸಂಘಪರಿವಾರದ ದೇಶಪ್ರೇಮಿಗಳಿಗೆ ಸದನದಲ್ಲಿ ಬ್ಲೂ ಫಿಲಂ ನೋಡುವ ಸಚಿವರು, ಅತ್ಯಾಚಾರ ಮಾಡಿ ಸಿಕ್ಕುಬಿದ್ದಿರುವ ಶಾಸಕರು, ಭ್ರಷ್ಟಾಚಾರದಲ್ಲಿ ಮುಳುಗೇಳು ತ್ತಿರುವ ಅವರ ಮಂತ್ರಿ ಮಹೋದಯರ ಕೃತ್ಯದಿಂದ 'ಸಂಸ್ಕೃತಿಯ ನಾಶ'ವಾಗುತ್ತಿದೆಯೆಂದು ಅನಿಸುತ್ತಿಲ್ಲವೆ ? ನಮ್ಮ ಸಂಸ್ಕೃತಿಯ ಕಪ್ಪು ಚುಕ್ಕೆಗಳು ಹಲವಾರಿವೆ: ವರದಕ್ಷಿಣೆ, ವಧೂದಹನ, ಭ್ರೂಣಹತ್ಯೆ, ದೇವದಾಸಿ ಪದ್ಧತಿ – ಇವೆಲ್ಲವನ್ನೂ ನಿವಾರಿಸುವ ಪ್ರಯತ್ನ ಮಾಡದೆ, ಯಾರೋ ಎಷ್ಟು ಬಟ್ಟೆ ಹಾಕಿಕೊಂಡರು ? ಏಕೆ ಪಾರ್ಟಿ ಮಾಡಿದರು ? ಎನ್ನುವ ನಗಣ್ಯ ವಿಷಯಗಳ ಬಗ್ಗೆ ತಲೆಕೆಡಿಸಿಕೊಳ್ಳುವುದನ್ನು ಮೊದಲು ನಿಲ್ಲಿಸಲಿ.


ತಿಂಗಳ ಪತ್ರಿಕೆ
**ಹೊಸತು**
ನಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೬೭

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು - ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೦೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೭

ಈ ದುಷ್ಕೃತ್ಯಗಳ ಸರಣಿ ಎಲ್ಲ ಪ್ರಜ್ಞಾವಂತರ ನೆಮ್ಮದಿಯನ್ನು ಕದಡಿದೆ. ನಾಳೆಗಳನ್ನು ಅಂಧಕಾರಗೊಳಿಸಿವೆ. ಹಿಂದುತ್ವದ ಕುರುಡು ಸಮೂಹ ಸನ್ನಿಯಿಂದ ಮತಗಳಿಕೆಯ, ಅಧಿಕಾರಲಾಲಸೆಯ ಹುಚ್ಚು ಹತ್ತಿಸಿಕೊಂಡವರ ಕುತಂತ್ರಗಳನ್ನು ಇನ್ನಾದರೂ ದಮನಕ್ಕೊಳಗಾದ ದಲಿತರು, ಮಹಿಳೆಯರು, ಅಲ್ಪಸಂಖ್ಯಾತರು ಅರ್ಥಮಾಡಿಕೊಂಡು ತಮ್ಮ ಹೋರಾಟದಿಂದ, ರಾಜಕೀಯ ಪ್ರಜ್ಞೆಯ ನಿರ್ಧಾರಗಳಿಂದ ಉತ್ತರ ಕೊಡುವ ಸಕಾಲ ಈಗ ನಮ್ಮ ಮುಂದಿದೆ.

## ಪ್ರೀತಿ ಇದೆ, ವಿಶ್ವಾಸ ಕೊಡಬೇಕಿದೆ

ಈ ತಿಂಗಳು ಕರ್ನಾಟಕದಲ್ಲಾದ ಈಶಾನ್ಯ ಭಾರತದ ಜನರ ವಲಸೆ ಘಟನೆ ಅತ್ಯಂತ ನೋವಿನ ಸಂಗತಿ. ಸಾವಿರ ಸಾವಿರ ಜನ ರೈಲ್ವೆ ನಿಲ್ದಾಣದಲ್ಲಿ ಸೇರಿ ತಮ್ಮ ತಾಯಿನಾಡಿಗೆ ಹೊರಟು ನಿಂತ ದೃಶ್ಯ, ಅವರ ಕಣ್ಣುಗಳಲ್ಲಿನ ಭಯ, ಆತಂಕ ಭಾರತದ ಏಕತೆಗೆ ಸವಾಲನ್ನೆಸೆಯುತ್ತಿದ್ದವು. ಒಂದೇ ದೇಶದ ಜನ ಒಂದು ಕಡೆಯಿಂದ ಇನ್ನೊಂದು ಕಡೆಗೆ ಬಂದು ಪರದೇಶಕ್ಕೆ ಬಂದವರಂತೆ ಅನಾಥ ಭಾವನೆ ಹೊತ್ತು ಮರಳಿ ತಮ್ಮನಾಡಿಗೆ ದಿಢೀರನೆ ಹೊರಟು ನಿಂತದ್ದು ಪ್ರಜ್ಞಾವಂತರು ಆಘಾತ ಪಡುವಂತಹ ಘಟನೆ. ಅವರು ಈಶಾನ್ಯ ರಾಜ್ಯಗಳಿಂದ ಕರ್ನಾಟಕಕ್ಕೆ ಬಂದದ್ದು ವಲಸೆಯಲ್ಲ, ವಾಸ್ತವವಾಗಿ ಅವರು ಇಲ್ಲಿಂದ ಹೋದದ್ದು ವಲಸೆ. ಬೆಂಗಳೂರು, ಕರ್ನಾಟಕ ಶಾಂತಿಪ್ರಿಯರ ನಾಡು ಎಂದೇ ಹೆಸರು ಪಡೆದಿದೆ. ಈಶಾನ್ಯ ಭಾರತ, ಉತ್ತರ ಭಾರತದಿಂದ ಅದೇ ಆಗ ಹತ್ತನೇ ಕ್ಲಾಸು, ಹನ್ನೊಂದನೇ ಕ್ಲಾಸು ಮುಗಿಸಿದ ಮಕ್ಕಳನ್ನು, ಅದರಲ್ಲೂ ಹೆಣ್ಣುಮಕ್ಕಳನ್ನು ಅವರ ತಂದೆ ತಾಯಿಗಳೇ ಕರೆತಂದು ಬೆಂಗಳೂರಿನ ಕಾಲೇಜುಗಳಲ್ಲಿ ಪ್ರವೇಶ ಪಡೆದು ಹಾಸ್ಟೆಲ್‌ಗಳಲ್ಲಿ ಬಿಟ್ಟು ಹೋಗುವಾಗ ಅವರಿಗೆ ನಮ್ಮ ರಾಜ್ಯದ ಮೇಲೆ, ಇಲ್ಲಿನ ಜನತೆಯ ಮೇಲೆ ಅಪಾರವಾದ ನಂಬಿಕೆ, ವಿಶ್ವಾಸವಿರುತ್ತಿತ್ತು. ಇಂಥ ನಂಬಿಕೆಯನ್ನು ಹುಟ್ಟಿಸುವಲ್ಲಿ ಆಯಾ ಕಾಲೇಜು ಮತ್ತು ನಮ್ಮ ಸರಕಾರಗಳಿಗಿಂತ ಈ ರಾಜ್ಯದ ಜನತೆ ಅದರಲ್ಲೂ ಬೆಂಗಳೂರಿನ ಜನತೆ ಮಹತ್ವದ ಪಾತ್ರವಹಿಸಿದ್ದಾರೆ.

ಭಾಷಾ ವಿಜ್ಞಾನಿಯೊಬ್ಬರು ಕರ್ನಾಟಕ ಜನತೆಯ ಬಗ್ಗೆ ಹೇಳುವಾಗ; ಕನ್ನಡ ಭಾಷೆಬಾರದ ಯಾವುದೇ ದೇಶ ವಿದೇಶದ ವ್ಯಕ್ತಿಗಳು ಇಲ್ಲಿಗೆ ಬಂದು ಕನ್ನಡೇತರ ಭಾಷೆಯಲ್ಲಿ ತಮಗೆ ಬೇಕಾದ ಮಾಹಿತಿಯನ್ನೋ, ವಿಳಾಸವನ್ನೋ ಕೇಳಿದರೆ ಇಲ್ಲಿಯ ಜನ ಪ್ರೀತಿಯಿಂದಲೇ ತಮಗೆ ತಿಳಿದ ಮಟ್ಟಿಗೆ ಅವರದೇ ಭಾಷೆಯಲ್ಲಿ ಅಥವಾ ತಮ್ಮದೇ ಭಾಷೆಯಲ್ಲಿ ಅವರಿಗೆ ಕೇಳಿದ ಮಾಹಿತಿ ಒದಗಿಸುವ ಪ್ರಯತ್ನ ಮಾಡುತ್ತಾರೆ. ಮಾಹಿತಿ ಕೇಳಿದವರಿಗೆ ತಾನು ಪರಭಾಷೆಯವನಿರಬಹುದು ಆದರೆ ಪರಕೀಯನೆಂಬ ಭಾವನೆ ಬರುವುದಿಲ್ಲ ಎಂಬ ಮಾತುಗಳನ್ನು ಈ ರಾಜ್ಯದ ಬಗ್ಗೆ ಹೆಮ್ಮೆಯಿಂದ ಹೇಳುತ್ತಾರೆ. ಆದರೆ ಜನ ತೋರಿಸಿದ ಈ ಪ್ರೀತಿಯನ್ನು, ಭಯದಿಂದ ಕಂಗೆಟ್ಟು ಹೊರಟ ಈಶಾನ್ಯ ರಾಜ್ಯದ ಜನತೆಗೆ ನಮ್ಮ ಸರಕಾರ ತೋರಿಸಲಾಗಲಿಲ್ಲ. ಅಂತರ್ಜಾಲ ಹಾಗೂ ಮೊಬೈಲ್‌ಗಳಲ್ಲಿ ಬಂದ ಭಯದ ಸುದ್ದಿಗಳನ್ನು ನೋಡಿ ಜೀವಭಯದಿಂದ ಹೊರಟುನಿಂತ ಜನರಿಗೆ ನಗರದ ರೈಲು ನಿಲ್ದಾಣದಲ್ಲಿ ಹೋಗಿ ಸರಕಾರದ ಪ್ರತಿನಿಧಿಗಳು ಹೇಳಿದ್ದೇನು ? ಈಶಾನ್ಯ ರಾಜ್ಯದ ಜನರ ಪ್ರತಿನಿಧಿಗಳಿಗೆ ನಮ್ಮ ರಾಜ್ಯದ ಮುಖ್ಯಮಂತ್ರಿ ಕೊಟ್ಟ ಭರವಸೆ ಏನು ? ಬರೀ ಬಾಯಿ ಮಾತಿನ ಉಪಚಾರ. ರೈಲ್ವೆ ನಿಲ್ದಾಣದಲ್ಲಿ ಒಂದಿಬ್ಬರು ಸಚಿವರು ಹೋಗಿ 'ನೀವು ಹೋಗಬೇಡಿ, ನೀವು ಹೋಗಬೇಡಿ' ಎಂದು ಮನವಿ ಮಾಡಿದರು. ಮುಖ್ಯಮಂತ್ರಿಗಳು ಪೊಲೀಸ್ ರಕ್ಷಣೆಯ ಭರವಸೆ ಕೊಟ್ಟರು. ಮುಖ್ಯಮಂತ್ರಿಗಳ ಭರವಸೆ ಮಾತ್ರವಲ್ಲ ಅಸ್ಸಾಂ ರಾಜ್ಯದ ಸಚಿವರು ಬಂದು ತಡೆಯಲು ಯತ್ನಿಸಿದರೂ ಈಶಾನ್ಯ ರಾಜ್ಯದ ಜನ ತಮ್ಮ ತಾಯ್ನಾಡಿನ ಪ್ರಯಾಣ ನಿಲ್ಲಿಸಲಿಲ್ಲ. ಸರಕಾರದ ಬಾಯಿಮಾತಿನ ಭರವಸೆ ಯಾರಿಗೂ ನಂಬಿಕೆ ತರಲಿಲ್ಲ. ಬದಲಾಗಿ ಸರಕಾರ ರಾಜ್ಯದಲ್ಲಿರುವ ಈಶಾನ್ಯ ರಾಜ್ಯದ ಜನರಿಗೆ ಒಂದೊಂದು ನಗರದಲ್ಲಿ ಒಂದೊಂದು ಕಡೆ ಸುರಕ್ಷಾ ಶಿಬಿರಗಳನ್ನು ಮಾಡಿ ಅವರನ್ನೆಲ್ಲ ಒಂದು ವಾರದ ಮಟ್ಟಿಗೆ ರಕ್ಷಿಸುವ, ಅವರಿಗೆ ಊಟ, ವಸತಿ ಒದಗಿಸುವ ಕೆಲಸ ಮಾಡಿದ್ದರೆ ಖಂಡಿತಾ ಆ ಜನರಿಗೆ ನಮ್ಮ ಸರಕಾರದ ಮೇಲೆ ಭರವಸೆ ಬರುತ್ತಿತ್ತು. ಇದು ನಮ್ಮ ಸರಕಾರದ ಜವಾಬ್ದಾರಿಯಾಗಿತ್ತು. ಆದರೆ ಭಿನ್ನಮತ ತಡೆಯಲು ನೂರಾರು ಶಾಸಕರನ್ನು ರೆಸಾರ್ಟ್‌ಗಳಿಗೊಯ್ದು ಕೋಟ್ಯಾಂತರ ಖರ್ಚು ಮಾಡುವ ನಮ್ಮ ಆಡಳಿತ, ವಿರೋಧ ಪಕ್ಷಗಳಿಗೆ ಸಾಮಾನ್ಯ ಜನರ ಬಗ್ಗೆ ಇಂಥ ಆಲೋಚನೆಗಳೇ ಬರುವುದಿಲ್ಲ. ಸರಕಾರವೇನಾದರೂ ಈಶಾನ್ಯ ರಾಜ್ಯದ ಜನರನ್ನು ರಕ್ಷಿಸಲು ತಾತ್ಕಾಲಿಕವಾದರೂ ಒಂದು ವ್ಯವಸ್ಥೆ ಮಾಡಿ ಅವರಲ್ಲಿ ಒಂದು ಆತ್ಮವಿಶ್ವಾಸ ಮೂಡಿಸಿದ್ದರೆ ಕರ್ನಾಟಕದ ಜನತೆಗೆ ಒಂದು ಧನ್ಯತಾಭಾವ ಮೂಡುತ್ತಿತ್ತು. ಮನೆಗೆ ಬಂದವರು ಭಯಪಟ್ಟು ಓಡಿಹೋಗುವುದನ್ನು ಅಸಹಾಯಕರಾಗಿ ನೋಡುವ, ಓದುವ ಅತಂತ್ರಸ್ಥಿತಿಗೆ ಈ ಸರಕಾರ ನಮ್ಮನ್ನು ತಳ್ಳಿತು. ಆರು ಕೋಟಿ ಜನಸಂಖ್ಯೆಯ ನಮ್ಮ ನಾಡಿನಲ್ಲಿ ಆ ಪುಟ್ಟ ರಾಜ್ಯಗಳ ಜನತೆಗೆ ಕನಿಷ್ಠ ರಕ್ಷಣೆಯನ್ನೂ ಕೊಡಲಾಗಲಿಲ್ಲ ಎಂಬ ನೋವು ನಮ್ಮನ್ನೆಲ್ಲ ಕಾಡುತ್ತಿದೆ. ನಮ್ಮ ನೋವು ಇರಲಿ, ರೈಲಿನಲ್ಲಿ ಕುರಿಗಳಂತೆ ತುಂಬಿ ತುಳುಕಿಹೋದ ಆ ಜನತೆ ತಮ್ಮ ನಾಡು ಮುಟ್ಟುವ ತನಕ ಅನುಭವಿಸಿದ ಯಾತನೆ ಎಂತಹದು. ಮಕ್ಕಳು, ಹೆಂಗಸರು, ವೃದ್ಧರು ಸಾವಿರಾರು ಜನ ಏಕಕಾಲಕ್ಕೆ ನುಗ್ಗಿ ಹೋಗುವ ದೃಶ್ಯ, ರಸ್ತೆಯಲ್ಲಿಯೇ ಕೆಲವರು ಹೆಣವಾದ ಸುದ್ದಿಗಳು ಇವೆಲ್ಲ ಭಾರತದ ಏಕತೆಯನ್ನು ಅಣಕಿಸುವ, ಭವಿಷ್ಯದಲ್ಲಿ ಐಕ್ಯತೆಗೆ ಕುತ್ತು ತರುವ ವಿಷಯಗಳು. ಆದರೆ ಇದು ನಮ್ಮ ಸರಕಾರಕ್ಕೆ ಅರ್ಥವಾಗಬೇಕಿತ್ತು. ಆದರೆ ಅರ್ಥವಾದರೂ ನಮ್ಮ ರಾಜ್ಯದ ಬಿ.ಜೆ.ಪಿ. ಸರಕಾರ ಬೇರೇನನ್ನೂ ಮಾಡುತ್ತಿರಲಿಲ್ಲ, ಕಾರಣ ಇಂಥ ಸಂದರ್ಭದಲ್ಲಿಯೂ ಅವರಿಗೆ ರಾಜಕಾರಣ ಬೇಕಿತ್ತು.

ಅಸ್ಸಾಂನಲ್ಲಿ ನಡೆದ ಕೋಮುಗಲಭೆಯ ನಂತರ ನಡೆದ ಬೆಳವಣಿಗೆಯಲ್ಲಿ ಈ ಎಲ್ಲ ಘಟನಾವಳಿಗಳು ಜರುಗಿದವು. ಕರ್ನಾಟಕ, ಮಹಾರಾಷ್ಟ್ರ, ಆಂಧ್ರಪ್ರದೇಶದಿಂದ ಈಶಾನ್ಯ ರಾಜ್ಯದ ಪ್ರಜೆಗಳು ತಮ್ಮ ನಾಡಿಗೆ ಧಾವಿಸುವ ಸಂದರ್ಭದಲ್ಲಿ ಅಂತರ್ಜಾಲ ಹಾಗೂ ಮೊಬೈಲ್ ಸಂದೇಶಗಳನ್ನು ಹರಡುತ್ತಿರುವವರು ಯಾರು ಎಂದು ತಿಳಿದಿರಲಿಲ್ಲ. ಈಗ ಪಾಕಿಸ್ತಾನ ಮೂಲದಿಂದ ಅವು ಹರಡಿವೆ ಎಂದು ಕೇಂದ್ರ ಸರಕಾರ ಹೇಳಿದೆ. ಆದರೆ ಅಂದು ಬೆಂಗಳೂರಿನಿಂದ ಈಶಾನ್ಯ ಭಾಗದ ಕಡೆಗೆ ಹೊರಡುವವರಿಗೆ ರೈಲು ವ್ಯವಸ್ಥೆಯ ಉಸ್ತುವಾರಿಯನ್ನು ಸರಕಾರವೇ ವಹಿಸಿಕೊಂಡಿತ್ತು. ಇನ್ನೊಂದು ಕಡೆ ಎ.ಬಿ.ವಿ.ಪಿ. ಮತ್ತು ಆರ್.ಎಸ್.ಎಸ್.ನವರು ಊಟದ ವ್ಯವಸ್ಥೆ ಮಾಡಿದರು. ಸರಕಾರ ನಡೆಸುವ ಬಿ.ಜೆ.ಪಿ. ಅವರನ್ನು ರವಾನಿಸುವ ಕೆಲಸ ಮಾಡಿದರೆ, ಬಿ.ಜೆ.ಪಿ.ಯ ಅಂಗಸಂಸ್ಥೆಗಳು ಊಟದ ವ್ಯವಸ್ಥೆಯನ್ನು ಮಾಡಿದವು. ಇದನ್ನು ಸಹಜವೆನ್ನಬಹುದು. ಆದರೆ ಅದೇ ಸಂದರ್ಭದಲ್ಲಿ ಮುಸ್ಲಿಂ ವಿದ್ಯಾರ್ಥಿ ಸಂಘಟನೆಯ ಕಾರ್ಯಕರ್ತರು ರೈಲ್ವೆ ನಿಲ್ದಾಣಕ್ಕೆ ತೆರಳಿ ಈಶಾನ್ಯ ರಾಜ್ಯದ ಜನರಿಗೆ ಆಹಾರ ಮತ್ತು ಸುರಕ್ಷೆಯ ಭರವಸೆ ನೀಡಲು ಹೋದರೆ ಅವರನ್ನು ತಕ್ಷಣ ಬಂಧಿಸಿ ಕರೆದೊಯ್ಯಲಾಯಿತು. ಕಾರಣ ಮುಸ್ಲಿಂ ವಿದ್ಯಾರ್ಥಿ, ಯುವಕರು ಬಂದು ಅಲ್ಲಿ ಸೌಹಾರ್ದ ವಾತಾವರಣ ಉಂಟುಮಾಡುವುದು ಆರ್.ಎಸ್.ಎಸ್. ಮತ್ತು ಎ.ಬಿ.ವಿ.ಪಿ.ಗಳಿಗೆ ಬೇಡವಾಗಿತ್ತು. ಇದಕ್ಕೆ ಇನ್ನೇನೋ ಕಾರಣವನ್ನು ಸರಕಾರ ಕೊಡಬಹುದು, ಆದರೆ ದಿನಾಂಕ ೧೮-೦೮-೨೦೧೨ರಂದು ಸಂಜೆ ೪.೩೦ಕ್ಕೆ ಸಿ.ಪಿ.ಐ., ಸಿ.ಪಿ.ಎಂ., ದಲಿತ ಸಂಘರ್ಷ ಸಮಿತಿ, ಟಿಪ್ಪು ವೇದಿಕೆ ಮುಂತಾದ ಪ್ರಗತಿಪರ ಸಂಘಟನೆಗಳ ಕಾರ್ಯಕರ್ತರು ಎಂ. ಜಿ. ರಸ್ತೆಯ ಗಾಂಧಿ ಮೂರ್ತಿಯ ಸ್ಥಳದಿಂದ ಕಾಲ್ನಡಿಗೆಯ ಮೂಲಕ ಸೌಹಾರ್ದ ಯಾತ್ರೆ ಮಾಡಿ, ರಾಜ್ಯಪಾಲರಿಗೆ ಈಶಾನ್ಯ ರಾಜ್ಯದ ಜನರ ರಕ್ಷಣೆಗೆ ಒತ್ತಾಯಿಸುವ ಕಾರ್ಯಕ್ರಮ ಹಮ್ಮಿಕೊಂಡಿದ್ದರು. ಆದರೆ ಪೊಲೀಸರು ಅದಕ್ಕೂ ಅವಕಾಶ ಕೊಡಲಿಲ್ಲ, ಹೋಗಲಿ ರಾಜ್ಯಪಾಲರನ್ನು ಸಂಪರ್ಕಿಸಿ ನಮ್ಮ ಮನವಿ ಸ್ವೀಕಾರ ಮಾಡಲು ನಾಲ್ಕೈದು ಜನರನ್ನಾದರೂ ಕರೆದೊಯ್ಯಿರೆಂದರೆ ಅದಕ್ಕೂ ಒಪ್ಪಲಿಲ್ಲ. ಕೊನೆಗೆ ಅಲ್ಲಿ ಸೇರಿದ ಜನ ಸೌಹಾರ್ದ ಜಾಥಾ ನಡೆಸಲು ತೀರ್ಮಾನಿಸಿದಾಗ ಅವರನ್ನೆಲ್ಲ ಬಂಧಿಸಿ ಕರೆದೊಯ್ಯಲಾಯಿತು. ಎ.ಬಿ.ವಿ.ಪಿ., ಆರ್.ಎಸ್.ಎಸ್.ನವರಿಗೆ ಎಲ್ಲ ಚಟುವಟಿಕೆ ಮಾಡಲು ಅನುಮತಿ ಕೊಟ್ಟು, ಇತರರನ್ನು ಬಂಧಿಸಿ ದೂರವಿಡುವುದು ಏನನ್ನು ತೋರಿಸುತ್ತದೆ. ಒಂದು ಕಡೆ ಈಶಾನ್ಯ ರಾಜ್ಯದ ಜನರಿಗೆ ಇಲ್ಲಿಯೇ ಉಳಿದುಕೊಳ್ಳುವ ಪರ್ಯಾಯ ವ್ಯವಸ್ಥೆ ಮಾಡದೆ ಅವರು ತಮ್ಮ ರಾಜ್ಯಗಳಿಗೆ ಹೋಗುವಂತಾಗಬೇಕು. ಇದರಿಂದ ಈಶಾನ್ಯ ರಾಜ್ಯದ ಜನರಿಗೆ ಮುಸ್ಲಿಂ ಜನಾಂಗದ ಮೇಲೆ ದ್ವೇಷ ಹೆಚ್ಚಬೇಕು. ಆರ್.ಎಸ್.ಎಸ್., ಎ.ಬಿ.ವಿ.ಪಿ.ಯ ಮೇಲೆ ಅಭಿಮಾನ ಬೆಳೆಯಬೇಕು. ತನ್ಮೂಲಕ ಈಶಾನ್ಯ ರಾಜ್ಯಗಳಲ್ಲಿ ಏನೇನೂ ನೆಲೆಯಿಲ್ಲದ ಬಿ.ಜೆ.ಪಿ. ಇಂಥ ಕೋಮು ಸಂಘರ್ಷಗಳನ್ನು ಹೆಚ್ಚಿಸಿ ಅಲ್ಲಿ ನೆಲೆ ಪಡೆಯಬೇಕು. ಇದೇನೂ ಇವರಿಗೆ ಹೊಸದಲ್ಲ, ದೇಶದಲ್ಲಿ ಕೋಮು ಸಂಘರ್ಷವನ್ನು ಬಿತ್ತಿಯೇ ಅಧಿಕಾರದ ಬೆಳೆ ಬೆಳೆದವರಿವರು. ಇಷ್ಟಕ್ಕೂ ಈಶಾನ್ಯ ರಾಜ್ಯದ ಜನರಿಗೆ ಬಂದ ಬೆದರಿಕೆಗಳ ಮೂಲ ಪಾಕಿಸ್ತಾನದ್ದು ಎಂದು ಬಿ.ಜೆ.ಪಿ.ಯವರಿಗೆ ಬೇಸರವಾಗಿದೆ. ಇಲ್ಲಿ ಕೋಮು ಸಂಘರ್ಷ ಹೆಚ್ಚಿಸಿ ರಾಜಕೀಯ ಲಾಭ ಪಡೆಯುವ ಅವಕಾಶ ತಪ್ಪಿಹೋಯಿತು. ಈ ವಿಷಯ ಈಗ ಎರಡು ದೇಶಗಳ ನಡುವಿನ ವಿಷಯವಾಗಿದೆ. ಭಾರತದಲ್ಲಿ ಹೇಗೆ ಬಿ.ಜೆ.ಪಿ.ಯವರು ಕೋಮುವಾದಿಗಳೋ ಹಾಗೇ ಪಾಕಿಸ್ತಾನದಲ್ಲಿಯೂ ಕೋಮುವಾದಿಗಳಿದ್ದಾರೆ. ಯಾವುದೇ ಕೋಮಿನ ಜನತೆಗೂ ಕೋಮುವಾದಿಗಳಿಗೂ ಸಂಬಂಧವಿರುವುದಿಲ್ಲ. ಹಿಂದೂ ಮುಸ್ಲಿಂ ಯಾವುದೇ ಧರ್ಮದ ಕೋಮುವಾದಿಗಳು ಆರೋಗ್ಯಕರ ದೇಹದಲ್ಲಿನ ಕ್ಯಾನ್ಸರ್ ಗೆಡ್ಡೆಗಳಿದ್ದಂತೆ. ಭಾರತದಲ್ಲಿನ ಸರಕಾರ ಮತ್ತು ಜನತೆ ಹಿಂದೂ ಕೋಮುವಾದಿಗಳನ್ನು, ಪಾಕಿಸ್ತಾನ ಜನತೆ ಮತ್ತು ಸರಕಾರ ಇಸ್ಲಾಂ ಕೋಮುವಾದಿಗಳನ್ನು ಸದೆಬಡಿಯಬೇಕು. ಆದರೆ ಕೋಮುವಾದಿಗಳೇ ಅಧಿಕಾರ ಹಿಡಿದಾಗ ಎಲ್ಲ ಕೋಮುಗಳ ಜನತೆ ಜಾಗೃತರಾಗಬೇಕು.

ಬೆಂಗಳೂರಿನಿಂದ ಈಶಾನ್ಯ ರಾಜ್ಯಕ್ಕೆ ಮರಳಿಹೋದ ಜನತೆಗೆ ಇಲ್ಲಿ ಬದುಕಿನ ಭರವಸೆ ಕೊಟ್ಟು ಮರಳಿ ಕರೆ ತರಬೇಕು. ನಮ್ಮ ಬಗ್ಗೆ ಅವರಿಗೆ ಪ್ರೀತಿ ಇದೆ. ಆದರೆ ವಿಶ್ವಾಸಕ್ಕೆ ಧಕ್ಕೆ ಬಂದಿದೆ. ಅದನ್ನು ಪುನರ್ ಸ್ಥಾಪಿಸುವ ಕೆಲಸವಾಗಬೇಕು.

*ಈ ತಿಂಗಳು (೩ನೇ ಪುಟದಿಂದ)*

ಕ್ರೀಡಾಪಟುಗಳ ಭಾವನೆಯು ಸ್ವಾಗತಾರ್ಹ. ಒಬಾಮಾ ಮಹಾಶಯ ಮತ್ತು ಆತನ ಹಿಂದಿನ ಹಾಗೂ ಮುಂದಿನ ಅಮೆರಿಕಾ ಅಧ್ಯಕ್ಷರು ಇಂತಹ ಉದ್ದೇಶಕ್ಕೆ ತಣ್ಣೀರೆರಚುತ್ತಾರೆ. ಕೇವಲ ತಣ್ಣೀರಾಗಿದ್ದರೆ ಪರವಾಗಿಲ್ಲ, ಅವರು ಪೆಟ್ರೋಲ್ ಸುರಿದು ಬೆಂಕಿಕಡ್ಡಿ ಗೀರುತ್ತಾರೆ! ಪ್ರಾಚೀನ ಗ್ರೀಸಿನ ಒಲಿಂಪಿಕ್ಸ್ ಕ್ರೀಡೆಗಳಿಗೆ ಸಮನಾದ್ದು ಭಾರತದ ಪ್ರಾಚೀನ ಇತಿಹಾಸದಲ್ಲಿ ಯಾವುದಿದೆ? ನಮ್ಮ ಪರಂಪರೆಯಲ್ಲಿ ಕುರುಕ್ಷೇತ್ರವಿದೆ, ಒಲಿಂಪಿಕ್ಸ್ ಕಾಣದು. ಕಂಡರೆ ಅದಕ್ಕೆ ಪುನರ್ಜೀವ ಕೊಡುವ ಕೆಲಸವಾಗಬೇಕು. ನಮ್ಮ ಕ್ರೀಡಾ ಪರಂಪರೆಯಲ್ಲಿ ಏಕಲವ್ಯನಿದ್ದಾನೆ. ಮಗಧ-ಕೋಸಲ-ಗುರ್ಜರ-ಪಾಲ-ಚೇರ-ಚೋಳ-ರಾಷ್ಟ್ರಕೂಟ, ಹೀಗೆ ಎಲ್ಲರೂ ಏಕತ್ರ ಬಿಲ್ಲುಗಾರಿಕೆ ಪ್ರದರ್ಶನ ನೀಡುವ ಪ್ರಸಂಗವಿಲ್ಲ. ಗ್ರೀಸ್ ಇಂದು ಸೊರಗಿ ಕೂತಿದೆ, ಆದರೂ ಎರಡು ಕಂಚು ಪದಕಗಳನ್ನು ಪಡೆಯಿತೆಂಬ ಸಮಾಧಾನವಿದೆ. ಎರಡು ದಶಕಗಳ ಹಿಂದೆ ಅಮೆರಿಕಾದ ಸೈನ್ಯವು ಆಕ್ರಮಣ ನಡೆಸಿ ಗ್ರೆನಡಾ ಎಂಬ ಪುಟ್ಟ ಸುಂದರ ರಾಷ್ಟ್ರವನ್ನು ನುಚ್ಚುನೂರು ಮಾಡಿತ್ತು. ಅದಕ್ಕೆ ಒಂದೇ ಕಾರಣ ಆ ದೇಶದ ಜನ ಕಮ್ಯುನಿಸ್ಟ್ ಸರ್ಕಾರವನ್ನು ಆಯ್ಕೆ ಮಾಡಿಕೊಂಡಿದ್ದುದು. ಆ ದೇಶದ ಇಂದಿನ ಜನಸಂಖ್ಯೆ ಸುಮಾರು ೧೩ ಲಕ್ಷ, ಅಷ್ಟೆ. ಆ ದೇಶ ಮೊದಲ ಬಾರಿಗೆ ಒಂದು ಚಿನ್ನದ ಪದಕ ಪಡೆಯಿತು. ೧೯೭೩ರಲ್ಲಿ ಅಮೆರಿಕಾ ಆಕ್ರಮಣಕ್ಕೆ ತುತ್ತಾಗಿ ಅಧ್ಯಕ್ಷ ಅಲೆಂಡೆಯನ್ನು ಕಳೆದುಕೊಂಡ ಚಿಲಿಗೆ ಈ ಬಾರಿ ಬರೀ ಚೆಂಬು! ಭೂಕಂಪದಿಂದ ತತ್ತರಿಸುತ್ತಿರುವ (ಮತ್ತು ಅಮೆರಿಕಾದ ಕೆಂಗಣ್ಣಿಗೆ ಬಿದ್ದಿರುವ) ಇರಾನ್‌ಗೆ ೧೨ ಪದಕಗಳು. ವಿಯೆಟ್ನಾಂ ಮತ್ತು ಸಿರಿಯಾಗಳಿಗೆ ಸೊನ್ನೆ. ಸಿರಿಯಾ ಧ್ವಂಸಕ್ಕೆ ಕೇಂದ್ರ ನೆಲೆ ಒದಗಿಸಿರುವ ಟರ್ಕಿಗೆ ೫. ನೂರು ಕೋಟಿ ಜನರ ಭಾರತಕ್ಕೆ ೨ ಬೆಳ್ಳಿ ಮತ್ತು ೪ ಕಂಚು. ಸಾಕು ಬಿಡಿ, ನಮ್ಮ ಕ್ರೀಡಾಪಟುಗಳು ಜಮೈಕಾದ ಉಸೇನ್ ಬೋಲ್ಟನಂತೆ 'ಏಜೆಂಟ್'ಗಳನ್ನು ಹೊಂದಿಲ್ಲವಲ್ಲ! ಪಾಪ, ಎರಡು ಮಕ್ಕಳ ತಾಯಿ ಮೇರಿ ಕೋಂ ತನ್ನ ಮನೆಯಲ್ಲಿ ಅನಿಲ ಸಿಲಿಂಡರ್ ಕೂಡ ಹೊಂದಿಲ್ಲವಂತೆ. ಕ್ರಿಕೆಟ್‌ನ ತೆಂಡು ಮಹಾತ್ಮನಿಗೆ ಎಷ್ಟು ಹೊಟೇಲ್‌ಗಳ ಮಾಲಿಕತ್ವ ಇದೆಯೋ ಅಷ್ಟು ಕೊಠಡಿಗಳೂ ಇಲ್ಲ ಮೇರಿ ಮನೆಯಲ್ಲಿ. ಈಗ ಹೊಟೇಲ್ ಅಲ್ಲದಿದ್ದರೂ ಮೇರಿಗೆ ಅನಿಲವಂತೂ ಸುಲಭವಾಗಿ ಸಿಗುತ್ತದೆ, ಅಷ್ಟೇ ಸಾಕು. ಬಿಂದ್ರಾ, ಸಾನಿಯಾ, ಭೂಪತಿ, ಲಿಯಾಂಡರ್, ಅಂತಹ ಕೆಲವರನ್ನು ಬಿಟ್ಟರೆ ನಮ್ಮ ಕ್ರೀಡಾಪಟುಗಳು ಬಹುಮಟ್ಟಿಗೆ ಸಾಮಾನ್ಯರು. ಈಗ ಅಸಾಮಾನ್ಯರಾಗಲು ಅವಕಾಶ ಪಡೆಯುತ್ತಿದ್ದಾರೆ. ೧೯೭೦ರ ದಶಕದಲ್ಲಿ ಬೆಂಗಳೂರಿನ ಮಲ್ಲೇಶ್ವರದ ಒಂದು ''ಪ್ರತಿಷ್ಠಿತ'' ಕಾಲೇಜಿನಲ್ಲಿ ವಾರ್ಷಿಕ ಕ್ರೀಡೆಗಳ ಸಂದರ್ಭದಲ್ಲಿ ಕೆಲವು ಅಧ್ಯಾಪಕರು ಒಂದು 'ಜೋಕ್' ಹೊಡೆಯುತ್ತಿದ್ದರಂತೆ. ಅಂತಹ ಅಸಹ್ಯ ಭಾವನೆಯ ಮಾತನ್ನು ಜೋಕ್ ಎನ್ನುವುದೇ ಒಂದು ಅಪರಾಧ, ಇರಲಿ. ಜೋಕ್ ಏನು ಗೊತ್ತೆ? ೪೦೦ ಮೀಟರ್ ಓಟದ ಸ್ಪರ್ಧೆ ಇದೆಯೆನ್ನಿ. ಓಡುವವರೆಲ್ಲಾ ಅವರವರ ಜಾಗಗಳಲ್ಲಿ ಸಿದ್ಧರಾಗಿ ನಿಂತಿದ್ದಾರೆ. ಒಬ್ಬ ಅಧ್ಯಾಪಕ ವಿದ್ವಾಂಸರು ಇನ್ನೊಬ್ಬರನ್ನು ಕೇಳುತ್ತಾರೆ: ''ಏನಪ್ಪಾ, ಶೇ. ೧೮ರ ಮೀಸಲಾತಿ ಇದರಲ್ಲಿ ಉಂಟು ತಾನೆ?'' ಎಂದು. ಅಂತಹ ದೇಶದಲ್ಲಿ ಸಾರ್ವತ್ರಿಕ ಕ್ರೀಡಾ ಸೌಲಭ್ಯಗಳು ಎಲ್ಲರಿಗೂ ಸಮಾನವಾಗಿ ಲಭಿಸುವ ಸಾಧ್ಯತೆ ಬಹಳ ಕಡಿಮೆ. ಆದ್ದರಿಂದ ಕೆಲವು ಸಮರ್ಥರಿಗೆ ತರಬೇತಿ ಕೊಟ್ಟರೆ ಸಾಕೆಂಬುದು ಕ್ರೀಡಾ ನೀತಿಯಾಗಿಬಿಡುತ್ತದೆ. ಸೈನಾ ನೇವಾಲ್‌ಗೆ ಸೌಲಭ್ಯ ಮತ್ತು ತರಬೇತಿ ದೊರೆತದ್ದೆಲ್ಲಿ? ರಾಷ್ಟ್ರೀಯ ಕ್ರೀಡಾ ಕೇಂದ್ರದಲ್ಲಲ್ಲ, ಖಾಸಗಿ ಕೇಂದ್ರವೊಂದರಲ್ಲಿ. ನೊಬೆಲ್ ಪಾರಿತೋಷಕವಾದರೂ ಅಷ್ಟೆ, ಒಲಿಂಪಿಕ್ ಪದಕವಾದರೂ ಅಷ್ಟೆ, ಸಾವಿರಾರು ಜನ ಭಾಗವಹಿಸುವ ವ್ಯವಸ್ಥೆ ಇಲ್ಲದಾಗ ಶ್ರೇಷ್ಠತೆಗೆ ಅಗತ್ಯವಾದ ವಾತಾವರಣವಿರುವುದಿಲ್ಲ, ಸ್ಪರ್ಧೆಯಲ್ಲಿ ಎದುರಾಳಿಗಳನ್ನೆದುರಿಸುವ ಛಲ ಮತ್ತು ಶಕ್ತಿ ಬರುವುದಿಲ್ಲ. ಸಾವಿರ ಕಲ್ಲುಗಳಿಂದ ಒಂದು ವಜ್ರ ದೊರಕೀತು; ಇರುವ ಒಂದೇ ಕಲ್ಲನ್ನು ಉಜ್ಜುತ್ತಾ ಹೋದರೆ ಅದು ಸಣ್ಣದಾಗುತ್ತಾ ಹೋಗುತ್ತದಷ್ಟೆ, ಹೊಳಪು ಮೂಡುವುದಿಲ್ಲ. ''ಪದಕ ತನ್ನಿ, ಕೋಟಿ ಕೊಡುತ್ತೇನೆ'' ಎಂದರೆ ಪದಕ ತಂದು ಬಿಡಲಾಗುತ್ತದೆಯೆ? ಅದೇನು ಕದ್ದು ತರುವ ಮಾಲೇ? ಶಾಲೆಗಳಲ್ಲಿ ಮತ್ತು ಸಾರ್ವಜನಿಕವಾಗಿ ಕ್ರೀಡಾ ಸೌಲಭ್ಯ, ಕ್ರೀಡೆಗಳಲ್ಲಿ ಭಾಗವಹಿಸಲು ಹೊಟ್ಟೆಗೆ ಒಳ್ಳೆಯ ತಿಂಡಿ, ಇವೆರಡಿದ್ದರೆ ಸಾವಿರಾರು ಜನ ಬಂದಾರು, ಅವರಲ್ಲಿ ಪದಕ ಗಳಿಸುವವರೂ ಇದ್ದಾರು. ಅದನ್ನು ಕುರಿತು ಯೋಚಿಸದಿದ್ದರೆ ನಮ್ಮ ಹಾಕಿ ಕ್ಷೇತ್ರದ ದುರಂತ ಬೇರೆಡೆಯೂ ಹಬ್ಬುತ್ತದೆ. ಧನರಾಜ ಪಿಳ್ಳೆಯನ್ನು ಹೊರದಬ್ಬಿದ ಜನಕ್ಕೆ ಆಡುವವರು ಬೇಕಿಲ್ಲ, ಅವರ ಸ್ಥಾನಗಳು ಬೇಕು ಮತ್ತು ಹಣ ಬೇಕು. ಅದಕ್ಕಾಗಿ ಎರಡೆರಡು ಹಾಕಿ ಸಂಸ್ಥೆಗಳು ಹುಟ್ಟಿಕೊಳ್ಳುತ್ತವೆ. ಧನರಾಜ್ ಇವರನ್ನು ಟೀಕಿಸಿದ, ಆದ್ದರಿಂದ ಅವನನ್ನು ಓಡಿಸಿದರು. ಇಂಥ ಸನ್ನಿವೇಶಗಳ ವಿಶ್ಲೇಷಣೆ ಮಾಡಿ ಪರಿಹಾರಕ್ಕಾಗಿ ಹೋರಾಟ ಮಾಡದೆ ನಮ್ಮ ಮಾಧ್ಯಮಗಳು ಕ್ರಿಕೆಟ್ ಗಾಳಿಯನ್ನು ಮಾತ್ರ ಸೇವಿಸುತ್ತಾ ಧಾಂಡಿಗರಂತೆ ಬೆಳೆದಿವೆ, ಒಳಗೆ ಸತ್ವವಿಲ್ಲ. ಪುಟಗಳನ್ನು ತುಂಬಿಸಲು ಅಬದ್ಧವಾಗಿ ಹೊಗಳುತ್ತಾ ಕನಸು ಕಟ್ಟಿಕೊಡುವ ಮಾಧ್ಯಮ ಬೇಜವಾಬ್ದಾರಿಯದು. ಹೊಗಳುವುದರಿಂದ ಪದಕ ಹುಟ್ಟುವುದಿಲ್ಲ, ನಿರಾಸೆ ಹೆಚ್ಚುತ್ತದೆ, ಅಷ್ಟೆ. ಆಗಸ್ಟ್ ೧೬ರ 'ದಿ ಹಿಂದು' ಪತ್ರಿಕೆಯಲ್ಲಿ ಎರಡು ಚಿತ್ರಗಳು ಗಮನ ಸೆಳೆದವು: ಒಂದು, ಯೋಗೇಶ್ವರ ದತ್ ಅವರ ಅಮ್ಮನ ಜೊತೆ ಇರುವುದು, ಇನ್ನೊಂದು ತೆಂಡುಲ್ಕರ್ ಎಂಬ ರಾಜ ಬೆಂಗಳೂರಿನಲ್ಲಿ ಅಭ್ಯಾಸಕ್ಕೆಂದು ಬ್ಯಾಟ್ ಹಿಡಿದು ಹೊರಟಿರುವುದು. ಈ ಎರಡು ಚಿತ್ರಗಳು ನಮ್ಮ ಕ್ರೀಡಾಲೋಕದ ಎರಡು ಸಂಸ್ಕೃತಿಗಳನ್ನು ಬಿಂಬಿಸುತ್ತವೆ, ವರ್ಗಗಳನ್ನು ಪ್ರತ್ಯೇಕಿಸುತ್ತವೆ. ಯೋಗೇಶ್ವರನ ವರ್ಗಕ್ಕೆ ಬೆಂಬಲ ಮತ್ತು ತರಬೇತಿ ನೀಡಿದರೆ ಪದಕ; ತೆಂಡು ರಾಜನಿಗೆ ಬೆಂಬಲ ಮತ್ತು ತರಬೇತಿ ನೀಡಿದರೆ ಇನ್ನಷ್ಟು ತೆಂಡುಲ್ಕರ್ ಹೊಟೇಲುಗಳು ಹಾಗೂ ತೆರಿಗೆ ನೀಡದೆ ದೇಶದೊಳಕ್ಕೆ ಬರುವ ಚಿನ್ನದಂತಹ ಕಾರುಗಳು. ಇವೆರಡರಲ್ಲಿ ಯಾವುದು ಬೇಕೋ ಆಯ್ಕೆ ಮಾಡಿಕೊಳ್ಳಿ. ಅಜಯ ಮಾಕೆನ್ ಬೇರೆ ರಾಜಕೀಯ ನಾಯಕ ಮೂರ್ಖರಿಗಿಂತ ಸ್ವಲ್ಪ ಭಿನ್ನನಾಗಿ ಕಾಣುತ್ತಾನೆ. ಅವನ ಆಯ್ಕೆ ಯೋಗೇಶ್ವರನ ಪರವಾದ್ದು. ಅದು ಭದ್ರವಾಗಿ ನೆಲೆಗೊಂಡು ಕ್ರಿಯಾಶೀಲವಾದರೆ ಪದಕಗಳು ಬರಲು ಸಾಧ್ಯ; ಬರದಿದ್ದರೂ ಸರಿಯೆ, ಸಾವಿರಾರು ಜನ ಕ್ರೀಡೆಗಳಲ್ಲಿ ಪಾಲ್ಗೊಳ್ಳುವುದಂತೂ ಸಾಧ್ಯ.

* * *

ಆಗಸ್ಟ್ ಮೊದಲ ವಾರದಲ್ಲಿ ಬೆಂಗಳೂರಿನ ಬಸವನಗುಡಿಯಲ್ಲಿ ನೂರಾರು ಮಹಿಳೆಯರು ಮತ್ತು ಮುದುಕರು ಎರಡು ಗಂಟೆಗಳ ಕಾಲ ರಸ್ತೆ ತಡೆಯನ್ನು ಒಡ್ಡಿ ಪ್ರತಿಭಟಿಸಿದರು. ಅದಕ್ಕೆ ಈ ಮಹಿಳೆಯರದೇ ನಾಯಕತ್ವ. ಬೆಂಗಳೂರು ನಗರ ಸಂಚಾರಿ ಬಸ್ಸುಗಳ ಚಾಲಕರು-ನಿರ್ವಾಹಕರು ಮತ್ತು ಅವರ ಸಂಘ ಅದಕ್ಕೆ ನಾಯಕತ್ವ ನೀಡುವುದಿರಲಿ, ಅದರಲ್ಲಿ ಭಾಗವಹಿಸಲೂ ಇಲ್ಲ. ಸಂಘಕ್ಕೂ ಸಾರ್ವಜನಿಕರಿಗೂ ನಂಟು ಅಷ್ಟಕ್ಕಷ್ಟೆ ಎಂದು ತೋರುತ್ತದೆ. ಇರಲಿ, ಸಮಾಚಾರ ಏನೆಂದು ಗೊತ್ತೆ? ಯಾರೋ ಸಂಚಾರಿ ಪೊಲೀಸ್ ಅಧಿಕಾರಿಗೆ ಬಸವನಗುಡಿಯ ರಸ್ತೆಗಳಲ್ಲಿ ಸಂಚಾರ ಸುಗಮವಾಗಲು ಒಂದು ಪರಿಹಾರ ಹೊಳೆಯಿತು: ಸಿಟಿ ಬಸ್ಸುಗಳ ಸ್ಟಾಪುಗಳನ್ನು ರದ್ದುಮಾಡಬೇಕು, ಎಂದು. ಆಗ ವಾಹನ ದಟ್ಟಣೆ ಕಡಿಮೆಯಾಗುತ್ತದೆ, ಏಕೆಂದರೆ ಬಸ್ಸುಗಳು ಅಲ್ಲಲ್ಲಿ ನಿಂತು ಕಾರು-ಸ್ಕೂಟರುಗಳಿಗೆ ತೊಂದರೆ ಕೊಡುವುದಿಲ್ಲ. ಆತನ ತಲೆಯ ಮಿದುಳನ್ನು ವೈದ್ಯಕೀಯ ಕಾಲೇಜಿನಲ್ಲಿ ಸಂಶೋಧನೆಗೆ ದಯವಿಟ್ಟು ಕೊಡಿಸಿ ಕೊಡಿರೆಂದು ಅಲ್ಲಿಯ ವಿದ್ಯಾರ್ಥಿಗಳು ಅಂಗಲಾಚುತ್ತಿದ್ದಾರಂತೆ? ಆ ಅಧಿಕಾರಿಯ ಕತೆ ಬೇಡ. ಆತನ ಮನೋಭಾವ ಮತ್ತು ತೀರ್ಮಾನ ನಮ್ಮ ದೇಶದ ಮನಮೋಹನ ಸಿಂಗ್ ನಿರ್ದೇಶಿತ ಅಭಿವೃದ್ಧಿ ಮೀಮಾಂಸೆಗೆ ಭಾಷ್ಯದ ರೂಪದಲ್ಲಿದೆ. ಅಭಿವೃದ್ಧಿ ಎಂದರೆ ಕಾರ್ಪೊರೇಟ್‌ಗಳ ಅಭಿವೃದ್ಧಿ; ಅಂತೆಯೇ, ರಸ್ತೆಯಲ್ಲಿ ಸಂಚಾರ ಎಂದರೆ ಕಾರು-ಸ್ಕೂಟರುಗಳ ಅಡ್ಡಿರಹಿತ ವೇಗದ ಸಂಚಾರ. ಎರಡರಲ್ಲೂ ಜನಸಾಮಾನ್ಯರನ್ನ ತಿಪ್ಪೆಗೆ ಹಾಕಬೇಕೆಂಬ ತತ್ವವಿದೆ. ಬೆಂಗಳೂರಿನ ಯಡಿಯೂರು ಸ್ಟಾಪ್ ಆದಮೇಲೆ, ಆ ಸಂಚಾರಿ ಅಧಿಕಾರಿಯ ಪ್ರಕಾರ, ನಾಗಸಂದ್ರ ಮತ್ತು ನೆಟ್ಟಕಲ್ಲಪ್ಪ ಸರ್ಕಲ್‌ಗಳ ಸ್ಟಾಪುಗಳನ್ನು ರದ್ದುಮಾಡಬೇಕಂತೆ. ಆಗ ಬಸ್ಸು ನೇರ ಗಾಂಧಿಬಜಾರ್ ತನಕ ಹೋಗಿಬಿಡುತ್ತದಾದ್ದರಿಂದ ದಾರಿಯಲ್ಲಿ ಕಾರು ಗಳಿಗೆ, ಸ್ಕೂಟರುಗಳಿಗೆ ಪ್ರತಿಬಂಧಕ ಇರುವುದಿಲ್ಲ. ಶಹಬ್ಬಾಸ್ ಮಹರಾಯ, ಎನ್ನಬೇಕು! ಆದರೆ ಬಸ್ಸು ಗಳಿರುವುದು ಏತಕ್ಕಾಗಿ? ಬಸ್ಸುಗಳು ನಿಲ್ಲುವುದೇ ಬೇಡ, ಆಗ ಕಾರುಗಳಿಗೆ ಇನ್ನೂ ಹೆಚ್ಚು ಮಜಾ ಅಲ್ಲವೆ! ಹತ್ತು ಕೆ.ಜಿ. ರೇಶನ್ ಗೋಧಿ ಹೊತ್ತ ಅಜ್ಜಿ ನಾಗಸಂದ್ರ ಸರ್ಕಲ್ಲಿನ ಬಳಿಯ ಅವಳ ಮನೆಗೆ ಹೋಗುವುದು ಮುಖ್ಯವಲ್ಲ, ರೋಲ್ಸ್‌ರಾಯ್ಸ್ ಕಾರು ಧಿಮ್ಮನೆ ಹಾರಿ ಬಿಡಬೇಕು, ಅಷ್ಟೆ. ''ಅಭಿವೃದ್ಧಿ'' ನಡೆಯುತ್ತಿರಬೇಕಾದ್ದು ಹಾಗೇ ಏನು? ನಮ್ಮ ದೇಶದ ಲೂಟಿಕೋರ ವರ್ಗದ ಪರವಾದ ನೀತಿಗೆ ಇದೊಂದು ಪ್ರತೀಕ. ಹಾಗಿದ್ದರೆ ಅಂತಹ ಸಂಚಾರಿ ನಿಯಮದ ವಿರುದ್ಧ ಸೊಲ್ಲೆತ್ತ ಬೇಕಾಗಿದ್ದದ್ದು ಕೇವಲ ಆ ಮಹಿಳೆಯರ ಮತ್ತು ಮುದುಕರ ಜವಾಬ್ದಾರಿಯೆ? ಸಾರಿಗೆ ಇಲಾಖೆಯ ನೌಕರರು ಆ ಜನರ ಪರ, ಅವರು ಬೀದಿಗೆ ಬರುವ ಮೊದಲೇ, ನಿಂತಿದ್ದರೆ ಹೇಗಿರುತ್ತಿತ್ತು! ಹಾಗೆಯೇ, ಇನ್ನೊಂದು ವಿಷಯ ನೋಡಿ: ಮಹಾರಾಷ್ಟ್ರ

ಬ್ಯಾಂಕ್ ವಿಜಯ ಮಲ್ಯ ಎಂಬ ''ಅತಿ ಯಶಸ್ವಿನ ಉದ್ಯಮಿ''ಗೆ ಐವತ್ತು ಕೋಟಿ ಸಾಲ ನೀಡಲಿದೆ, ಅಥವಾ ಈಗಾಗಲೇ ನೀಡಿದೆ (ಇನ್ನೂ ಜಾಸ್ತಿಯೂ ಇರಬಹುದು). ಆ ಮಹಾತ್ಮನ ಪದ್ಧತಿ ಏನೆಂದರೆ ಬ್ಯಾಂಕಿನಿಂದ ಪಡೆದ ಸಾಲವನ್ನು ಹಿಂದಿರುಗಿಸದಿರುವುದು. ಸಾಲ ಪಡೆಯಲು ಅದಕ್ಕಿಂತ ಬೇರಿನ್ನಾವ ಅರ್ಹತೆ ಬೇಕು ! ಇಂತಹ ತೀರ್ಮಾನ ಪ್ರಕಟವಾದಾಗ ಬ್ಯಾಂಕ್ ನೌಕರರು ಸಾರ್ವಜನಿಕರನ್ನು ಬರಮಾಡಿಕೊಂಡು ಮಹಾರಾಷ್ಟ್ರ ಬ್ಯಾಂಕಿನ ಪ್ರಧಾನ ಕಚೇರಿಯ ಮುಂದೆ ಬ್ಯಾಂಕಿನ ಕೆಟ್ಟ ತೀರ್ಮಾನವನ್ನು ಹಿಂದೆಗೆದುಕೊಳ್ಳುವವರೆಗೆ ಒಟ್ಟಾಗಿ ಚಳುವಳಿ ನಡೆಸಿದರೆ ಹೇಗಿರುತ್ತದೆ, ಅಲ್ಲವೆ ? ಬ್ಯಾಂಕ್ ನೌಕರರಿಗೆ ಕೆಲಸದ ವೇಳೆಯಲ್ಲಿ ಹೊರಬಂದು ಹೀಗೆ ಚಳುವಳಿ ನಡೆಸಲು ಸಾಧ್ಯವಿಲ್ಲವೇನೊ , ಆದರೆ ನಾವು ಸಾರ್ವಜನಿಕರು ಅದನ್ನು ಮಾಡಬೇಕಿತ್ತಲ್ಲ. ಅದನ್ನೂ ಮಾಡಲಿಲ್ಲ. ಹೀಗಾಗಿ ಬ್ಯಾಂಕಿನ ಹಣ ಗುಳುಂ ಮಾಡುವುದು ಮಲ್ಯರಂತಹ ಮಹಾನ್ ಉದ್ದಿಮೆದಾರರಿಗೆ ಜನ್ಮಸಿದ್ಧ ಹಕ್ಕಾಗಿಬಿಟ್ಟಿದೆ. ಅದು ಮನಮೋಹನ ಸಿಂಗ್-ಚಿದಂಬರಂ-ಅಹ್ಲುವಾಲಿಯ ''ಅಭಿವೃದ್ಧಿ ಯೋಜನೆ''ಯ ಅವಿಭಾಜ್ಯ ಅಂಗ. ಅವರವರ ಸ್ವಾತಂತ್ರ್ಯ ಅವರವರಿಗೆ ಎಂಬ ಗೊಡ್ಡು ಸಂಪ್ರದಾಯದ ಬಾಲಿಶ ಸೂತ್ರಕ್ಕೆ ತಲೆಬಾಗಿ ನಿಲ್ಲೋಣವೆ ?

* * *

ಸರಕಾರವು ಪುಸ್ತಕ ನೀತಿಯೊಂದನ್ನು ಅಂಗೀಕರಿಸ ಬೇಕು ಎಂಬ ಒತ್ತಾಯ ಬಹುದಿನಗಳದ್ದು. ಲೇಖಕರು, ಪ್ರಕಾಶಕರು, ಓದುಗರಾದಿಯಾಗಿ ಎಲ್ಲರೂ ಇದನ್ನು ಎದುರುನೋಡುತ್ತಿದ್ದಾರೆ. ಕೆಲವರ್ಷಗಳ ಹಿಂದೆ ಸರಕಾರದ ಅಂಗಸಂಸ್ಥೆ ಕನ್ನಡ ಪುಸ್ತಕ ಪ್ರಾಧಿಕಾರ ಇದಕ್ಕಾಗಿ ಒಂದು ಸಮಿತಿಯನ್ನು ರಚಿಸಿತ್ತು. 'ಹೊಸತು' ಸಂಪಾದಕ ಡಾ|| ಜಿ. ರಾಮಕೃಷ್ಣ ನೇತೃತ್ವದಲ್ಲಿ ಈ ಸಮಿತಿಯು ವರದಿಯೊಂದನ್ನು ಸಲ್ಲಿಸಿತ್ತು. ಯಾವತ್ತಿನಂತೆ ಸರಕಾರ ಈ ವರದಿಯನ್ನು ಕಪಾಟಿನಲ್ಲಿರಿಸಿತು. ಮತ್ತೆ ಒಂದೆರಡು ವರ್ಷಗಳ ನಂತರ ಅದನ್ನು ಕೆದಕಿ ಹೊರತೆಗೆಯ ಲಾಯಿತು. ವರದಿಯನ್ನು ಪರಿಷ್ಕರಿಸಲು ಇನ್ನೊಂದು ಸಮಿತಿ. ಅದರ ವರದಿ ಕೂಡ ಮೂಲೆ ಸೇರಿದೆ. ಇದೆಲ್ಲ ಆದದ್ದೂ ಭಾಜಪ ಸರಕಾರ ಬಂದಮೇಲೆ. ಮೊದಲೇ ಭ್ರಷ್ಟತೆಯ ಆಗರವಾಗಿರುವ ಗ್ರಂಥಾಲಯಗಳಿಗೆ ಮಾತ್ರ ಸುಗ್ಗಿ. ಒಂದು ಲಕ್ಷ ರೂಪಾಯಿಗಳ ಮಿತಿ ಷರತ್ತಿನಿಂದ ದಿಢೀರ್ ಪ್ರಕಾಶಕರಿಗೆ ಖುಷಿ. ಅಂತೂ ಗ್ರಂಥಾಲಯ ಗಳಲ್ಲಿ ತುಂಬುವ ಪುಸ್ತಕಗಳು ಜೊಳ್ಳು, ಒಳ್ಳೆ ಪುಸ್ತಕಗಳಿಗೆ ಅವಕಾಶವಿಲ್ಲ. ಅಂದಹಾಗೆ ಭಾಜಪ ಸರಕಾರ ಬಂದ ಮೇಲೆ ಸರಕಾರದ ಬೊಕ್ಕಸದಿಂದ ಪ್ರಯೋಜನ ಪಡೆದು ಕೊಂಡಿರುವ ಪ್ರಕಾಶನ ಸಂಸ್ಥೆ ಆರೆಸ್ಸೆಸ್‌ನ ರಾಷ್ಟ್ರೋತ್ಥಾನ. ಕೋಟಿಗಟ್ಟಲೆ ಹಣ ಪಡೆದು ಹಳೆಯ ಪುಸ್ತಕಗಳನ್ನು ಸರಕಾರದ ತಲೆಗೆ ಕಟ್ಟಿ ಈ ಸಂಸ್ಥೆ ಹಾಯಾಗಿದೆ. ಕೇಸರೀಕರಣದ ನೀತಿಯನ್ನು ದೃಢವಾಗಿ ಪಾಲಿಸಿಕೊಂಡು ಬಂದಿರುವ ಭಾಜಪ ಸರಕಾರದ ಇನ್ನೊಂದು ಪ್ರಕರಣ ಬಯಲಾಗಿದೆ. ಕನ್ನಡ ಪತ್ರಿಕೆಗಳು ಮತ್ತು ಮಾಧ್ಯಮಗಳ ಗಮನ ಇದರತ್ತ ಸರಿಯದೇ ಹೋದದ್ದು ಆಶ್ಚರ್ಯ. ಶ್ರೀರಂಗಪ್ರಿಯ ಎಂಬ ಸಂಸ್ಕೃತ ವಿದ್ವಾಂಸ ಅಷ್ಟಾಂಗ ಯೋಗ ವಿಜ್ಞಾನ ಮಂದಿರ ಎಂಬ ಸಂಸ್ಥೆಯೊಂದನ್ನು ಹನುಮಂತನಗರ ಬಡಾವಣೆಯಲ್ಲಿ ನಡೆಸುತ್ತಿದ್ದರು. ಈತ ಭಾರತೀಯ ಹಬ್ಬಗಳನ್ನು ಕುರಿತ ಗ್ರಂಥಸೃಷ್ಟಿ ಮಾಡಿದ್ದಾರೆ. ಇದರಲ್ಲಿ ಅನ್ಯಮತಗಳ, ಮುಖ್ಯವಾಗಿ ಮುಸಲ್ಮಾನರು ಮತ್ತು ಕ್ರಿಶ್ಚಿಯನ್ನರ, ಹಬ್ಬಗಳ ಪ್ರಸ್ತಾಪವಿಲ್ಲ, ಹಿಂದೂಗಳ ಹಬ್ಬಗಳ ವಿವರ ಮಾತ್ರ ಇದೆ. ಸರಕಾರಿ ಶಾಲೆಗಳು ಮತ್ತು ಗ್ರಂಥಾಲಯಗಳು ಈ ಪುಸ್ತಕವನ್ನು ಕೊಳ್ಳಬೇಕೆಂದು ಶಿಕ್ಷಣ ಇಲಾಖೆ ತಾಕೀತು ಮಾಡಿದೆ. ಡಿ.ಎಸ್.ಇ.ಆರ್.ಟಿ. ಈ ಬಗ್ಗೆ ಸುತ್ತೋಲೆಯೊಂದನ್ನು ಹೊರಡಿಸಿದೆ. ಈ ಪುಸ್ತಕದ ಬೆಲೆ ಎಷ್ಟು ಗೊತ್ತೆ? ೫೦೦ ರೂಪಾಯಿಗಳು.

* * *

ಭ್ರಷ್ಟಾಚಾರದ ವಿರುದ್ಧ ಹೋರಾಟದಲ್ಲಿ ಯಾರ ಜೊತೆಯಾದರೂ ಸರಿ ಭಾಜಪ ಕೈಜೋಡಿಸುತ್ತದೆ. ಅಣ್ಣಾ ಹಜಾರೆ ಹಿಂದೆ ಓಡಿಯಾಡಿ ಕೈ ತೊಳೆದುಕೊಂಡು ಈಗ ಬಾಬಾ ರಾಮದೇವನ ಕಾವಿ ಸೆರಗು ಹಿಡಿದಿದೆ. ಭಾಜಪ ಅಧ್ಯಕ್ಷ ನಿತೀನ್ ಗಡ್ಕರಿ ಬಾಬಾ ವೇದಿಕೆಯಿಂದ ಭರ್ಜರಿ ಭಾಷಣ ಬಿಗಿದರು. ಚುನಾವಣೆ ಹತ್ತಿರವಾಗುತ್ತಿದ್ದಂತೆ ಈ ಅಬ್ಬರ ಇನ್ನೂ ಹೆಚ್ಚಾದೀತು. ಭಾಜಪ ಸರಕಾರಗಳಿರುವ ಕಡೆ ಇರುವ ಭ್ರಷ್ಟಾಚಾರದ ವಿಚಾರ ಚಕಾರ ಎತ್ತುವುದಿಲ್ಲ ಈ ನಾಯಕರು. ನಮ್ಮ ಕರ್ನಾಟಕ ಭಾಜಪ ಸರಕಾರ ಅದಕ್ಕೆ ಉದಾಹರಣೆ. ಬಣ ರಾಜಕೀಯದಲ್ಲಿ ಈಗ ಯಡಿಯೂರಪ್ಪ ಮೇಲುಗೈ ಪಡೆದುಕೊಂಡಿದ್ದಾರೆ. ಜಾಮೀನು ಪಡೆದುಕೊಂಡು ಈತ, ಈತನ ಕುಟುಂಬ ವರ್ಗದವರು ಹಾಯಾಗಿದ್ದಾರೆ. ತನಿಖೆ ಮುಗಿಸಿ ಆರೋಪ ಪಟ್ಟಿ ಸಿದ್ಧಗೊಳಿಸಲು ಇನ್ನೆಷ್ಟು ದಿನ ಹಿಡಿದೀತೊ ! ಈಗಾಗಲೇ ವರ್ಷದ ಮೇಲಾಯಿತು. ನಮ್ಮ ನ್ಯಾಯಾಂಗ ವ್ಯವಸ್ಥೆಯಲ್ಲಿ ಸುಧಾರಣೆಯಾಗದೆ, ಇಂಥ ಪ್ರಕರಣಗಳ ವಿಚಾರಣೆ ಶೀಘ್ರವಾಗಿ, ನಿಯತಕಾಲದಲ್ಲಿ ಇತ್ಯರ್ಥ ವಾಗುವುದು ಸಾಧ್ಯವೇ ಇಲ್ಲ ಎನ್ನುವುದು ವಾಸ್ತವ ಸಂಗತಿ. ಇದುವರೆಗೆ ಭ್ರಷ್ಟಾಚಾರದಲ್ಲಿ ತೊಡಗಿದ ಆರೋಪದ ಮೇಲೆ ಶಿಕ್ಷೆಗೆ ಗುರಿಯಾಗಿರುವ ರಾಜಕಾರಣಿಗಳು ವಿರಳ, ಇಲ್ಲವೇ ಇಲ್ಲ ಎನ್ನಲೂ ಅಡ್ಡಿಯಿಲ್ಲ. ಹಣಬಲ, 'ಜನ'ಬಲ ಹೊಂದಿರುವ ಇಂಥವರಿಗೆ ತಪ್ಪಿಸಿಕೊಳ್ಳಲು ಹಾದಿ ನೂರಾರು. ತಮಿಳುನಾಡು ಮುಖ್ಯಮಂತ್ರಿ ಜಯಲಲಿತಾ ಪ್ರಕರಣ ಇದಕ್ಕೆ ಸಾಕ್ಷಿ. ಕಳೆದ ಎಂಟು ವರ್ಷಗಳಿಂದ ಈಕೆಯ ಮೇಲಿನ ಮೊಕದ್ದಮೆ ಎಳೆದಾಡುತ್ತಿದೆ. ಇನ್ನೂ ಎಷ್ಟು ವರ್ಷ ಹಿಡಿದೀತೊ ತಿಳಿಯದು. ಈ ಮೊಕದ್ದಮೆ ನಡೆಸಲು ನೇಮಕಗೊಂಡಿದ್ದ ವಿಶೇಷ ಪಬ್ಲಿಕ್ ಪ್ರಾಸಿಕ್ಯೂಟರ್ ಬಿ. ವಿ. ಆಚಾರ್ಯ ತಮ್ಮ ಹುದ್ದೆಗೆ ರಾಜೀನಾಮೆ ನೀಡಿದ್ದಾರೆ. ಒತ್ತಡಗಳನ್ನು ತಡೆಯಲಾಗದೆ ತಾವು ಹುದ್ದೆಗೆ ರಾಜೀನಾಮೆ ಕೊಟ್ಟಿರುವುದಾಗಿ ತಿಳಿಸಿದ್ದಾರೆ. ಭಾಜಪ ಸರಕಾರವು ವಿಶೇಷ ಪ್ರಾಸಿಕ್ಯೂಟರ್ ಹುದ್ದೆಗೆ ರಾಜೀನಾಮೆ ನೀಡಬೇಕೆಂದು ಒತ್ತಡ ತಂದಿದೆ ಎಂದು ಅವರು ನೇರವಾಗಿ ಆಪಾದಿಸಿದ್ದಾರೆ. ಇನ್ನು ಹೊಸ ನೇಮಕಕ್ಕೆ ಎಷ್ಟು ಕಾಲ ಹಿಡಿದೀತೊ. ಅಂದಹಾಗೆ ಜಯಲಲಿತ ಅಧಿಕಾರದಲ್ಲಿಲ್ಲದಾಗ ಈ ಪ್ರಕರಣ ದಾಖಲಾದ್ದು. ಇನ್ನು ರೆಡ್ಡಿ ಸೋದರರ ಮೊಕದ್ದಮೆ, ರಾಜಾ ಪ್ರಕರಣದ ಮೊಕದ್ದಮೆ ಇನ್ನೆಷ್ಟು ವರ್ಷಗಳು ಹಿಡಿದೀತೊ !

* * *

ಸ್ಪೀಕರ್ ಬೋಪಯ್ಯ ಆ ಕುರ್ಚಿಯ ಮೇಲೆ ಕೂತಾಗಿನಿಂದ ಭಾಜಪ ಸರಕಾರದಂತೆಯೇ ಸಾಕಷ್ಟು ಗೊಂದಲಗಳನ್ನು ಹುಟ್ಟುಹಾಕಿದ್ದಾರೆ. ಸರಕಾರದಂತೆಯೇ ತಾವೂ ಕೂಡ ಪಕ್ಷಪಾತಿ ಎಂದು ತೋರ್ಪಡಿಸಿ ಕೊಂಡಿದ್ದಾರೆ. ವಿಧಾನಮಂಡಲದ ಇತಿಹಾಸದಲ್ಲೇ ಭಾರೀ ಗೊಂದಲವಾದ್ದು ಇವರ ಕಾಲದಲ್ಲೇ. ಯಡಿಯೂರಪ್ಪ ಸರಕಾರವನ್ನು ಉಳಿಸಲು ವಿಧಾನಸಭೆ ಯಲ್ಲಿ ಅವರು ಕೊಟ್ಟ ರೂಲಿಂಗ್, ಅನಂತರ ನಡೆದ ಸಭಾಮಂದಿರದಲ್ಲಿ ನಡೆದ ಗಲಭೆ, ಕೋರ್ಟು-ಕಚೇರಿ ಗಳಿಗೆ ಅಲೆತ ಎಲ್ಲ ಇತಿಹಾಸದ ಪುಟ ಸೇರಿವೆ. ಐದು ವರ್ಷಗಳಲ್ಲಿ ಮೂರನೇ ಭಾಜಪ ಸರಕಾರದ ಅವಧಿಯಲ್ಲೂ ಕೊಡಗಿನ ಬೋಪ್ಪಯ್ಯನವರೇ ಸ್ಪೀಕರ್. ಪಶ್ಚಿಮಘಟ್ಟ ಪ್ರದೇಶವನ್ನು ವಿಶ್ವಪರಂಪರೆಗೆ ಸೇರಿದ್ದೆಂದು ಘೋಷಿಸುವ ಯುನೆಸ್ಕೋದ ಸೂಚನೆಗೆ ವಿರೋಧ ಏಕೋ ಅರ್ಥವಾಗುತ್ತಿಲ್ಲ, ಆದರೆ ಇದನ್ನೇ ನೆಪ ವಾಗಿರಿಸಿಕೊಂಡು ಸ್ಪೀಕರ್ ಮಹಾಶಯರು ಕೊಡಗನ್ನು ಪ್ರತ್ಯೇಕ ರಾಜ್ಯವಾಗಿ ಮಾಡಬೇಕೆಂದು ಅಪ್ಪಣೆ ಮಾಡಿರುವುದೀಗ ಆಕ್ಷೇಪಣೀಯ ಮತ್ತು ಖಂಡನೀಯ. ಬೋಪಯ್ಯನವರ ಈ ಹೇಳಿಕೆಯನ್ನು ಸಾಹಿತಿಗಳೂ, ವಿದ್ವಾಂಸರೂ, ಎಲ್ಲ ಕನ್ನಡಿಗರೂ ವಿರೋಧಿಸಿದ್ದಾರೆ, ಖಂಡಿಸಿದ್ದಾರೆ. ವೈಯ್ಯಕ್ತಿಕವಾಗಿ ಅವರ ಅಭಿಪ್ರಾಯವೇನೇ ಇರಬಹುದು, ಆದರೆ ಸ್ಪೀಕರ್ ಸ್ಥಾನದಲ್ಲಿರುವ ಅವರು ಈ ರೀತಿ ಹೇಳಿದ್ದು ಸರಿಯಲ್ಲ, ಕರ್ನಾಟಕ ಏಕೀಕರಣಕ್ಕಾಗಿ ನಡೆದ ಹೋರಾಟ ಅವರು ಮರೆತಂತಿದೆ. ಅಧಿಕಾರ ಸ್ಥಾನದಲ್ಲಿ ಕುಳಿತಿರುವವರು ಈ ರೀತಿ ಹೇಳುವುದು ಸರಿಯಲ್ಲ, ಇನ್ನಾದರೂ ಅವರು ತಿದ್ದಿಕೊಂಡು, ಹೇಳಿಕೆ ಹಿಂತೆಗೆದುಕೊಂಡು, ಕನ್ನಡಿಗರಿಗೆ ದ್ರೋಹ ಬಗೆಯದಿರಲಿ.

* * *

ಹರಿಯಾಣ ರಾಜ್ಯದ ಮಂತ್ರಿ ಗೋಪಾಲ ಗೋಯಲ್ ಕಂಡಾ ಎನ್ನುವ ಪುಂಡ ಎಂಟು ಹತ್ತು ದಿನಗಳಿಂದ ಪೊಲೀಸರ ಕಣ್ಣುತಪ್ಪಿಸಿ ತಲೆತಪ್ಪಿಸಿಕೊಂಡಿದ್ದಾನೆ. ಈತ ನಡೆಸುತ್ತಿದ್ದ ಉದ್ಯಮ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿದ್ದ ಗೀತಿಕಾ ಎಂಬ ತರುಣಿ ಈತನ ಕಿರುಕುಳ ತಾಳಲಾರದೆ ಆತ್ಮಹತ್ಯೆ ಮಾಡಿಕೊಂಡಿದ್ದಾಳೆ. ಸಾವನ್ನಪ್ಪುವುದಕ್ಕೆ ಮುನ್ನ ಬರೆದಿರಿಸಿದ ಪತ್ರದಲ್ಲಿ ಸಚಿವ ಕಂಡಾ ನೇರವಾಗಿ ತನ್ನ ಸಾವಿಗೆ ಕಾರಣ ಎಂದು ಆಪಾದನೆ ಮಾಡಿದ್ದಾರೆ. ಮುಖ್ಯ ಆರೋಪಿಯಾಗಿರುವ ಈ ಸಚಿವ ತಾನು ನಿರಪರಾಧಿ ಯಾಗಿದ್ದಲ್ಲಿ ಏಕೆ ತಲೆಮರೆಸಿಕೊಂಡಿರಬೇಕು ? ನ್ಯಾಯಾಲಯದಲ್ಲಿ ತನ್ನ ಸಾಚಾತನವನ್ನು ಸಾದರಪಡಿಸ ಬಹುದಾಗಿತ್ತು. ಸಚಿವ ಸ್ಥಾನದಲ್ಲಿದ್ದ ಆಸಾಮಿಯೇ ಹೀಗೆ ಮಾಡಿದರೆ ಹೇಗೆ ? ಸದ್ಯ ಸಚಿವ ಸ್ಥಾನದಿಂದ ಈತ ಕೆಳಗಿಳಿದದ್ದೇ ದೊಡ್ಡದು ! ಈತ ಜಾಮೀನಿಗಾಗಿ ದೆಹಲಿ ಹೈಕೋರ್ಟ್ ಮೊರೆಹೋಗಿದ್ದಾನೆ. ಈತನನ್ನು ಈವರೆಗೆ ಬಂಧಿಸಲಾಗದೇ ಹೋಗಿರುವುದು ಪೊಲೀಸರ ವೈಫಲ್ಯವೆ ಇಲ್ಲ ಗೊತ್ತಿದ್ದರೂ ಪೊಲೀಸರು ಸುಮ್ಮನಿದ್ದಾರೆಯೆ ? ಇದನ್ನು ಹರಿಯಾಣ ಸರಕಾರವೇ ಬಹಿರಂಗಪಡಿಸಬೇಕು. ಪ್ರತಿಷ್ಠಿತ ರಾಜಕಾರಣಿಗಳು ಆರೋಪಿಗಳಾದಾಗ ತಲೆತಪ್ಪಿಸಿಕೊಂಡು ತಿರುಗಾಡುವುದು ಈ ದೇಶದಲ್ಲಿ ಇದೇ ಮೊದಲಲ್ಲ. ಇನ್ನು ಮೃತ ಗೀತಿಕಾ ಕುಟುಂಬ ದವರಿಗೆ ನ್ಯಾಯ ಸಿಗುವುದು ಗಗನಕುಸುಮ. ಇದು ನಾಚಿಕೇಗೇಡಲ್ಲವೆ ?




## ಆಗಸ್ಟ್ ತಿಂಗಳ ಸಂಚಿಕೆ

### ನಮಗೆ ಸ್ವಾತಂತ್ರ್ಯ ಬಂದೇ ಇಲ್ಲವೆ ?

ಆಗಸ್ಟ್ ತಿಂಗಳ 'ಹೊಸತು' ಸಂಚಿಕೆಯಲ್ಲಿ (ಪುಟ ೨೦-೨೪) ಈಗ ೯೪ರ ಪ್ರಾಯದ ಶ್ರೀ ಹೆಚ್. ಎಸ್. ದೊರೆಸ್ವಾಮಿಯವರ ಸಂದರ್ಶನದ ಆಯ್ದ ಭಾಗಗಳನ್ನು ಓದಿದೆ. ಅವರಂತೆಯೆ ಸ್ವಾತಂತ್ರ್ಯ ಹೋರಾಟದಲ್ಲಿ ಒಂದಿಷ್ಟು ಕಿಂಚಿತ್ ಭಾಗವಹಿಸಿದ, ಈಗ ೮೧ ವರ್ಷ ಪ್ರಾಯದ ನಾನು ಬಹು ಆಸಕ್ತಿಯಿಂದ ಓದಿದೆ. ಆ ವರದಿಯ ಶೀರ್ಷಿಕೆಯೇ ''ನಮಗೆ ಸ್ವಾತಂತ್ರ್ಯ ಬಂದೇ ಇಲ್ಲ'' ಬಹು ಆಕರ್ಷಕ! ಈ ಮಾತು ಅವರಾಡಿರಬಹುದೆ ? ವರದಿಯನ್ನು ಎರಡು ಬಾರಿ ಓದಿದೆ. ಮೊದಲನೆಯ ಪ್ರಶ್ನೆಗೆ ಅವರು ಕೊಟ್ಟ ಉತ್ತರದಲ್ಲಿಯೇ ಈ ಮಾತನ್ನು ಮೂರು ಬಾರಿ ಹೇಳಿದ್ದಾರೆ!

ಹಾಗಾದರೆ ಅಷ್ಟು ದೊಡ್ಡವರು - ಗಾಂಧಿವಾದಿ, ಹಿರಿಯ ಸ್ವಾತಂತ್ರ್ಯ ಹೋರಾಟಗಾರರ ಈ ಮಾತು ಎಷ್ಟರಮಟ್ಟಿಗೆ ಸತ್ಯ, ದಿಟ ಎಂದು ಯೋಚಿಸಿದೆ. ಸ್ವಾತಂತ್ರ್ಯ ಸಂಪಾದನೆಗಾಗಿ ಮಣ್ಣು ಹೊತ್ತದ್ದು ಸುಳ್ಳೇ ? ಹುಚ್ಚಪ್ಪ ಗಾಂಧಿ ಕರೆಗೆ ಓಗೊಟ್ಟು ಹೋರಾಡಿದ್ದು ಸುಳ್ಳೆ ? ನೆಹರು, ಬೋಸ್, ಶ್ರೀ ಅರವಿಂದರು, ಭಗತ್ ಸಿಂಗ್, ಚಂದ್ರಶೇಖರ್ ಆಜಾದ್ ಮುಂತಾದವರು ಮಾಡಿದ ತ್ಯಾಗ ಬಲಿದಾನ ಎಲ್ಲ ಸುಳ್ಳೇ ? ಬ್ರಿಟನ್ನಿನ ಪಾರ್ಲಿಮೆಂಟ್ ೧೯೪೭ರಲ್ಲಿ ಭಾರತೀಯ ಸ್ವಾತಂತ್ರ್ಯ ಶಾಸನವನ್ನು ಮಂಜೂರು ಮಾಡಿ, ಯೂನಿಯನ್ ಜಾಕ್ ಧ್ವಜ ಕೆಳಗಿಳಿಸಿದಾಗ ನಮ್ಮ ತ್ರಿವರ್ಣ ಧ್ವಜವನ್ನು ಹಾರಿಸಿ ಹರ್ಷೋದ್ಗಾರ ಮಾಡಿ ಸಂಭ್ರಮಿಸಲಿಲ್ಲವೆ ? ಕಳೆದ ೬೦ ವರ್ಷಗಳಿಂದ ಸ್ವಾತಂತ್ರ್ಯ ದಿನಾಚರಣೆ ಆಚರಿಸುತ್ತಿರುವುದು ಸುಳ್ಳೇ ? ಇದೆಲ್ಲ ಬರೀ ನಟನೆ, ಕೇವಲ ಬಹಿರಂಗ ವೇಷ, ಅಧಿಕಾರದಲ್ಲಿರುವವರ ನಾಟಕೀಯ ಪ್ರದರ್ಶನ ಎಂಬುದಾಗಿ ದೊರೆಸ್ವಾಮಿಗಳ ಆಕ್ರೋಶ. ಗಾಂಧೀಜಿ ಕನಸಿನ ಭಾರತ ಉದಯವಾಗಿಲ್ಲ – ಬಡತನ ನೀಗಿಲ್ಲ, ಅನಕ್ಷರತೆ, ಅನಾರೋಗ್ಯ, ಮೇಲು-ಕೀಳು ತೊಲಗಿಲ್ಲ ಎಂಬ ಸಂಕಟ – ಅವರಿಗೆ. ಇಂಥ ಗಿಲೀಟಿನ ಸ್ವಾತಂತ್ರ್ಯಕ್ಕಾಗಿಯೆ ನಾವು ಹೋರಾಡಿದ್ದು? ಕೆಲವರು ಸತ್ತಿದ್ದು ? ನಿಶ್ಚಯವಾಗಿಯೂ ಅಲ್ಲ, ಆದ್ದರಿಂದ ಅವರ ಸಂಕಟ, ಆಕ್ರೋಶಕ್ಕೆ ಕಾರಣವಿದೆ. ಆದರೆ ಅದಕ್ಕೆ ಪರಿಹಾರವೇನು ? ಮತ್ತೆ ಬ್ರಿಟಿಷರನ್ನೇ ಕರೆತಂದು ಸಾಮ್ರಾಜ್ಯಶಾಹಿಯ ಬೇಡಿ ಹಾಕಿಸಿಕೊಳ್ಳೋಣವೆ ? ನಮ್ಮದೇ ಆಳ್ವಿಕೆಯ ಸರ್ಕಾರಕ್ಕೆ ಬೇರಾರದೋ ಒಳ್ಳೆಯ ಸರ್ಕಾರ ಒಂದು ಬದಲಿ ವ್ಯವಸ್ಥೆಯಾಗಲಾರದೆಂದು ಗಾಂಧೀಜಿ ಹೇಳಿದ್ದರು. ಇಂದಿರಾ ಗಾಂಧಿ ಸರ್ಕಾರ ಸಮರ್ಥವಾಗಿತ್ತೆಂಬ ಕಾರಣಕ್ಕೆ ಇಂದಿರಾ ಗಾಂಧಿ ಅಂಕುಶಕ್ಕೆ ಅಧೀನರಾಗೋಣವೆ ? ಛೇ! ಛೇ! ಎಂದಾರು ದೊರೆಸ್ವಾಮಿಗಳು. ನಾವು ಯಾವ ಸ್ವರಾಜ್ಯಕ್ಕಾಗಿ ಹೋರಾಡಿದೆವೋ ಅದು ಬಂದಿಲ್ಲ, ಆ ಸಂಕಟ, ಸಿಟ್ಟು ನಮಗೂ ಇದೆ. ಆದರೂ ಸ್ವಾತಂತ್ರ್ಯ ಬಂದೇ ಇಲ್ಲ ಎಂದು ಹೇಳಲಾರೆವು. ನಮ್ಮ ಆಡಳಿತ ಬಂದರೆ ಅನೇಕ ತಪ್ಪುಗಳಾಗುತ್ತವೆ ಎಂದು ಚರ್ಚಿಲ್ ಹೇಳಿದ್ದ. ಅದಕ್ಕೆ ಗಾಂಧೀಜಿ ಹೇಳಿದ್ದರು, ತಪ್ಪು ಮಾಡುವ ಹಕ್ಕು ಇರಬೇಕು! ತಿದ್ದಿಕೊಳ್ಳುವ ಹಕ್ಕು ಇರಬೇಕು. ತಪ್ಪಾಗಿದೆ ಎಂದು ಕಿರುಚಿಕೊಳ್ಳುವ, ಬೈಯ್ಯುವ, ಬೈಸಿಕೊಳ್ಳುವ ಹಕ್ಕು ಈಗ ನಮಗಿದೆ.




ನಮಗಿರುವ ಈ ಕಾಗೆಬಂಗಾರದ ಗಿಲೀಟಿನ ಸ್ವಾತಂತ್ರ್ಯ ಈ ಭ್ರಷ್ಟರ ಭ್ರಷ್ಟ ಆಡಳಿತದಲ್ಲಿ ಇಷ್ಟಾದರೂ ಇದೆ. ದೊರೆಸ್ವಾಮಿಯವರು ಮುಕ್ತವಾಗಿ ಟೀಕಿಸುವ ಹಕ್ಕು ಪಡೆದದ್ದು ಎಲ್ಲಿಂದ ? ಇಂದಿರಾ ಗಾಂಧಿಯನ್ನು ಕಿತ್ತೊಗೆದದ್ದು ಈ ನಕಲಿ ಸಂವಿಧಾನದ ನೆರವಿನಿಂದಲೇ! ಈಗ ಇರುವ ರೆಡ್ಡಿ ಧಣಿಗಳನ್ನು ಜೈಲಿಗೆ ಕಳಿಸಿರುವುದು ಈ ಭ್ರಷ್ಟರ ಆಳ್ವಿಕೆಯಲ್ಲೆ.

ಶ್ರೀ ದೊರೆಸ್ವಾಮಿಯವರು ಆಡಳಿತೆಯ ಭ್ರಷ್ಟಾಚಾರ, ಅಣ್ಣಾ ಹಜಾರೆಯ ಜನಲೋಕಪಾಲ ಬಿಲ್... ಇತ್ಯಾದಿಗಳ ಬಗ್ಗೆ ಮಾತನಾಡಿದ್ದಾರೆ. ಇದರಲ್ಲಿ ಸ್ವಲ್ಪ ಸತ್ಯವಿದೆ. ಆದರೂ ಈ ಭ್ರಷ್ಟ ವ್ಯವಸ್ಥೆಯಲ್ಲಿ ಒಂದಿಷ್ಟು ಒಳ್ಳೆಯದಾಗಿದೆ; ಆಗುತ್ತಿದೆ. ಉದಾಹರಣೆ : ಬಡ ಮಕ್ಕಳು ಶಾಲೆಗೆ ಹೋಗಲು ಅನುಕೂಲವಾಗಲೆಂದು ಬಿಸಿ ಊಟಕ್ಕಾಗಿ ಹಣ ಮಂಜೂರು ಮಾಡಿದರು. ಒಳ್ಳೆಯ ಅಕ್ಕಿ ಬೇಳೆ... ಇತ್ಯಾದಿ ಸಕಲ ಸಾಮಗ್ರಿಗಳನ್ನೂ ಕೊಡಿಸಿದರು. ಹಳ್ಳಿಯ ಮಕ್ಕಳಿಗೆ ಕಳಿಸಿದ ಅಕ್ಕಿ, ಬೇಳೆ... ಇತ್ಯಾದಿ ಉಪಾಧ್ಯಾಯರು, ಶಾಸಕರು, ಶಾಲಾ ಆಡಳಿತಗಾರರೂ ಸೇರಿ ಕಳ್ಳಸಂತೆಯಲ್ಲಿ ಮಾರಿ ಕೊಳ್ಳೆ ಹೊಡೆದದ್ದಕ್ಕೆ ಮನಮೋಹನ ಸಿಂಗ್, ಶಿಕ್ಷಣ ಸಚಿವ ಕಾಗೇರಿ, ಸಿಬಲ್ ಕಾರಣರೇ ? ಶಿಕ್ಷಣ ಇಲಾಖೆಯಲ್ಲಿ ಭ್ರಷ್ಟಾಚಾರ ಎಷ್ಟರಮಟ್ಟಿಗೆ ಆಳವಾಗಿ ಬೇರೂರಿದೆ ಎಂಬ ಬಗ್ಗೆ ಈ ಕೆಳಗಿನ ಪತ್ರಿಕಾ ವರದಿಗಳನ್ನು ನೋಡಬಹುದು.

೧) ಶಾಲಾ ಮಕ್ಕಳ ಬಿಸಿಯೂಟದ ಅಕ್ಕಿ ಅಕ್ರಮವಾಗಿ ಸಾಗಿಸುತ್ತಿದ್ದ ಶಾಲಾ ಮುಖ್ಯ ಶಿಕ್ಷಕ ಗ್ರಾಮಸ್ಥರ ಕೈಗೆ ಸಿಕ್ಕಿಬಿದ್ದು ಗೂಸಾ ತಿಂದ ಘಟನೆ ಹನುಮಸಾಗರ ತಾಂಡಾ ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಯಲ್ಲಿ ಜರುಗಿದೆ. ಅಲ್ಲೇ ಮುಖ್ಯ ಶಿಕ್ಷಕನಾಗಿ ಸೇವೆ ಸಲ್ಲಿಸುತ್ತಿರುವ ಲಕ್ಷ್ಮಣ್ ಕುಂಸಿ ಅಕ್ಷರ ದಾಸೋಹದ ಅಕ್ಕಿಯನ್ನು ಹೊನ್ನಾಳಿಯಿಂದ ಗೂಡ್ಸ್ ಆಟೋದಲ್ಲಿ ಸಾಗಿಸುತ್ತಿದ್ದ.

೨) ಖಾಸಗಿ ಶಿಕ್ಷಣ ಸಂಸ್ಥೆಗಳಿಗೆ ಅನುದಾನ ನೀಡುವ ವಿಚಾರದಲ್ಲಿ ಇಡೀ ಇಲಾಖೆ ತುಂಬ 'ತಿನ್ನುಬಾಕರು' ಆವರಿಸಿಕೊಂಡಿರುವ ಸಂಗತಿ ಗೊತ್ತಾಗಿದೆ. ಸಚಿವ ವಿಶ್ವೇಶ್ವರ ಹೆಗಡೆ ಕಾಗೇರಿ, ಪ್ರಧಾನ ಕಾರ್ಯದರ್ಶಿ ಕುಮಾರ ನಾಯಕ್ ಹಾಗೂ ಆಯುಕ್ತರಾದ ರಶ್ಮಿ ಅವರನ್ನು ಹೊರತುಪಡಿಸಿ ಹೆಚ್ಚೂ ಕಡಿಮೆ ಎಲ್ಲ ಉಪ ಕಾರ್ಯದರ್ಶಿಗಳೂ ಲಂಚದ ಹಣ ಹಂಚಿಕೊಳ್ಳುತ್ತಿದ್ದರು ಎಂದು ತಿಳಿದುಬಂದಿದೆ. ಸ್ವರ್ಣಲತಾ ಅವರ ಕಚೇರಿಯಲ್ಲಿ ಲಭ್ಯವಾದ ಲಂಚಪುಸ್ತಕದಲ್ಲಿ ಈ ಸಂಗತಿ ನಮೂದಾಗಿದೆ. ಯಾವ್ಯಾವ ಶಾಲೆಯಿಂದ ಎಷ್ಟೆಷ್ಟು ಹಣ ಪಡೆಯಬೇಕು, ಇದು ಯಾರ್ಯಾರ ನಡುವೆ ಹಂಚಿಕೆಯಾಗಬೇಕು ಎಂಬ ಮಹತ್ವದ ವಿವರ ಆ ಪುಸ್ತಕದಲ್ಲಿದೆ. ಶಾಲೆಗಳಿಗೆ ಮಂಜೂರಾಗುತ್ತಿದ್ದ ಅನುದಾನದ ಪ್ರಮಾಣವನ್ನು ಆಧರಿಸಿ ರೂ. ೧೫ ಸಾವಿರದಿಂದ ರೂ. ೧ ಲಕ್ಷದವರೆಗೆ ಲಂಚ ಸಂಗ್ರಹ ಮಾಡುವ ಭಾರಿ ಯೋಜನೆ ಇಲಾಖೆಯಲ್ಲಿ ರೂಪುಗೊಂಡಿತ್ತು ಎಂಬುದು ಈ ಸಂದರ್ಭದಲ್ಲಿ ಬೆಳಕಿಗೆ ಬಂದಿದೆ. ಅನುದಾನ ಹಂಚಿಕೆ ಎಂಥಾ ಧಂಧೆ ಎಂಬುದೂ ಜಗಜ್ಜಾಹೀರಾಗಿದೆ.

ಈ ತಳಮಟ್ಟದ ಭ್ರಷ್ಟಾಚಾರವನ್ನು ಜನಲೋಕಪಾಲ್ ಮಸೂದೆ ತಡೆಗಟ್ಟುವುದೇ ? ದೊರೆಸ್ವಾಮಿಯವರು ಹೇಳುತ್ತಾರೆ, ದೊಡ್ಡ ತಿಮಿಂಗಿಲಗಳನ್ನು ಹಿಡಿದು ದಂಡಿಸಿದರೆ ಸಣ್ಣ ಸೀಗಡಿ ಮೀನುಗಳು ಹೆದರುತ್ತವೆ ಎಂದು. ದೊಡ್ಡ ತಿಮಿಂಗಿಲಗಳು ಕೈಗೆ ಸಿಕ್ಕುವುದಿಲ್ಲ, ಅವುಗಳನ್ನು ಹಿಡಿಯಲು ಬೇಕಾದ ಶಾಸನಗಳು ಪೀನಲ್ ಕೋಡ್, ಲಂಚ ನಿಗ್ರಹ ಕಾಯಿದೆ ಜಾರಿಯಲ್ಲಿವೆ. ಆದರೂ ಅವರನ್ನು ನಿಗ್ರಹಿಸುವ ಇಚ್ಛಾಶಕ್ತಿ ಇಲ್ಲ, ಮಂತ್ರಿಗಳು, ಶಾಸಕರು ಲಂಚದಲ್ಲಿ ಮುಳುಗೆದ್ದರೂ ಆರಿಸಿ ಬರುತ್ತಾರೆ! ಅದು ಕರ್ನಾಟಕದಲ್ಲಿ ಸಾಬೀತಾಗಿದೆ!! ಅಂದಮೇಲೆ ಮತದಾರರೇ ಲಂಚಕೋರರಾದರೆ ದಾರಿ ಯಾವುದು ? ನಾವು ಪ್ರಜೆಗಳಲ್ಲಿ ಹೋಗಿ ಲಂಚ ಕೊಡಬೇಡಿ ಎಂದು ಜಾಗೃತಿಯನ್ನು ಮಾಡಿದ್ದೇನು ?

ಈಗ ದೊರೆಸ್ವಾಮಿಯವರು ಹೇಳುವ ಮಾತನ್ನು (ನಮಗೆ ಸ್ವಾತಂತ್ರ್ಯ ಬಂದಿಲ್ಲ ಎಂದು) ೧೯೪೮-೫೦ರಲ್ಲಿ ನಮ್ಮ ದೇಶದ ಕಮ್ಯುನಿಸ್ಟ್ ಪಕ್ಷ ಹೇಳಿತ್ತು. ಇತ್ತೀಚೆಗೆ ನಕ್ಸಲರೂ ಅದೇ ಮಾತನ್ನು ಹೇಳುತ್ತಿದ್ದಾರೆ. ಆ ಮಾತನ್ನು ನಂಬುವ ಜನರೂ ಹೆಚ್ಚುತ್ತಿದ್ದಾರೆ. ಇದನ್ನು ದೊರೆಸ್ವಾಮಿಗಳು ಅನುಮೋದಿಸುವರೇ? ನಕ್ಸಲರು ಮುಖ್ಯವಾಹಿನಿಯಲ್ಲಿ ಸೇರಿಕೊಳ್ಳಲಿ ಎನ್ನುತ್ತಾರೆ, ಹಾಗೆ ಮಾಡಲು ಸಾಧ್ಯವೆ ಎಂಬುದನ್ನು ಅವರು ಯೋಚಿಸಬೇಕು.

ಹಾಗಾದರೆ ಪರಿಹಾರ ಮಾರ್ಗ ಏನು? ಈ ವ್ಯವಸ್ಥೆಯೇ ಬುಡಸಹಿತ ಬದಲಾಗಬೇಕು. ಹೇಗೆ? ನಾವು ಆರಿಸಿಕೊಂಡಿರುವ ಪ್ರಜಾಸತ್ತಾತ್ಮಕ ಪದ್ಧತಿಯೋ? ಅಥವಾ ಇನ್ನಾವುದಾದರೂ ದಾರಿ ಇದೆಯೋ? ಗಾಂಧೀಜಿ ಹೇಳುತ್ತಿದ್ದರು: ನೀತಿಗೆಟ್ಟ ರಾಜಕೀಯ ಪರಮ ಪಾತಕ, ಜನರು ನೀತಿವಂತರಾಗಬೇಕು, ಎಂದು. ಅದೇ ದಾರಿ. ಅನ್ಯ ದಾರಿಯಿಲ್ಲ.

*ಬೆಂಗಳೂರು* — ಕೆ. ಚನ್ನಬಸಪ್ಪ

ಸ್ವಾತಂತ್ರ್ಯ ಹೋರಾಟಗಾರ ಶ್ರೀ ಎಚ್. ಎಸ್. ದೊರೆಸ್ವಾಮಿಯವರು ನಮ್ಮ ದೇಶವು ಇನ್ನೂ ಸ್ವಾತಂತ್ರ್ಯ ಗಳಿಸಿಯೇ ಇಲ್ಲವೆಂದು ಹೇಳಿರುವುದು ರಾಜಕೀಯ ಘಟನೆಯ ನಿರಾಕರಣೆಯಾಗಿರದೆ ಅವರ ದುಗುಡದ, ನೋವಿನ, ಪ್ರತಿಫಲನವಾಗಿದೆ. ೧೯೪೭ರಲ್ಲಿ ರಾಜಕೀಯ ಸ್ವಾತಂತ್ರ್ಯ ದೊರಕಿ ಅಧಿಕಾರವು ನಮ್ಮ ದೇಶದ ಜನರ ಕೈಗೆ ಬಂದಿದ್ದು ಅವರಿಗೆ ಗೊತ್ತು, ಆದರೆ ಆ ಅಧಿಕಾರದಿಂದ ಜನರ ಸಮಸ್ಯೆಗಳು ಬಗೆಹರಿಯಲಿಲ್ಲ, ದೇಶದ ಸಂಪತ್ತು ಈಗಲೂ ಪರಭಾರೆಯಾಗುತ್ತಿದೆ. ಪ್ರಜಾಪ್ರಭುತ್ವದಲ್ಲಿ ಎಚ್ಚೆತ್ತುಕೊಳ್ಳಬೇಕಾದಷ್ಟು ಎಚ್ಚೆತ್ತುಕೊಳ್ಳದಿರುವುದು ಜನರ ತಪ್ಪು, ಆದರೆ ಆಳ್ವಿಕೆಗೆ ಬಂದ ಪಕ್ಷಗಳು ಸ್ವದೇಶ, ಸ್ವಾವಲಂಬನೆ, ಎರಡನ್ನೂ ಮೂಲೆಗುಂಪಾಗಿಸಿವೆ. ವಿದೇಶಿ ಹಸ್ತಕ್ಷೇಪಕ್ಕೆ ಕಾಂಗ್ರೆಸ್ ಮತ್ತು ಭಾರತೀಯ ಜನತಾ ಪಕ್ಷ ಎರಡೂ ಅವಕಾಶ ಮಾಡಿಕೊಟ್ಟಿವೆ. ಭ್ರಷ್ಟಾಚಾರದ ಮೂಲವಿರುವುದು ನಮ್ಮ ದೇಶದ ನೈಸರ್ಗಿಕ ಸಂಪತ್ತು, ಬಂಡವಾಳ ಹೂಡಿಕೆ, ವ್ಯಾಪಾರ-ವಹಿವಾಟು ಇವುಗಳನ್ನು ಹೇಗೆ ನಿಯಂತ್ರಿಸಲಾಗುತ್ತಿದೆ ಎಂಬುದರಲ್ಲಿ, ಅವು ಜನಪರವಾಗುವವರೆಗೂ ನಿಜವಾದ ಸ್ವಾತಂತ್ರ್ಯ ದೊರೆಯುವುದಿಲ್ಲ. ಔಪಚಾರಿಕವಾಗಿ ನಾವು ಸ್ವತಂತ್ರರು, ಆದರೆ ವ್ಯವಹಾರದಲ್ಲಿ ವಿದೇಶಿ ಬಂಡವಾಳಕ್ಕೆ ಶರಣಾಗಿರುವವರು. ಲೋಕಪಾಲರು ಎಷ್ಟೇ ಬಿಗಿಯಾಗಿ ಕೆಲಸ ಮಾಡಿದರೂ ದೇಶದ ಆರ್ಥಿಕ ನೀತಿ ಮತು ನೈಸರ್ಗಿಕ ಸಂಪತ್ತಿನ ಮಾಲಿಕತ್ವದ ಬಗ್ಗೆ ಕಟ್ಟಳೆ ಅವರ ಅಧೀನಕ್ಕೆ ಬರುವುದಿಲ್ಲ. ಭ್ರಷ್ಟಾಚಾರದ ಮೂಲಕ್ಕೆ ಲೋಕಪಾಲರು ಹೋಗಲಾಗದಿರಲು ಅದೇ ಕಾರಣವಾದೀತು. ಪ್ರಜೆಗಳು ಪ್ರಭುತ್ವದ ಜವಾಬ್ದಾರಿ ತಮ್ಮದಾಗಿಸಿಕೊಳ್ಳಬೇಕೆಂಬ ದೊರೆಸ್ವಾಮಿಯವರ ಕರೆಗೆ ಓಗೊಡಬೇಕು.

ಮೈಸೂರು — **ಆರ್. ಎಸ್. ಶ್ರೀಪಾದ ರಾವ್**

**ಹಿಂದಣ ಹೆಜ್ಜೆಯನರಿಯದವರು ಇಟ್ಟ ತಪ್ಪು ಹೆಜ್ಜೆ**

ಕರ್ನಾಟಕ ''ವಿಧಾನಸಭೆ'' ಎಂಬ ಸಂಭ್ರಮವನ್ನು ಆಚರಿಸಿದ ನಮ್ಮ ವಿಧಾನಸಭಾಧ್ಯಕ್ಷರಿಗೂ, ಮುಖ್ಯಮಂತ್ರಿಗಳಿಗೂ, ಕಾನೂನು ಮತ್ತು ಸಂಸದೀಯ ಮಂತ್ರಿಗಳಿಗೂ ಸರಿಯಾದ ಇತಿಹಾಸ ತಿಳಿದಿಲ್ಲವೆಂದು ವಿಷಾದದಿಂದ ಹೇಳಬೇಕಾಗುತ್ತದೆ. ಕೇವಲ ೫೦-೬೦ ವರ್ಷಗಳ ಅವಧಿಯ ಇತಿಹಾಸವನ್ನು ದಾಖಲೆಗಳಿದ್ದೂ ಅರಿಯದೆ ಹೋದದ್ದು ಅಪಹಾಸ್ಯದ ಸಂಗತಿ.

೨೬ ಜನವರಿ, ೧೯೫೦ರಂದು ನಮ್ಮ ಸಂವಿಧಾನ ಜಾರಿಗೆ ಬಂದನಂತರ, ಅದಕ್ಕನುಗುಣವಾಗಿ ೧೯೫೨ರಲ್ಲಿ ಚುನಾವಣೆಗಳು, ಒಂದೇ ಸಲಕ್ಕೆ ಶಾಸನಸಭೆಗೂ, ಸಂಸತ್ತಿಗೂ ನಡೆದವು. ಆದರೆ ೧೯೫೬ರಲ್ಲಿ ಭಾಷಾವಾರು ಪ್ರಾಂತ್ಯಗಳ ರಚನೆಯಾದಾಗ ಇಂದಿನ ಕರ್ನಾಟಕ ಸಭೆ ೧-೧೧-೧೯೫೬ರಂದು ಅಸ್ತಿತ್ವಕ್ಕೆ ಬಂದಿತು. ಇದರಿಂದ ಸ್ಪಷ್ಟವಾಗುವುದೇನೆಂದರೆ ಇಂದಿನ ವಿಧಾನಸಭೆಗೆ ೫೬ರ ವಯಸ್ಸು. ೬೦ ತುಂಬಲು ಇನ್ನೂ ನಾಲ್ಕು ವರ್ಷ ೨೦೧೬ರವರೆಗೆ ಕಾಯಬೇಕಾಗಿತ್ತು.

ಆದರೆ ರಾಜ್ಯಪಾಲರಾದಿಯಾಗಿ ಶಾಸಕರೆಲ್ಲರೂ ''೬೦ನೇ ವರ್ಷ''ವನ್ನು ಆಚರಿಸಿದರು. ನಮ್ಮ ದೇಶದ ಸರ್ವೋಚ್ಚ ನ್ಯಾಯಾಲಯದ ನಿವೃತ್ತ ಮುಖ್ಯ ನ್ಯಾಯಮೂರ್ತಿಗಳೂ ಈ ಸಂಭ್ರಮದಲ್ಲಿ ಭಾಗವಹಿಸಿದರು.

೧-೧೧-೧೯೫೬ರಂದು ಹಳೆಯ ಮೈಸೂರು ತನ್ನ ಅಸ್ತಿತ್ವವನ್ನು ಕಳೆದುಕೊಂಡಿತು. ಅಂದು ಹೊಸ ರಾಜ್ಯ ಉದಯವಾಯಿತು. ಹಳೆಯ ಭಾಗಗಳ ಶಾಸಕರು ಮತ್ತು ಸಂಸತ್ ಸದಸ್ಯರು ಹೊಸ ರಾಜ್ಯದ ಶಾಸಕರು ಮತ್ತು ಸಂಸತ್ ಸದಸ್ಯರಾದರು.

ಇತಿಹಾಸದ ದಿನಾಂಕಗಳನ್ನು, ವಿವರಗಳನ್ನು ಗಮನಿಸಿದರೆ ಇದೇ ಜೂನ್ ೧೮ರಂದು ಆಚರಿಸಿದ ೬೦ರ ಸಂಭ್ರಮ ಖಂಡಿತವಾಗಿಯೂ ತಪ್ಪು ಹೆಜ್ಜೆ. ಈ ಸಂಭ್ರಮಕ್ಕಾಗಿ ಖರ್ಚಾದ ಸುಮಾರು ೬೦ ಲಕ್ಷ ರೂ.ಗಳು ವ್ಯರ್ಥ.

ಕೇಂದ್ರ ಸರ್ಕಾರ, ''ಸಂಸತ್ತು ೬೦''ರ ಸಂಭ್ರಮ ಆಚರಿಸಿದ್ದನ್ನು ಕಂಡು ನಮ್ಮವರು ಕುರುಡು ಅನುಕರಣೆ ಮಾಡಿದ್ದಾರೆ. ಸಂಸತ್ತು ೧೯೫೨ರಲ್ಲಿ ಅಸ್ತಿತ್ವಕ್ಕೆ ಬಂತು. ಆದರೆ ಕರ್ನಾಟಕ ಶಾಸನಸಭೆ ಅಸ್ತಿತ್ವಕ್ಕೆ ಬಂದದ್ದು ೧೯೫೬ರ ನವೆಂಬರ್! ನೆರೆಯ ರಾಜ್ಯಗಳವರಾರೂ ಅಂಥ ಆಚರಣೆ ನಡೆಸಲಿಲ್ಲ.

ಸರ್ಕಾರಕ್ಕೆ ಈ ಸಂಭ್ರಮದ ಆಚರಣೆ ಮಾಡಬಾರದೆಂದು ನನ್ನ ಹಿರಿಯ ಸ್ನೇಹಿತರೂ ಸರ್ಕಾರದ ನಿವೃತ್ತ ಜಂಟಿ ಕಾರ್ಯದರ್ಶಿಗಳೂ ಆದ ಶ್ರೀ ಎಲ್. ಎಸ್. ಜಾಗೀರದಾರರು, ದಿನಾಂಕ ೯-೬-೨೦೧೨ರಂದು ರಾಜ್ಯದ ಮುಖ್ಯ ಕಾರ್ಯದರ್ಶಿಗಳಿಗೆ ಕಾನೂನಿನ ವಿವರಗಳನ್ನು ಒಳಗೊಂಡ ಒಂದು ಸಂಕ್ಷಿಪ್ತ ಪತ್ರ ಬರೆದು ಎಚ್ಚರಿಸಿದ್ದರು. ಇದರ ಪ್ರತಿಯನ್ನು ವಿಧಾನಸಭೆಯ ಕಾರ್ಯದರ್ಶಿಗಳಿಗೂ ಮತ್ತು ಕಾನೂನು ಮತ್ತು ಪಾರ್ಲಿಮೆಂಟರಿ ಇಲಾಖೆಯ ಕಾರ್ಯದರ್ಶಿಗಳಿಗೂ ಕಳುಹಿಸಲಾಗಿತ್ತು. ಅದನ್ನು ಕಡೆಗಣಿಸಿದರೆಂದು ತೋರುತ್ತದೆ.

ಡಾ|| ಪಾಟೀಲ ಪುಟ್ಟಪ್ಪನವರು ವಿಜಯವಾಣಿ ಪತ್ರಿಕೆಗೆ ಹೇಳಿಕೆ ನೀಡಿ ಈ ''ವಜ್ರಂಭಣೆ''ಯು ತಪ್ಪು ಎಂದು ಹೇಳಿದರು. ಇದಕ್ಕೂ ಯಾರೂ ಗಮನಕೊಡಲಿಲ್ಲ.

*ಬೆಂಗಳೂರು* — ***ಡಾ|| ಹೆಚ್. ಚಂದ್ರಶೇಖರ***

'ಹೊಸತು' ಹೆಸರಿನಲ್ಲಿಯೇ ಹೊಸತನವನ್ನು ಹೊತ್ತುಕೊಂಡು, ಒಡಲಲ್ಲೆಲ್ಲ ಪ್ರಗತಿಪರ, ಬಡವರಪರ, ಕಾರ್ಮಿಕಪರ ಮತ್ತು ಜನಪರ ನಿಲುವುಗಳಿಂದ ನೂತನವಾಗಿ ಬರುತ್ತಿರುವ ಮಾಸಿಕ ಪತ್ರಿಕೆಗೆ ವಂದನೆಗಳು. ಜುಲೈ ಪತ್ರಿಕೆಯಲ್ಲಿ ಹೇಳಿದ್ದಂತೆ ಸರ್ಕಾರಿ ಶಾಲೆಗಳ ಸ್ಥಿತಿ-ಗತಿ ಶೋಚನೀಯ. ಶಾಲೆಗಳಲ್ಲಿ ಇಂಗ್ಲಿಷ್ ಮಾಧ್ಯಮವನ್ನು ಖಾಸಗಿ ಶಾಲೆಗಳ ಜೊತೆ ಪೈಪೋಟಿಗಾಗಿ ಬಲವಂತವಾಗಿ ಹೇರುತ್ತಿರುವುದು ಹೆಡ್ಡತನ. ಇದರಿಂದ ಆಗುವ ದುಷ್ಪರಿಣಾಮಗಳು ನಿಜಕ್ಕೂ ಹೌದೆನಿಸಿತು.

*ಲಿಂಗಸೂರ* — **ವಿಜಯಕುಮಾರ ಎಮ್. ಪಿ.**

ಸನತ್‌ಕುಮಾರ ಬೆಳಗಲಿ ಅವರ ''ಮೇಲ್ಜಾತಿಯ ಧ್ರುವೀಕರಣದ ಅಪಾಯ'' ಲೇಖನವನ್ನು ಓದಿದೆ. ಭ್ರಷ್ಟರಿಗಿಂತ ಜಾತಿವಾದಿಗಳು ಲಕ್ಷಪಟ್ಟು ಮಹಾ ಸಮಾಜಘಾತುಕರು. ಈ ಹಿಂದೆ ಬ್ರಾಹ್ಮಣರ ವಿರುದ್ಧ ಕೆಲ ಜಾತಿಗಳಿದ್ದವು. ಆದಾಗ್ಯೂ ಸಮಾಜದಲ್ಲಿ ಸ್ವಲ್ಪ ನೆಮ್ಮದಿ ಇತ್ತು. ಇಂದು ಒಂದು ಜಾತಿಯ ವಿರುದ್ಧ ಮತ್ತೊಂದು ಜಾತಿ, ... ಹೀಗೆ ಎಲ್ಲೆಡೆ ಜಾತಿ ಸಂಘರ್ಷ ಉಂಟಾಗಿ ಸಮಾಜದ ನೆಮ್ಮದಿ ಹಾಳಾಗುತ್ತಿದೆ. ಇದಕ್ಕೆ ರಾಜಕಾರಣಿಗಳು, ಮಠಾಧೀಶರು ಬೆಂಬಲಿಸುತ್ತಿರುವುದು ಮತ್ತೊಂದು ಆಘಾತಕಾರಿ ಅಂಶವಾಗಿದೆ. ಒಬ್ಬ ವ್ಯಕ್ತಿಯನ್ನು ಜಾತಿಯಿಂದ ಗುರುತಿಸುವ, ಘಟನೆಗಳನ್ನು ಜಾತೀಯ ಹಿನ್ನೆಲೆಯಿಂದ ನೋಡುವ ಕೆಟ್ಟ ಸಂಪ್ರದಾಯ ಹೋಗಬೇಕು. ಜಾತಿರಹಿತ ಸಮಾಜ, ನಿರ್ಮಾಣವಾಗಬೇಕು.

ತುಮಕೂರು — **ವಾಮನರಾವ್**

ಕೆ. ಎಲ್. ಗೋಪಾಲಕೃಷ್ಣ ರಾವ್ ನಮ್ಮಿಂದ ಮರೆಯಾಗಿದ್ದಾರೆ; ಆದರೆ ಅವರನ್ನು ಮರೆಯುವುದು ಸುಲಭವಲ್ಲ. ಅವರನ್ನು ನಾನು ಕಂಡದ್ದು ಕೇವಲ ಎರಡು ಸಾರಿ ಮಾತ್ರ. ಮೊದಲಿಗೆ, ಸುಮಾರು ಅರವತ್ತು ವರ್ಷಗಳ ಹಿಂದೆ. ಜೂನಿಯರ್ ಇಂಟರ್ ಓದಲು ನಾನು ಮೈಸೂರಿಗೆ ಬಂದಾಗ, ನಾನು, ನನ್ನ ಅಣ್ಣ, ಹಾ. ಮಾ. ನಾಯಕರು ಒಂದೇ ಕೊಠಡಿಯಲ್ಲಿ ವಾಸವಾಗಿದ್ದೆವು. ಅದೇ ತಾನೆ ತಮ್ಮ ಓದನ್ನು ಮುಗಿಸಿ ಮೈಸೂರನ್ನು ಬಿಡಲು ಸಿದ್ಧರಾಗುತ್ತಿದ್ದ ಗೋಪಾಲಕೃಷ್ಣ ರಾವ್ ಒಂದು ರಾತ್ರಿ ನಮ್ಮ ಕೊಠಡಿಯಲ್ಲಿ ಉಳಿದುಕೊಂಡ ನೆನಪು ನನಗೆ ಇನ್ನೂ ಮಸುಕು ಮಸುಕಾಗಿ ಉಳಿದುಕೊಂಡು ಬಂದಿದೆ. ಎರಡನೆಯ ಬಾರಿ ಅವರನ್ನು ಭೇಟಿಯಾದದ್ದು, 'ಹೊಸತು' ಕಛೇರಿಯಲ್ಲಿ, ಡಾ|| ಜಿ. ಆರ್. ಅವರ ಸಮ್ಮುಖದಲ್ಲಿ,

ನಮ್ಮ ಪರಸ್ಪರ ಸಂಪರ್ಕ ಇಷ್ಟು ಸೀಮಿತವಾಗಿದ್ದರೂ, ಗೋಪಾಲಕೃಷ್ಣ ರಾಯರ ಬಗ್ಗೆ ನನ್ನಲ್ಲಿ ಒಂದು ಬಗೆಯ ಆತ್ಮೀಯ ಭಾವನೆ ಇದೆ. ಅದಕ್ಕೆ ಕಾರಣ ಬಹುಶಃ ಅವರ ಸಜ್ಜನಿಗೆ ಮತ್ತು ತತ್ವಬದ್ಧತೆ.

ಗೋಪಾಲಕೃಷ್ಣ ರಾಯರು ಎಲೆಮರೆಯ ಕಾಯಂತೆ ಬದುಕಿದರು. ಭಾರತ-ಸೋವಿಯತ್ ಸಾಂಸ್ಕೃತಿಕ ಸಂಬಂಧಗಳನ್ನು ಬೆಸೆಯುವಲ್ಲಿ, ಅನುವಾದ ಸಾಹಿತ್ಯ ರಚನೆಯಲ್ಲಿ ಅವರ ಕೊಡುಗೆ ಮಹತ್ತರವಾದದ್ದು. ಅವರಷ್ಟು ಮಹತ್ವದ ಕೆಲಸ ಮಾಡಿದ ಬೇರೆ ಯಾರೇ ಆದರೂ, ಅದಕ್ಕೆ ಸಾಕಷ್ಟು ಪ್ರಚಾರ ಪಡೆದು ಕೊಳ್ಳುತ್ತಿದ್ದರು; ಆದರೆ ಅವರು ಹಾಗೆ ಮಾಡಲಿಲ್ಲ ಎನ್ನುವುದೇ ಗೋಪಾಲಕೃಷ್ಣ ರಾಯರ ವೈಶಿಷ್ಟ್ಯ.

ಆಗಸ್ಟ್ ತಿಂಗಳ 'ಹೊಸತು'ವಿನ ಮುಖಪುಟದಲ್ಲಿ ಗೋಪಾಲಕೃಷ್ಣ ರಾಯರ ಫೋಟೋ ಸುಂದರವಾಗಿದೆ; ಅವರ ಬಗೆಗಿನ ಲೇಖನಗಳೂ ಆತ್ಮೀಯವಾಗಿ ಮೂಡಿಬಂದಿವೆ.

*ಬೆಂಗಳೂರು* **ಎಚ್. ಎಸ್. ಈಶ್ವರ**

ಸುಮಾರು ಎರಡು ದಶಕಗಳಿಗಿಂತಲೂ ಹೆಚ್ಚು ಸಮಯ ದಿವಂಗತ ಕೆ. ಎಲ್. ಗೋಪಾಲಕೃಷ್ಣ ರಾವ್ ಅವರ ಸಂಪರ್ಕ ನನಗೆ ಒದಗಿಬಂದಿತ್ತು. ನವಕರ್ನಾಟಕ ಪಬ್ಲಿಕೇಷನ್ಸ್ ಅವರ ಮುಖಾಂತರ ನನ್ನ ಕೆಲವು ಕೃತಿಗಳು ಪ್ರಕಟವಾಗಲಾರಂಭಿಸಿದಾಗಿನಿಂದ (೧೯೯೨) ಅವರನ್ನು ಭೇಟಿ ಮಾಡಿ ವೈದ್ಯಕೀಯ ಸಾಹಿತ್ಯ ಪ್ರಕಾರಗಳ ಬಗೆಗೆ ಸಲಹೆ ಸೂಚನೆ ಪಡೆದು ಕೊಳ್ಳುತ್ತಿದ್ದೆ. ಅವರ ವಿದ್ವತ್ತು, ಮೃದುಸ್ವಭಾವ, ಸ್ನೇಹಪರತೆಗಳು ಅವರ್ಣನೀಯ.

ನವಕರ್ನಾಟಕದವರು ೧೯೯೮ರಲ್ಲಿ ಪ್ರಕಟಿಸಿದ ನಾಲ್ಕು ಸಂಪುಟಗಳ 'ಜ್ಞಾನ-ವಿಜ್ಞಾನ ಕೋಶ'ದ ಸಂಪಾದಕೀಯ ಮಂಡಳಿಯಲ್ಲಿ ಪ್ರಮುಖರಾಗಿದ್ದರು. ಆ ಸಂಪುಟಗಳ ಶಸ್ತ್ರವೈದ್ಯದ ವಿಷಯಗಳನ್ನು ಬರೆಯಲು ನಿಯೋಜಿತನಾಗಿದ್ದ ನಾನು, ಅವರ ಮಾರ್ಗದರ್ಶನ ಪಡೆಯುತ್ತಿದ್ದೆ; ಆಗ ಅವರು ನೀಡಿದ ಸಹಕಾರ, ಸಜ್ಜನಿಕೆಗಳನ್ನು ನಾನು ಮರೆಯಲಾರೆ. ಮುಂದೆ ೨೦೦೨ರಲ್ಲಿ ನನ್ನ ವೃತ್ತಿ ಜೀವನದ ಅನುಭವ ಕಥನ – ''ವೈದ್ಯಾಧಿಕಾರಿಯ ಬದುಕು-ಬವಣೆ'' – ಅಂತಿಮವಾಗಿ ಅಚ್ಚಿನ ಮನೆಗೆ ಕಳುಹಿಸುವ ಮುನ್ನ ಮಾನ್ಯ ಕೆ.ಎಲ್.ಜಿ.ಯವರ ಅಭಿಪ್ರಾಯ ಕೋರುವುದು ಸೂಕ್ತವೆನಿಸಿತು. ಅದಕ್ಕೊಪ್ಪಿ ಹಸ್ತಪ್ರತಿಯನ್ನು ಕೂಲಂಕಷವಾಗಿ ಪರಿಶೀಲಿಸಿ, ಇದೊಂದು ವಿಶಿಷ್ಟ ರೀತಿಯ ಬರಹ; ಸಾಮಾನ್ಯ ವೈದ್ಯರ ಅನುಭವ ವೃತ್ತಾಂತಗಳನ್ನು ಓದಿದ್ದೇವೆ. ಆದರೆ ಶಸ್ತ್ರ ವೈದ್ಯರ ಅನುಭವಗಳನ್ನು ವಿವರಿಸುವ ಇಂತಹ ಕೃತಿಗಳು ತುಂಬ ವಿರಳ, ಎಂದು ಶ್ಲಾಘಿಸಿ ಪ್ರಕಟಿಸಬಹುದೆಂದು ಪ್ರೋತ್ಸಾಹ ನೀಡಿದ್ದರು. ಕೆಲ ಸಮಯದ ನಂತರ ಹಸ್ತಪ್ರತಿಯನ್ನು ಹಿಂಪಡೆಯಲು ಅವರ ಮನೆಗೆ ಹೋದಾಗ ಅವರ ಆದರಾತಿಥ್ಯ ಅನನ್ಯವೆಂದೇ ಹೇಳಬೇಕು.

ಎರಡು ವರ್ಷಗಳ ಹಿಂದೆ ಕನ್ನಡ ಅನುವಾದ ಅಕಾಡೆಮಿಯವರು 'ಕುವೆಂಪು ಭಾಷಾ ಭಾರತಿ' ಪುರಸ್ಕಾರ ನೀಡಿದ್ದು ಅವರ ಸಾಹಿತ್ಯ ಸಾಧನೆಗೆ, ಅದರಲ್ಲೂ ಅನುವಾದ ಪ್ರಕಾರಕ್ಕೆ ದೊರೆತ ಪ್ರಶಂಸೆ ಎಂದೇ ಹೇಳಬಹುದು. ಅವರ ಅಕಾಲಿಕ ಅಗಲಿಕೆ ನವಕರ್ನಾಟಕ ಸಂಸ್ಥೆಗೆ ಮಾತ್ರವಲ್ಲದೆ ವೈಯಕ್ತಿಕವಾಗಿ ನನ್ನಂತಹ ಉದಯೋನ್ಮುಖ ಬರಹಗಾರರಿಗೆ ತುಂಬ ಲಾರದ ನಷ್ಟವೇ ಸರಿ. ಅವರನ್ನು ಗೌರವದಿಂದ ನೆನೆಯುತ್ತೇನೆ.

*ಶಿವಮೊಗ್ಗ* **ಡಾ|| ಎಚ್. ಡಿ. ಚಂದ್ರಪ್ಪ ಗೌಡ**

ಆಗಸ್ಟ್ ೨೦೧೨ರ ಹೊಸತು ಸಂಚಿಕೆಯಲ್ಲಿನ ಸಂಪಾದಕೀಯ ವಿಭಾಗದ ಲೇಖನಗಳು ಮೌಲಿಕ ವಾಗಿವೆ. ಮಳೆಗಾಗಿ ದೇವರ ಪೂಜೆಯಲ್ಲಿಯೂ ಹಗಲು ದರೋಡೆ ಮಾಡುತ್ತಿರುವ ಸರ್ಕಾರದ ನಿರ್ಧಾರ ಖಂಡನಾರ್ಹ. 'ರಾಷ್ಟ್ರಾಧ್ಯಕ್ಷ ಓಂಕಾರಪ್ಪ' ಹಾಗೂ 'ಸ್ವಾತಂತ್ರ್ಯ ಹರಣೋತ್ಸವ' ಲೇಖನಗಳು ಅರ್ಥಗರ್ಭಿತ.

*ಹೂವಿನಹಡಗಲಿ* **ಸುರೇಶ ಅಂಗಡಿ**

## ಸಂಕ್ರಮಣ ಸಾಹಿತ್ಯ ಸ್ಪರ್ಧೆ : ೨೦೧೨

* ೨೦೧೨ಕ್ಕಾಗಿ ಸಂಕ್ರಮಣ ಪ್ರಕಾಶನದ ಪರವಾಗಿ ಸಣ್ಣ ಕತೆ, ಕಾವ್ಯ, ಹನಿಗವನ, ಲಲಿತ ಪ್ರಬಂಧ – ಈ ಸಾಹಿತ್ಯ ಪ್ರಕಾರಗಳಲ್ಲಿ ಸ್ಪರ್ಧೆ ಏರ್ಪಡಿಸಲಾಗಿದೆ.

**ಪ್ರವೇಶ ಧನ : ರೂ. ೧೫**

ಆಯ್ಕೆಯಾದ **ಎರಡು ಸಣ್ಣ ಕತೆ, ಎರಡು ಲಲಿತ ಪ್ರಬಂಧ, ಹತ್ತು ಕವನಗಳು** ಹಾಗೂ **ಇಪ್ಪತ್ತು ಹನಿಗವನಗಳು** ಸಂಕ್ರಮಣದ ವಿಶೇಷಾಂಕ ದಲ್ಲಿ ಪ್ರಕಟವಾಗುತ್ತವೆ. ಬಹುಮಾನಿತರಿಗೆ ಪ್ರಮಾಣಪತ್ರದೊಂದಿಗೆ ಪುಸ್ತಕ ರೂಪದಲ್ಲಿ ಬಹುಮಾನ ನೀಡಲಾಗುವುದು.

**ಪ್ರವೇಶಗಳನ್ನು ಸ್ವೀಕರಿಸಲು**
**ಕೊನೆಯ ದಿನಾಂಕ :**
**೨೫ ಸೆಪ್ಟೆಂಬರ್ ೨೦೧೨**

ವಿವರಗಳಿಗೆ –
ಸಂಪಾದಕರು
**ಸಂಕ್ರಮಣ**
ಜ್ಯೋತಿ ಲೇಔಟ್, ಯಲಚೇನಹಳ್ಳಿ
ಜೆ. ಪಿ. ನಗರ ಅಂಚೆ, ಬೆಂಗಳೂರು - ೭೮
ದೂರವಾಣಿ : ೦೮೦-೨೬೩೨೫೩೪೪
ಮೊಬೈಲ್ : ೯೪೪೯೮೦ ೬೯೩೪೪

'ಹೊಸತು' ಆಗಸ್ಟ್ ಸಂಚಿಕೆಯಲ್ಲಿ – ಶ್ರೀ ಎಚ್. ಎಸ್. ದೊರೆಸ್ವಾಮಿಯವರು ನಮ್ಮೊಡನೆ ಇರುವುದು ಹೆಮ್ಮೆಯ ವಿಷಯ.

ಅವರು ಹೇಳಿದ, ''ನಮಗೆ ಸ್ವಾತಂತ್ರ್ಯವೇ ಬಂದಿಲ್ಲ'' ಎನ್ನುವ ಮಾತು ಅಕ್ಷರಶಃ ಸತ್ಯ. ಅಂದಿನ ಬ್ರಿಟಿಷರ ದಬ್ಬಾಳಿಕೆಗಿಂತಲೂ ಇಂದು ಸ್ವತಂತ್ರ ಭಾರತದಲ್ಲಿ ನಿತ್ಯ ನಡೆಯುವ ಭ್ರಷ್ಟಾಚಾರ, ಜಾತಿ ಗುಂಪುಗಾರಿಕೆ, ರಾಜಕೀಯ ವ್ಯಾಪಾರೀಕರಣ ಕಂಡು ಅವರ ಮನಸ್ಸು ಘಾಸಿಗೊಂಡಿದೆ.

ಇಂದು ದೇಶದ ಮೊದಲ ಪ್ರಜೆಗಿರುವ ಸೌಲಭ್ಯಗಳಲ್ಲಿ ಒಂದು ಭಾಗದಷ್ಟು – ಕೊನೆಯ ಪ್ರಜೆಗಳಿಗೆ ತಲುಪದೇ ಇರುವುದು ಇಂದಿನ ಸ್ವತಂತ್ರ ಭಾರತದ ದುರಂತ.

*ಬಾಗಲಕೋಟ* **ಶಂಕರ ಎಂ. ಮುತ್ತಣ್ಣವರ**

ದೊರೆಸ್ವಾಮಿ ಅವರೊಂದಿಗೆ ತಾವು ಮಹತ್ವದ ವಿಷಯವಾದ ಸ್ವಾತಂತ್ರ್ಯ ಕುರಿತು ಸಂದರ್ಶನ ಮಾಡಿದ್ದು ಸಾಂದರ್ಭಿಕವಾಗಿದೆ. ಬಾಕ್ಸ್‌ನಲ್ಲಿ ಪ್ರಕಟ ವಾಗಿರುವ ದೊರೆಸ್ವಾಮಿ ಅವರ ಅನಿಸಿಕೆಗಳು, ವಿಚಾರಗಳು ಸತ್ಯ. ರಾಮದೇವ (ಬಾಬಾ ಅವರು) ಋಷಿಗಳಂತೆ ಗಡ್ಡ ಮೀಸೆ ಬೆಳೆಸಿದ್ದಾರೆ. ಹಿಂದೆ ಉದ್ದವಾದ ಕೂದಲು ಬಿಟ್ಟು ತುರುಬು ಕಟ್ಟಿದ್ದಾರೆ. ಸಾಧುಗಳಿಗೆ ತಕ್ಕಂತೆ ಕಾವಿ ಬಟ್ಟೆ ತೊಟ್ಟಿದ್ದಾರೆ. ಹಿಂದಿನ ಋಷಿಗಳಂತೆ ಔಷಧ ಕೊಡುತ್ತಿದ್ದಾರೆ. ಅವರಿಗೆ ಸಂಕಟ ಬಂದಾಗ ಮಹಿಳೆಯರ ವೇಷ ತೊಟ್ಟು, ಪಾರಾಗುವ ಚಾಣಾಕ್ಷತನವಿದೆ.

*ಹುಬ್ಬಳ್ಳಿ* **ಎಂ. ಡಿ. ಗೋಗೇರಿ**

ಮುರಳೀಧರ್ ಅವರ ಸ್ವಾತಂತ್ರ್ಯ ಹರಣೋತ್ಸವ ಸಕಾಲಿಕವಾಗಿದೆ. ರಾಷ್ಟ್ರೀಯ ಮಟ್ಟದಲ್ಲಿ ಬೃಹತ್ ರಾಷ್ಟ್ರಗಳು ಕೈಹಾಕಿ ನಮ್ಮನ್ನು ಅಲುಗಾಡಿಸಿದರೆ, ಆಂತರಿಕವಾಗಿ ನಮ್ಮನ್ನಾಳುವವರ ಅದಕ್ಷತೆಯಿಂದಾಗಿ ಜನತೆ ಹೈರಾಣಾಗಿದ್ದಾರೆ.

ಜನತೆ ರಾಷ್ಟ್ರದಲ್ಲಿ ನಿತ್ಯವೂ ನಡೆಯುತ್ತಿರುವ ಅಪರಾಧಗಳಿಂದ ಬೇಸತ್ತಿದ್ದಾರೆ! ನಮಗೆಲ್ಲಿಯ, ಎಂತಹ ಸ್ವಾತಂತ್ರ್ಯ ಎಂದು ಪ್ರಶ್ನಿಸುವಂತಾಗಿದೆ.

ವಿಷ್ಣು ನಾಯ್ಕರ 'ಸ್ವತಂತ್ರಭಾರತದ ಪ್ರಜೆಗಳೇ...' ಲೇಖನ ಚೆನ್ನಾಗಿ ಮೂಡಿಬಂದಿದೆ. ನಮಗೆ ಸ್ವಾತಂತ್ರ್ಯವೇ ಬಂದಿಲ್ಲವೆಂದಿರುವ ಹಿರಿಯ ಜೀವ ಎಚ್. ಎಸ್. ದೊರೆಸ್ವಾಮಿಯವರ ಮಾತು ನೋವಿನ ಸಂಗತಿ. ಬಹಳಷ್ಟು ಚಿಂತಕರ ಅಭಿಪ್ರಾಯವೂ ಅದೇ ಆಗಿದೆ.

'ಬೆಂಗಳೂರಿನ ಪಾಳೇಗಾರರು' ಲೇಖನ ಪೂರ್ತಿ ಓದಿ ಬೇಸ್ತುಬಿದ್ದೆ! (ಬೆಂಗಳೂರಿನಲ್ಲಿ ಈಗ ಆಳ್ವಿಕೆ ನಡೆಸುತ್ತಿರುವವರು ಭ್ರಷ್ಟ ರಾಜಕಾರಣಿಗಳು; ಅವರ ಹಿಂದೆ ಗೂಂಡಾಗಳು, ಕೊಲೆಗಡುಕರು. ಈ ಲೇಖನ ಅವರ ಬಗ್ಗೆ ಎಂದೇ ಭಾವಿಸಿದ್ದೆ.)

*ಮೈಸೂರು* **ಕೊ. ಸು. ನರಸಿಂಹಮೂರ್ತಿ**

# ಮಾರ್ಕ್ಸ್ ಸಮರ್ಥ ಇತಿಹಾಸಜ್ಞನೆ?

೧೯೪೧ರಲ್ಲಿ ಜನಿಸಿದ ಟೆರಿ ಈಗಲ್‌ಟನ್ ಮೂಲತಃ ಐರ್ಲೆಂಡಿನ ಒಂದು ಕುಟುಂಬದವನು. ಆದರೆ ಹುಟ್ಟಿದ್ದು, ವಿದ್ಯಾಭ್ಯಾಸ ಪಡೆದಿದ್ದು ಮತ್ತು ಕೆಲಸ ಮಾಡಿದ್ದು ಇಂಗ್ಲೆಂಡಿನಲ್ಲಿ. ಕೇಂಬ್ರಿಜ್, ಆಕ್ಸ್‌ಫರ್ಡ್, ಮ್ಯಾಂಚೆಸ್ಟರ್ ಮತ್ತು ಲೆಸ್ಟರ್ ವಿಶ್ವವಿದ್ಯಾನಿಲಯಗಳೊಡನೆ ಅವನದು ಐವತ್ತಕ್ಕೂ ಹೆಚ್ಚು ವರ್ಷಗಳ ಸಂಬಂಧ. ವ್ಯಾಸಂಗ ಕೇಂಬ್ರಿಜ್‌ನಲ್ಲಿ, ಆದರೆ ಪ್ರಾಧ್ಯಾಪಕನಾಗಿದ್ದುದು ಲೆಸ್ಟರ್‌ನಲ್ಲೇ ಹೆಚ್ಚು. ಬೇರೆ ಎರಡು ವಿಶ್ವವಿದ್ಯಾನಿಲಯಗಳಲ್ಲೂ ಬೋಧನೆ ಮತ್ತು ಸಂಶೋಧನೆ ನಡೆಸಿದ್ದಾನೆ. ಸಾಹಿತ್ಯ, ಇತಿಹಾಸ ಮತ್ತು ತತ್ತ್ವಶಾಸ್ತ್ರ ಅವನ ಆಸಕ್ತಿಯ ಕ್ಷೇತ್ರಗಳು. ಸಾಹಿತ್ಯ ಮೀಮಾಂಸೆ ಮತ್ತು ವಿಮರ್ಶೆಯಲ್ಲಿ ಆತನ ಕೃಷಿ ಅತ್ಯಂತ ಮೌಲಿಕವಾದ್ದು. ಅದಕ್ಕೆ ವಿಶೇಷ ಮಾನ್ಯತೆ ಲಭ್ಯವಾಗಿದೆ. ಮಾರ್ಕ್ಸ್‌ವಾದಿ ಸಿದ್ಧಾಂತದ ಬಗೆಗಿನ ಅವನ ತಿಳಿವು ಕೇವಲ ಅಧ್ಯಯನದಿಂದ ಬಂದಿದ್ದಲ್ಲ, ಅವನೊಬ್ಬ ಖ್ಯಾತ ಸಂಘಟಕ ಮತ್ತು ಹೋರಾಟಗಾರ ಕೂಡ. ಅಮೆರಿಕಾದಲ್ಲಿ ಇರುವ ಯೇಲ್ ವಿಶ್ವವಿದ್ಯಾನಿಲಯ ೨೦೧೧ರಲ್ಲಿ ''ಮಾರ್ಕ್ಸ್ ಹೇಳಿದ್ದು ಏಕೆ ಸರಿ?'' ಎಂಬ ಅವನ ೨೪೦ ಪುಟಗಳ ಪುಸ್ತಕವನ್ನು ಪ್ರಕಟಿಸಿತು. ಮಾರ್ಕ್ಸ್‌ವಾದವನ್ನು ಖಂಡಿಸುವವರು ಸಾಮಾನ್ಯವಾಗಿ ಎತ್ತುತ್ತಲೇ ಬಂದಿರುವ ಆಕ್ಷೇಪಗಳನ್ನು ಪರೀಕ್ಷಿಸಿ ಸತ್ವಯುತವಾದ ವಿಮರ್ಶೆ ಮಾಡುವುದು ಅವನ ಉದ್ದೇಶ. ಈ ಪುಸ್ತಕವನ್ನು ಅನುಸರಿಸಿ ಡಾ|| ಜಿ. ರಾಮಕೃಷ್ಣ ಅವರು ಸಂಗ್ರಹ ರೂಪದಲ್ಲಿ ಈಗಲ್‌ಟನ್‌ನ ಪ್ರತಿಪಾದನೆಯನ್ನು ಪರಿಚಯಿಸಿದ್ದಾರೆ. ಹತ್ತು ಕಂತುಗಳಲ್ಲಿ ಅದನ್ನು 'ಹೊಸತು' ಪ್ರಕಟಿಸಲು ಹರ್ಷಿಸುತ್ತದೆ. ಇದು ಮೂರನೆಯ ಕಂತು.





ಮಾರ್ಕ್ಸ್‌ವಾದದಲ್ಲಿ ಬೇರೆ ರಾಜಕೀಯ ಸಿದ್ಧಾಂತಗಳಲ್ಲಿ ಇಲ್ಲದ್ದು ಏನಿದೆ? ಕ್ರಾಂತಿಯ ವಿಚಾರವಂತೂ ಅಲ್ಲ, ಏಕೆಂದರೆ ಅದು ಮಾರ್ಕ್ಸ್‌ಗೆ ಮುನ್ನವೂ ಇತ್ತು. ಸಾಮ್ಯವಾದ ಅವನ ವಿಶೇಷ ಎನ್ನಲಾಗದು, ಅದರ ಕಲ್ಪನೆ ಬಹು ಪ್ರಾಚೀನವಾದ್ದು. ಸಮಾಜವಾದಿ ವಿಚಾರಗಳು ಸಹ ಯೂರೋಪಿನ ದುಡಿಯುವ ವರ್ಗಕ್ಕೆ ಮಾರ್ಕ್ಸ್‌ಗಿಂತ ಮುಂಚೆಯೇ ಪರಿಚಿತವಾಗಿದ್ದವು. ಹಾಗಿದ್ದರೆ ಅವನ ಚಿಂತನೆಯಲ್ಲಿ ಅಂಥ ಮಹತ್ವದ್ದೇನು? ಕ್ರಾಂತಿಕಾರಿ ಪಕ್ಷಗಳ ಚರಿತ್ರೆ ಸಹ ಹಳೆಯದು; ಫ್ರಾನ್ಸಿನ ೧೭೮೯ರ ಕ್ರಾಂತಿಯ ವೇಳೆಯಲ್ಲೇ ಅಂತಹ ಪಕ್ಷದ ರೂಪರೇಖೆ ಲಭ್ಯವಿತ್ತು. ಹೋಗಲಿ, ಸಾಮಾಜಿಕ ವರ್ಗ ಎಂಬುದು ಅವನ ಕೊಡುಗೆಯೇ? ಅಲ್ಲವೆಂದು ಸ್ವತಃ ಅವನೇ ದಾಖಲಿಸಿದ್ದಾನೆ. ಅದರ ಪರಿಷ್ಕಾರ ಅವನದು, ಅಷ್ಟೆ. ಕಾರ್ಮಿಕ ವರ್ಗದ ಬಗೆಗೂ (ಪ್ರಾಲಿಟೇರಿಯಟ್) ೧೯ನೆಯ ಶತಮಾನದ ಚಿಂತಕರಿಗೆ ಪರಿಚಯವಿತ್ತು. ಇನ್ನು 'ಅನಾಥಪ್ರಜ್ಞೆ' (ಏಲಿನಿಯೇಶನ್) ವಿಷಯಕ್ಕೆ ಬಂದರೆ ಅದನ್ನು ಮಾರ್ಕ್ಸ್ ಬಹುಮಟ್ಟಿಗೆ ಹೆಗೆಲ್‌ನಿಂದ ಪಡೆದಿದ್ದ. ಐರ್ಲೆಂಡಿನ ಸ್ತ್ರೀವಾದಿ ಸಮಾಜವಾದಿ ವಿಲಿಯಂ ತಾಂಪ್‌ಸನ್ ಸಹ ಅದನ್ನು ಪ್ರತಿಪಾದಿಸಿದ್ದ. ಸಾಮಾಜಿಕ ಜೀವನದಲ್ಲಿ ಆರ್ಥಿಕತೆಗೆ ಮಾರ್ಕ್ಸ್‌ನಂತೆ ಬೇರೆಯವರೂ ಪ್ರಾಧಾನ್ಯ ನೀಡಿದ್ದರು. ಉತ್ಪಾದಕರು ಸಹಕಾರ ಸಂಘಗಳನ್ನು ಸ್ಥಾಪಿಸಿಕೊಂಡು ಶೋಷಣೆಯನ್ನು ದೂರಮಾಡಬಹುದು, ಅದನ್ನು ಕ್ರಾಂತಿಕಾರಿ ಸಾಧನಗಳಿಂದ ಮಾಡಬಹುದೆನ್ನುತ್ತಾನೆ ಮಾರ್ಕ್ಸ್. ಮಾರ್ಕ್ಸ್‌ವಾದಿಗಳಲ್ಲದ ಅನೇಕರು ಇದೇ ಬಗೆಯ ಅಭಿಪ್ರಾಯ ಹೊಂದಿದ್ದುದು ಅಪರೂಪವೇನಲ್ಲ.

ಮಾರ್ಕ್ಸ್‌ನದು ಎರಡು ಪ್ರಮುಖ ಧೋರಣೆಗಳಿವೆ: (ಅ) ಸಮಾಜ ಜೀವನದಲ್ಲಿ ಆರ್ಥಿಕತೆಯ ಪ್ರಧಾನ ಪಾತ್ರ, ಮತ್ತು (ಆ) ಇತಿಹಾಸದಲ್ಲಿ ಉತ್ಪಾದನಾ ವಿಧಾನಗಳು ಕ್ರಮವಾಗಿ ಒಂದಾದಮೇಲೆ ಒಂದರಂತೆ ಬಂದಿರುವುದು. ಇವು ಸಹ ಪೂರ್ತಿಯಾಗಿ ಮಾರ್ಕ್ಸ್‌ನದೇ ಎನ್ನುವಂತಿಲ್ಲ. ಹಾಗಾದರೆ ಅವನ ವಿಶಿಷ್ಟ ಚಿಂತನೆಯು ವರ್ಗ ಹೋರಾಟಕ್ಕೆ ಸಂಬಂಧಿಸಿದ್ದೆ? ಸ್ವಲ್ಪಮಟ್ಟಿಗೆ ಹೌದು. ಆದರೆ ಅವನಿಗೆ ಮುಂಚಿನ ಕೆಲವರಿಗೂ ಇದು ಹೊಳೆದಿತ್ತು. ಹಿಂದಿನ ಸಾಹಿತ್ಯವನ್ನು ಆಲೋಡಿಸಿದರೆ ಅದನ್ನು ಸೂಚಿಸುವ ತುಣುಕುಗಳು ಸಿಗುತ್ತವೆ. ಉದಾಹರಣೆಗೆ, ಐರ್ಲೆಂಡಿನ ಆಲಿವರ್ ಗೋಲ್ಡ್‌ಸ್ಮಿತ್. ಅಥವಾ ಅವನಿಗೂ ಹಿಂದಿನ ಜಾನ್ ಮಿಲ್ಟನ್. ಅಷ್ಟೇಕೆ, ಶೇಕ್ಸ್‌ಪಿಯರ್‌ನ ಲಿಯರ್ ದೊರೆ ಸಹ ಅಂತಹ ಅಭಿಪ್ರಾಯ ವ್ಯಕ್ತಪಡಿಸಿದ್ದಾನೆ. ವಾಲ್ಟೇರ್, ರೂಸೋ, ಅವರ ಇಂಗಿತದಲ್ಲೂ ಇದು ಅಡಗಿದೆ. ಭಾರತೀಯ ಸಾಹಿತ್ಯದಲ್ಲಿ ಇಂತಹ ಹತ್ತಾರು ನಿದರ್ಶನಗಳಿವೆ.

ಆದಾಗ್ಯೂ, ಮಾರ್ಕ್ಸ್‌ನ ವೈಶಿಷ್ಟ್ಯದಲ್ಲಿ ಅದು ಮುಖ್ಯವಾದ್ದು ಮತ್ತು ಅನನ್ಯವಾದ್ದು. ಇತರರು ಅದನ್ನು ಸುಮ್ಮನೆ ಗಮನಿಸಿದ್ದಾರೆ, ಆದರೆ ಮಾರ್ಕ್ಸ್ ಅದನ್ನು ಮಾನವ ಇತಿಹಾಸದ ಚಾಲಕ ಶಕ್ತಿಯೆಂದು ಗುರುತಿಸಿದ್ದಾನೆ. ಮಾನವ ಅಭಿವೃದ್ಧಿಗೆ ಅದರದೇ ಮೂಲಭೂತ ಕುಮ್ಮಕ್ಕು. ಅಂತಹ ವಿಚಾರ ಮಿಲ್ಟನ್ ಪರಿಭಾವಿಸಿಕೊಳ್ಳಲಾಗುತ್ತಿರಲಿಲ್ಲ. ಸಾಮಾನ್ಯವಾಗಿ ಬೇರೆಯವರು ಸಮಾಜವನ್ನು ಒಂದು ಸಾವಯವ ಐಕ್ಯ ಘಟಕ ಎನ್ನುತ್ತಾರೆ, ಆದರೆ ಮಾರ್ಕ್ಸ್ ಅದರಲ್ಲಿ ವಿಭಜನೆಯನ್ನು ಕಾಣುತ್ತಾನೆ. ಆ ಘಟಕದಲ್ಲಿ ಪರಸ್ಪರ ವಿರೋಧಿ ಹಿತಾಸಕ್ತಿಗಳು ಮೇಳೈಸಿವೆ. ಉದಾಹರಣೆಗೆ, ಬಂಡವಳಿಗ ವರ್ಗವು ಕೂಲಿಯನ್ನು ಕಡಿಮೆ ಮಟ್ಟದಲ್ಲಿ ಇರಿಸಬಯಸುತ್ತದೆ; ಕೂಲಿಕಾರರು ಅದನ್ನು ಸದಾ ಮೇಲಕ್ಕೆತ್ತರಿಸುವ ಆಸಕ್ತಿ ಹೊಂದಿರುತ್ತಾರೆ.

ಕಮ್ಯುನಿಸ್ಟ್ ಘೋಷಣಾಪತ್ರದ ಮಾರ್ಕ್ಸ್ ಮಾತು ಪ್ರಸಿದ್ಧವಾಗಿದೆ: ''ಈವರೆಗಿನ ಎಲ್ಲ ಸಮಾಜಗಳ ಇತಿಹಾಸವೂ ವರ್ಗ ಹೋರಾಟಗಳ ಇತಿಹಾಸವೇ ಆಗಿದೆ.'' ಅದನ್ನು ಅಕ್ಷರಶಃ ಹಾಗೆಯೇ ಅರ್ಥಮಾಡಿಕೊಳ್ಳಬಾರದು. ನಾನು ವಾರದ ಹಿಂದೆ ಎಡವಿ ಬಿದ್ದು ಗಾಯಮಾಡಿಕೊಂಡಿದ್ದು ಇತಿಹಾಸ ಎನ್ನುವುದಾದರೆ ಅದು ವರ್ಗ ಹೋರಾಟದ ಭಾಗವೇನೂ ಅಲ್ಲ, ಅಥವಾ ಭಾರತವನ್ನು ಪ್ರತಿನಿಧಿಸಿದ ಹಾಕಿ ತಂಡವು ಎಲ್ಲ ಪಂದ್ಯಗಳಲ್ಲೂ ಸೋತಿದ್ದು ಇತಿಹಾಸ, ಆದರೆ ಅದು ವರ್ಗ ಹೋರಾಟವಲ್ಲ. ಇತಿಹಾಸವೆಂದರೆ ಸಾರ್ವಜನಿಕ ಸಂಗತಿಗಳ ಸಂದರ್ಭದ್ದು, ಕೇವಲ ಖಾಸಗಿಯಾದುದಲ್ಲ. ಅದಕ್ಕೂ ಒಂದು ಮಿತಿ ಇದೆ: ಕಳೆದ ತಿಂಗಳು ಎರಡು ಗೂಂಡಾ ಪಡೆಗಳು ಸಾರ್ವಜನಿಕವಾಗಿ ಹೊಡೆದಾಡಿ ಕೊಲೆ ಸಂಭವಿಸಿತು, ಆದರೆ ಅದು ನಿಜಕ್ಕೂ ಸಾರ್ವಜನಿಕವೆ? ಇತಿಹಾಸವೆಂದರೆ ಸಾರ್ವಜನಿಕ ಘಟನೆಗಳಾಗಿರಬೇಕು. ಅದನ್ನು ಹಾಗೆಂದು ತೀರ್ಮಾನಿಸುವವರು ಯಾರು? ರೈಲಿನಲ್ಲಿ ಬೆಂಕಿ ಬಿದ್ದು ಜನ ಸತ್ತಿದ್ದು ವರ್ಗ

ಹೋರಾಟದ ಪರಿಣಾಮವಾಗಿಯೆ ? ಚೆ ಗೆವಾರನ ಮೇಲೆ ಒಬ್ಬ ಸಿ.ಐ.ಎ. ಗೂಢಚಾರ ಲಾರಿ ಹರಿಸಿ ಅವನನ್ನು ಕೊಂದರೆ ಅದು ಖಂಡಿತಕ್ಕೂ ವರ್ಗ ಹೋರಾಟ ಎನಿಸಿ ಕೊಳ್ಳುತ್ತದೆ. ಅಥವಾ, ಸತತವಾಗಿ ಮಹಿಳೆಯ ಮೇಲೆ ದೌರ್ಜನ್ಯವೆಸಗಲಾಗಿದೆಯಲ್ಲ ಅದು ವರ್ಗ ಹೋರಾಟದ ಒಂದು ಭಾಗವೆನಿಸಿಕೊಳ್ಳುತ್ತದೆ. ಜರುಗುವ ಪ್ರತಿಯೊಂದು ಸಂಗತಿಯೂ ವರ್ಗ ಹೋರಾಟವಲ್ಲವೆಂಬುದು ಸ್ಪಷ್ಟವಾಗಿದೆ. ಅಷ್ಟಕ್ಕೂ ಕಮ್ಯುನಿಸ್ಟ್ ಘೋಷಣಾಪತ್ರವು ಒಂದು ರಾಜಕೀಯ ಪ್ರಚಾರದ ಸಾಮಗ್ರಿ; ಅದರಲ್ಲಿ ಆಲಂಕಾರಿಕ ಮಾತುಗಳು ಅನಿರೀಕ್ಷಿತವಲ್ಲ. ಪ್ರಶ್ನೆ ಇದು : ಮಾರ್ಕ್ಸ್‌ನ ಮಾತನ್ನು ಸರ್ವಥಾ ಎಲ್ಲಕ್ಕೂ ಅನ್ವಯಿಸಬೇಕೆ ? ಮಾರ್ಕ್ಸ್‌ವಾದವು ಮಲ್ಲಿಗೆಯ ಪರಿಮಳದ ಬಗ್ಗೆ ಏನನ್ನೂ ಹೇಳುವುದಿಲ್ಲ; ಮಸಾಲೆ ದೋಸೆಯಂತೂ ಮಾರ್ಕ್ಸ್‌ಗೆ ಗೊತ್ತೇ ಇಲ್ಲ. ಹಾಗೆಂದು ಮಾರ್ಕ್ಸ್‌ವಾದ ಕಳಪೆಯದಾಗುತ್ತದೆಯೆ ? ಅದು 'ಸಕಲ ದರ್ಶನ' ಎಂಬರ್ಥದ ತತ್ವಶಾಸ್ತ್ರವಲ್ಲ. ಅದು ಹೇಳದ್ದೆಷ್ಟೋ ಇದೆ. 'ಮಾರ್ಕ್ಸ್‌ಗೆ ಋಗ್ವೇದ ಗೊತ್ತಿರಲಿಲ್ಲ' ಎಂದು ಪ್ರಾಸಂಗಿಕವಾಗಿ ಹೇಳಿದ್ದಕ್ಕೆ ಒಮ್ಮೆ ಶಂ. ಬಾ. ಜೋಶಿಯವರು ತೀರಾ ಕೋಪಗೊಂಡಿದ್ದರು; ಅದೂ ಬೀಚಿಯವರ ಮನೆಯಲ್ಲಿ. ಮಾರ್ಕ್ಸ್‌ಗೆ ವಾತ್ಸ್ಯಾಯನನ ಕಾಮಶಾಸ್ತ್ರವೂ ತಿಳಿದಿರಲಿಲ್ಲ. ಅದಕ್ಕೇನು ಮಾಡುವುದು ! ಮಾರ್ಕ್ಸ್‌ವಾದವು ಪ್ರೇಮ, ಸಾವು, ಜೀವನದ ಅಂತರಾರ್ಥ, ಹೀಗೆ ಎಲ್ಲವನ್ನೂ ಅಂತರ್ಗತ ಗೊಳಿಸಿಕೊಳ್ಳಬೇಕಾಗಿತ್ತೆ ? ಅದಕ್ಕೆ ವಿಚಾರ ವೈಶಾಲ್ಯವಿಲ್ಲ ವೆಂದಲ್ಲ, ನಾಗರಿಕತೆಯ ಉಗಮದಿಂದ ಹಿಡಿದು ಭವಿಷ್ಯದ ವರೆಗೆ ಅದರ ವ್ಯಾಪ್ತಿ ಇದೆ. ಆದರೆ ಮಾರ್ಕ್ಸ್‌ವಾದವೇ ಸರ್ವಸ್ವವಲ್ಲ. ವಿಜ್ಞಾನದ ಇತಿಹಾಸ, ಮತಧರ್ಮ, ಲೈಂಗಿಕತೆ, ಇವೆಲ್ಲಾ ವರ್ಗ ಹೋರಾಟದೊಡನೆ ಸಂಬಂಧ ಹೊಂದಿವೆ; ಆದರೆ ಅವನ್ನೆಲ್ಲಾ ಅಷ್ಟಕ್ಕೆ ಸೀಮಿತಗೊಳಿಸ ಲಾಗುವುದಿಲ್ಲ. 'ಆಧುನಿಕೋತ್ತರ' ಎಂಬ ಹೆಸರಿನ ದೃಷ್ಟಿಕೋನದಲ್ಲಿ ಒಂದು ಅಖಂಡ ಕಥನವಿರುತ್ತದೆ ಅಥವಾ ಹತ್ತಾರು ಸಣ್ಣಪುಟ್ಟ ಕಥನಗಳಿರುತ್ತವೆ. ಈ ದೃಷ್ಟಿ ದೋಷಪೂರ್ಣವಾದ್ದು. ಮಾರ್ಕ್ಸ್‌ನ ಮಾತಿನ ಅರ್ಥವನ್ನು ಗ್ರಹಿಸಬೇಕಾದ ಬಗೆ ಇದು : ಮಾನವ ಇತಿಹಾಸಕ್ಕೆ ವರ್ಗ ಹೋರಾಟವು ಅತಿ ಮೂಲಭೂತವಾದ್ದು, ಎಂದು; ಅಷ್ಟೆ.

ಸರಿ, ಆದರೆ ಹೇಗೆ ಮೂಲಭೂತ ? ಮತಧರ್ಮದ, ವಿಜ್ಞಾನದ, ಲೈಂಗಿಕ ಕಿರುಕುಳದ, ಇತಿಹಾಸಗಳಿಗಿಂತಲೂ ಅದು ಹೆಚ್ಚು ಮೂಲಭೂತವೆ ? ರಾಜಕೀಯ ಕ್ರಿಯೆಗೆ ಪ್ರೇರಣೆ ನೀಡುವ ಅಂಶಗಳಲ್ಲಿ ವರ್ಗವೇ ಅತಿಪ್ರಬಲ ವಾದದ್ದೆಂದು ಹೇಳಬರುವುದಿಲ್ಲ. ಜನಾಂಗೀಯ ಅನನ್ಯತೆಯ ಪಾತ್ರವನ್ನು ನೋಡಿ : ಮಾರ್ಕ್ಸ್‌ವಾದವು ಅದನ್ನು ಗಂಭೀರವಾಗಿ ಪರಿಗಣಿಸಿರಲಿಲ್ಲ. ಜನಾಂಗೀಯ ಮತ್ತು ಲೈಂಗಿಕ ಅಸಮಾನತೆ ಬಗೆಗೂ ಅದು ಅಷ್ಟು ವಿಶದವಾಗಿ ಚರ್ಚೆ ನಡೆಸಿರಲಿಲ್ಲ. ಆದರೆ ಅವೆಲ್ಲಾ ವರ್ಗ ಶೋಷಣೆಗೆ ಅಪ್ರಸ್ತುತವಾದುವಲ್ಲ. ಆದರೆ 'ಮೂಲಭೂತ' ಎಂದರೇನು? ಅದು ಬೇರೆ ಯಾವುದಕ್ಕೋ ಆಧಾರವೆಂಬ ಅರ್ಥದಲ್ಲಿ ಮೂಲಭೂತ. ಮತಧರ್ಮ, ವೈಜ್ಞಾನಿಕ ಅನ್ವೇಷಣೆ, ಮಹಿಳೆಯ ಮೇಲಿನ ದೌರ್ಜನ್ಯ, ಇವೆಲ್ಲಾ ವರ್ಗ ಹೋರಾಟಕ್ಕೆ ಸಂಬಂಧಿಸಿವೆ, ಆದರೆ ಅದಷ್ಟೇ ಅವಕ್ಕೆ ಆಧಾರವಲ್ಲ. ವರ್ಗ ಹೋರಾಟದ ಅಭಾವದಲ್ಲಿ ಬೌದ್ಧಮತ, ಖಭೌತ ವಿಜ್ಞಾನ, ವಿಶ್ವಸುಂದರಿ ಸ್ಪರ್ಧೆ,




ಮುಂತಾದುವೆಲ್ಲಾ ಮಾಯವಾಗಿಬಿಡುವುದಿಲ್ಲ. ಅವಕ್ಕೆಲ್ಲಾ ತಮ್ಮದೇ ಆದ ಪ್ರತ್ಯೇಕ ಇತಿಹಾಸಗಳಿರುತ್ತವೆ.

ಹಾಗಾದರೆ ವರ್ಗ ಹೋರಾಟವು ಯಾವುದಕ್ಕೆ 'ಮೂಲಭೂತ' ಎನ್ನಬೇಕು ? ಅದಕ್ಕೆ ಮಾರ್ಕ್ಸ್‌ನ ಉತ್ತರ ಇಬ್ಬಗೆಯದು : (ಅ) ಅನೇಕ ಘಟನೆಗಳು, ಸಂಸ್ಥೆಗಳು ಮತ್ತು ಚಿಂತನಾ ವಿಧಾನಗಳು ವರ್ಗ ಹೋರಾಟಕ್ಕೆ ಸಂಬಂಧಿಸಿಲ್ಲ ವೆಂಬಂತೆ ತೋರುತ್ತವೆ, ಆದರೆ ಸಂಬಂಧಿಸಿವೆ; (ಆ) ಇತಿಹಾಸದ ಒಂದು ಘಟ್ಟದಿಂದ ಇನ್ನೊಂದಕ್ಕೆ ಕ್ರಮಿಸು ವಾಗಿನ ಅಲ್ಲೋಲ ಕಲ್ಲೋಲಗಳಿಗೆ ಅದರದೇ ನಿರ್ಣಾಯಕ ಪಾತ್ರ. ಮತ್ತೆ ಒತ್ತಿ ಹೇಳೋಣ : ಇತಿಹಾಸವೆಂದರೆ ''ನಡೆದಿರುವುದೆಲ್ಲ'' ಎಂದಲ್ಲ; ನಡೆದಿರುವುದೆಲ್ಲದರ ಹಿಂದೆ ಒಂದು ದಿಕ್ಕಿದೆಯಲ್ಲಾ, ಅದು ಇತಿಹಾಸ. ಅಂದರೆ, ಘಟನೆಗಳು ಜರುಗುವ ಕ್ರಮ. ಹಾಗೆಂದಮಾತ್ರಕ್ಕೆ ಸಾಮಾಜಿಕ ಸಿದ್ಧಾಂತಗಳ ಪೈಕಿ ವರ್ಗ ಹೋರಾಟವು ಮಾತ್ರ ಮಾರ್ಕ್ಸ್‌ನ ಚಿಂತನೆಯನ್ನು ಭಿನ್ನೈಸುತ್ತದೆಂದೇನೂ ಇಲ್ಲ. ಜೊತೆಗೆ ಉತ್ಪಾದನಾ ವಿಧಾನದ ಪ್ರಸ್ತಾಪವೂ ಇದೆ. ಮಾರ್ಕ್ಸ್‌ನ ವೈಶಿಷ್ಟ್ಯ ಇರುವುದು ಇದರಲ್ಲೇ. ವರ್ಗ ಹೋರಾಟ ಮತ್ತು ಉತ್ಪಾದನಾ ವಿಧಾನ, ಎರಡನ್ನೂ ಒಂದುಗೂಡಿಸಿ ಇತಿಹಾಸದ ಗತಿಯನ್ನು ನಿರೂಪಿಸುವುದು. ಅದರಲ್ಲಿದೆ ಮಾರ್ಕ್ಸ್‌ನ ನಾವೀನ್ಯತೆ. ಅವೆರಡೂ ಹೇಗೆ ಜೊತೆಗೂಡಿ ಮುನ್ನಡೆಯುತ್ತವೆಂಬುದರ ಬಗ್ಗೆ ಬೇಕಾದಷ್ಟು ಚರ್ಚೆ ನಡೆದಿದೆ. ಅದನ್ನು ಕುರಿತು ಮಾರ್ಕ್ಸ್ ನಿರರ್ಗಳವಾದ ಪ್ರತಿಪಾದನೆಯನ್ನೇನೂ ಮಾಡಹೋಗಲಿಲ್ಲ. ಸಂಕ್ಷಿಪ್ತವಾಗಿ ಹೇಳುವುದಾದರೆ ಮಾರ್ಕ್ಸ್‌ವಾದವು ದೀರ್ಘಕಾಲೀನ ಐತಿಹಾಸಿಕ ಬದಲಾವಣೆಯ ಸಿದ್ಧಾಂತ ಮತ್ತು ಆಚರಣೆಯ ಸೂತ್ರ. ತಕರಾರು ಬರುವುದು ಎಲ್ಲೆಂದರೆ ಈ ಸೂತ್ರವು ಮೊದಲ ನೋಟಕ್ಕೆ ಕಾಣುವಷ್ಟು ಸರಳವಲ್ಲ ಎಂಬುದರಲ್ಲಿ.

ಉತ್ಪಾದನಾ ವಿಧಾನವೆಂದರೆ ಮಾರ್ಕ್ಸ್ ಪ್ರಕಾರ ಏನು ? ಕೆಲವು ಉತ್ಪಾದನಾ ಶಕ್ತಿಗಳು ಮತ್ತು ಕೆಲವು ಉತ್ಪಾದನಾ ಸಂಬಂಧಗಳ ಸಂಯೋಗ, ಎಂದು. ಉತ್ಪಾದನಾ ಶಕ್ತಿ ಎಂದರೆ ಉತ್ಪಾದನೆಗೆ ಉಪಯೋಗಿಸಲಾಗುವ ಯಾವುದೇ ಸಲಕರಣೆ; ಅದರಿಂದಲೇ ಪ್ರಪಂಚದಲ್ಲಿ ನಮಗೆ ಭೌತಿಕ ಜೀವನ ಸಾಧ್ಯವಾಗುವುದು. ಉತ್ಪಾದನಾ ಉದ್ದೇಶಗಳಿಗೆ ಪ್ರಕೃತಿಯನ್ನು ಬಳಸಿಕೊಳ್ಳುವುದು, ಅದರ ನಿಯಮ ತಿಳಿದು ಅದರಿಂದ ಮುನ್ನಡೆ ಸಾಧಿಸುವುದು, ಇದೆಲ್ಲಾ ಉತ್ಪಾದನಾ ಶಕ್ತಿಯ ಭಾಗವೇ. ಉದಾಹರಣೆಗೆ, ಕಂಪ್ಯೂಟರ್ ಎನ್ನಿ. ಅದು ಭೌತಿಕ ಉತ್ಪನ್ನಕ್ಕೆ ಸಾಧನ ವಾದರೆ ಅದು ಉತ್ಪಾದನಾ ಶಕ್ತಿ; ಅದೇ, ಕೇವಲ ಕಾಡುಹರಟೆಗೆ ಬಳಕೆಯಾದರೆ ಅದು ಆ ಗೌರವಕ್ಕೆ ಪಾತ್ರ ವಾಗುವುದಿಲ್ಲ. ಅಥವಾ, ಒಂದು ಕತ್ತೆ ಇದೆ ಎನ್ನೋಣ. ನಮ್ಮ ದೇಶದಲ್ಲಿ ಈಗಲೂ ಅದೊಂದು ಉತ್ಪಾದನಾ ಶಕ್ತಿಯ ಭಾಗವೇ ಆಗಿದೆ. ಮಾನವ ದುಡಿಮೆ ಇನ್ನೊಂದು ಅಂತಹ ಶಕ್ತಿ. ವಿಶೇಷವೇನೆಂದರೆ, ಅವು (ಅಂದರೆ, ಕತ್ತೆ-ಮಾನವ ದುಡಿಮೆ, ಇತ್ಯಾದಿ) ಯಾವತ್ತೂ ಕಚ್ಚಾ ಸ್ವರೂಪದಲ್ಲಿ ಅಸ್ತಿತ್ವದಲ್ಲಿರುವುದಿಲ್ಲ. ಅವು ಸದಾ ಕೆಲವು ಸಾಮಾಜಿಕ ಸಂಬಂಧಗಳ ಜೊತೆಜೊತೆಗೆ ಇರುವಂಥವು. ಅದನ್ನೇ ಮಾರ್ಕ್ಸ್ ಸಾಮಾಜಿಕ ವರ್ಗಗಳ ನಡುವಣ ಸಂಬಂಧಗಳು ಎಂದು ಹೆಸರಿಸುವುದು. ಒಂದು ಸಾಮಾಜಿಕ ವರ್ಗವು ಉತ್ಪಾದನಾ ಸಾಧನಗಳ ಮೇಲೆ ಒಡೆತನ ಹೊಂದಿರಬಹುದು, ಅವನ್ನು ನಿಯಂತ್ರಿಸಬಹುದು; ಆದರೆ ಅದೇ ಇನ್ನೊಂದು ಸಾಮಾಜಿಕ ವರ್ಗವು ಅದರಿಂದಲೇ ಶೋಷಣೆಗೆ ಗುರಿಯಾಗಿರಬಹುದು.

ಇತಿಹಾಸವು ಬಿಚ್ಚಿಕೊಳ್ಳುತ್ತಿದ್ದಂತೆ ಉತ್ಪಾದನಾ ಸಾಧನಗಳು ಅಭಿವೃದ್ಧಿ ಹೊಂದುತ್ತಾ ಹೋಗುತ್ತವೆ; ಅಂದರೆ, ಸದಾಕಾಲವೂ ಅವು ಅಭಿವೃದ್ಧಿಯಾಗುತ್ತಲೇ ಇರುತ್ತವೆ ಎಂದಲ್ಲ, ಎನ್ನುತ್ತಾನೆ ಮಾರ್ಕ್ಸ್. ಕೆಲವೇಳೆ ಅವು ಸ್ಥಗಿತ ಗೊಳ್ಳುತ್ತವೆ, ಬಹುಕಾಲ ಹಾಗೆಯೇ ಉಳಿದುಬಿಡುತ್ತವೆ. ಹಾಗಿದ್ದರೆ, ಉತ್ಪಾದನಾ ಸಾಧನಗಳ ಅಭಿವೃದ್ಧಿಗೆ ಯಾರು ಹರಿಕಾರರು ? ಯಾವ ಸಾಮಾಜಿಕ ವರ್ಗದ ಅಧೀನದಲ್ಲಿ ಭೌತಿಕ ಉತ್ಪಾದನೆ ಇರುತ್ತದೋ ಅದು ಹರಿಕಾರನ ಪಾತ್ರ ನಿರ್ವಹಿಸುತ್ತದೆ. ಇತಿಹಾಸವನ್ನು ಹೀಗೆ ನಿರೂಪಿಸಿದಾಗ ಒಂದು ಪ್ರಶ್ನೆ ಏಳುತ್ತದೆ : ಯಾವ ವರ್ಗವು ಅವನ್ನು ಅಭಿವೃದ್ಧಿಗೊಳಿಸಲು ಸಮರ್ಥವೋ ಅದನ್ನು ಉತ್ಪಾದನಾ ಶಕ್ತಿಗಳು ತಾವೇ ಸ್ವತಃ ''ಆಯ್ಕೆ'' ಮಾಡಿಕೊಳ್ಳುತ್ತವೆಯೆ ? ಅದಕ್ಕೆ ಉತ್ತರ ಇತಿಹಾಸದಲ್ಲೇ ಇದೆ : ಅಸ್ತಿತ್ವದಲ್ಲಿರುವ ಸಾಮಾಜಿಕ ಸಂಬಂಧಗಳು ಯಾವ ಹಂತದಲ್ಲಿ ಉತ್ಪಾದನಾ ಶಕ್ತಿಗಳನ್ನು ವೃದ್ಧಿಗೊಳಿಸುವುದರಲ್ಲಿ ವಿಫಲವಾಗಿ ಆ ವೃದ್ಧಿಗೆ ಅಡಚಣೆಯುಂಟುಮಾಡುತ್ತವೋ ಆಗ ವೈರುಧ್ಯ ಸ್ಪಷ್ಟವಾಗಿ ಗೋಚರಿಸುತ್ತದೆ. ಅದು ಸಂಘರ್ಷವನ್ನುಂಟುಮಾಡಿ ರಾಜಕೀಯ ಕ್ರಾಂತಿಗೆ ಎಡೆಮಾಡಿಕೊಡುತ್ತದೆ. ವರ್ಗ ಹೋರಾಟವು ಹರಿತಗೊಳ್ಳುವ ಸಂದರ್ಭ ಅದು : ಉತ್ಪಾದನಾ ಶಕ್ತಿಗಳನ್ನು ಅಭಿವೃದ್ಧಿಗೊಳಿಸಲು ಸಾಮರ್ಥ್ಯವಿರುವ ಸಾಮಾಜಿಕ ವರ್ಗವು ಹಿಂದಿನ ಯಜಮಾನರ ಅಧಿಕಾರವನ್ನು ಆಗ ತನ್ನದಾಗಿಸಿಕೊಳ್ಳುತ್ತದೆ. ಉದಾಹರಣೆಗೆ, ಬಂಡವಾಳ ಶಾಹಿಯು ಬಿಕ್ಕಟ್ಟಿನಿಂದ ಬಿಕ್ಕಟ್ಟಿಗೆ ಸಿಲುಕಿಕೊಳ್ಳುವುದು, ಕುಸಿತದಿಂದ ಕುಸಿತಕ್ಕೆ ಈಡಾಗುವುದು, ಅದರ ಸಾಮಾಜಿಕ ಸಂಬಂಧಗಳ ಕಾರಣದಿಂದ. ಹೀಗೆ ಪತನಗೊಳ್ಳುತ್ತಾ ಹೋಗುತ್ತಿದ್ದಂತೆ ಒಂದು ಘಟ್ಟದಲ್ಲಿ ದುಡಿಯುವ ವರ್ಗವು ಉತ್ಪಾದನಾ ಶಕ್ತಿಗಳನ್ನು ಸ್ವಾಧೀನಕ್ಕೆ ತೆಗೆದುಕೊಂಡು ಉತ್ಪಾದನೆಯನ್ನು ತನ್ನ ನಿಯಂತ್ರಣಕ್ಕೆ ಒಳಪಡಿಸಿಕೊಳ್ಳುತ್ತದೆ. ಮಾರ್ಕ್ಸ್ ಒಂದೆಡೆ ಹೇಳುವಂತೆ, ತನ್ನ ಪರಿಧಿಯಲ್ಲಿ ಉತ್ಪಾದನಾ ಶಕ್ತಿಗಳು ಎಷ್ಟು ಸಾಧ್ಯವೋ ಅಷ್ಟು ಅಭಿವೃದ್ಧಿ ಹೊಂದುವವರೆಗೆ ಹಿಂದಿನ ಹಂತದ ಸಾಮಾಜಿಕ ವರ್ಗದಿಂದ

ಹೊಸ ಸಾಮಾಜಿಕ ವರ್ಗವು ಅವನ್ನು ಸೆಳೆದುಕೊಳ್ಳುವುದಿಲ್ಲ. ಮಾರ್ಕ್ಸ್‌ನ ಪ್ರಸಿದ್ಧ ನಿರೂಪಣೆಯೊಂದು ಹೀಗಿದೆ : ''ಸಮಾಜದ ಭೌತಿಕ ಉತ್ಪಾದನಾ ಶಕ್ತಿಗಳು ಬೆಳೆಯುತ್ತಿದ್ದಂತೆ ಒಂದು ನಿರ್ದಿಷ್ಟ ಹಂತದಲ್ಲಿ ಪ್ರಸ್ತುತ ಉತ್ಪಾದನಾ ಸಂಬಂಧಗಳೊಂದಿಗೆ ಅವು ವೈರುಧ್ಯದ ನೆಲೆಯನ್ನು ಮುಟ್ಟುತ್ತವೆ. ಅದನ್ನೇ ಕಾನೂನಿನ ಪರಿಭಾಷೆಯಲ್ಲಿ ಹೇಳುವುದಾದರೆ, ಆವರೆಗಿನ ಆಸ್ತಿ ಸಂಬಂಧಗಳಿಗೆ ಉತ್ಪಾದನಾ ಸಂಬಂಧಗಳು ವಿರೋಧವಾಗಿ ನಿಲ್ಲುತ್ತವೆ. ಉತ್ಪಾದನಾ ಶಕ್ತಿಗಳನ್ನು ಬೆಳೆಸುತ್ತಿದ್ದ ಸಂಬಂಧಗಳು ಆ ಶಕ್ತಿಗಳ ಬೆಳವಣಿಗೆಗೆ ತೊಡರು ಉಂಟುಮಾಡುವ ಸನ್ನಿವೇಶ ಅದು. ಸಾಮಾಜಿಕ ಕ್ರಾಂತಿಯ ಪರ್ವ ಆರಂಭವಾಗುವುದು ಆಗಲೇ.''

ಈ ಸಿದ್ಧಾಂತವನ್ನು ಕುರಿತಂತೆ ಮಾರ್ಕ್ಸ್‌ವಾದಿಗಳಲ್ಲಿ ಭಿನ್ನಾಭಿಪ್ರಾಯಗಳಿವೆ : ಮೊದಲನೆಯದಾಗಿ, ಉತ್ಪಾದನಾ ಶಕ್ತಿಗಳು ಸಾಮಾನ್ಯವಾಗಿ ವಿಕಾಸಗೊಳ್ಳುತ್ತಾ ಹೋಗುತ್ತಿರುತ್ತವೆಂದು ಭಾವಿಸುವುದೇಕೆ ? ತಾಂತ್ರಿಕ ಬೆಳವಣಿಗೆಯು ಸಹಜವಾಗಿಯೇ ವಿಸ್ತಾರಗೊಳ್ಳುತ್ತದೆ. ಉತ್ಪಾದನೆಯ ಹೆಚ್ಚಳ ಮತ್ತು ದಕ್ಷತೆಯನ್ನು ಜನ ಸ್ವಾಗತಿಸುತ್ತಾರೆ. ಮಾನವನಿಗೆ ತರ್ಕಬುದ್ಧಿ ಮತ್ತು ಕೆಲಸವನ್ನು ಸುಲಭವಾಗಿ ಮಾಡುವಂತಿರಬೇಕೆಂಬ ಆಶಯ ಎರಡೂ ಇವೆ. ಅದಕ್ಕೇ ತಾನೆ ದೊಡ್ಡ ಮಾಲ್‌ಗಳಲ್ಲಿ ಜನ ಉದ್ದನೆಯ ಸಾಲಿನಲ್ಲಿ ನಿಂತು ಹಣ ಪಾವತಿಸುವುದು ! ಅವರಿಗೆ ಎಲ್ಲಾ ಒಂದೇ ಕಡೆ ಸಿಕ್ಕಿಬಿಡಬೇಕೆಂಬ ತುರ್ತು. ಈ-ಮೇಲ್ ಯುಗದಲ್ಲಿ ಶಿಲಾಶಾಸನ ಬರೆಸುವ ಹುಚ್ಚು ಅಶೋಕ ಮತ್ತೆ ಬಂದಾನೆ ? ತಂತ್ರಜ್ಞಾನವನ್ನು ಮುಂದಿನ ಪೀಳಿಗೆಗೆ ವರ್ಗಾಯಿಸುತ್ತಲೂ ಇರುತ್ತಾನೆ ಮಾನವ. ಅದು ಕಳೆದುಹೋಗುವುದು ವಿರಳ. ಇನ್ನೂ ಉತ್ತಮ ವಿಧಾನ ದೊರೆತಾಗ ಹಿಂದಿನ ವಿಧಾನವನ್ನು ಕೈಬಿಡಬಹುದು, ಆದರೆ ಹಿಂದಿನ ತಂತ್ರಜ್ಞಾನ ಅಳಿಸಿ ಹೋಗದು. ಹೀಗಿರುವಾಗ, ಉತ್ಪಾದನಾ ಶಕ್ತಿಗಳು ಕೆಲವೊಮ್ಮೆ ವೇಗವಾಗಿ ಬೆಳೆಯುವುದು, ಮತ್ತೆ ಕೆಲವೊಮ್ಮೆ ಸ್ಥಗಿತಗೊಳ್ಳುವುದು ಏಕೆ ? ಇದಕ್ಕೆ ವಿವರಣೆ ಮಾರ್ಕ್ಸ್‌ನ ಉದ್ಧೃತ ವಾಕ್ಯಗಳಲ್ಲಿಲ್ಲ. ಆಯಾ ಸಂದರ್ಭದ ಸಾಮಾಜಿಕ ಸಂಬಂಧಗಳು ತಾಂತ್ರಿಕ ಅಭಿವೃದ್ಧಿಗೆ ಕಾರಣ. ಉತ್ಪಾದನಾ ಶಕ್ತಿಗಳನ್ನು ಹಿಗ್ಗಿಸುತ್ತಲೇ ಇರಬೇಕೆಂಬ ಒತ್ತಡ ಬಂಡವಾಳಶಾಹಿಗಿದೆ, ಆದರೆ ಅದನ್ನು ಇತಿಹಾಸದ ನಿಯಮವೆನ್ನಲಾಗದು. ಇದು ಕೆಲವು ಮಾರ್ಕ್ಸ್‌ವಾದಿಗಳ ನಿಲುವು. ಪ್ರತಿಯೊಂದು ಉತ್ಪಾದನಾ ವಿಧಾನವೂ ಸದಾ ಬೇರೊಂದಕ್ಕೆ ಬದಲಾಗುತ್ತಿರಬೇಕೆಂಬ ಒತ್ತಾಯವೇನೂ ಇಲ್ಲ, ಇದು ಮಾರ್ಕ್ಸ್‌ನ ಅಭಿಪ್ರಾಯವೂ ಆಗಿತ್ತೋ ಇಲ್ಲವೋ ತಿಳಿಯದು. ಎರಡನೆಯ ಪ್ರಶ್ನೆ ಇದು : ಉತ್ಪಾದಕ ಶಕ್ತಿಗಳ ಮುನ್ನಡೆಗಾಗಿ ಸಾಮಾಜಿಕ ವರ್ಗಗಳ ಆಯ್ಕೆಗೆ ಏನಾದರೊಂದು ಕ್ರಮವಿದೆಯೇ ? ಒಂದೊಂದು ಸಂದರ್ಭದಲ್ಲಿ ಒಂದೊಂದು ವರ್ಗದ ಜವಾಬ್ದಾರಿ ಎನ್ನುವುದಾದರೆ ಉತ್ಪಾದಕ ಶಕ್ತಿಗಳು ಎಲ್ಲಿಂದಲೋ ಅವತರಿಸಿದ ಭೂತಗಳಲ್ಲ, ಅವು ಸಾಮಾಜಿಕ ಸಂದರ್ಭವನ್ನು ಗ್ರಹಿಸಿ ''ಇಗೋ, ಇದೀಗ ನಮ್ಮನ್ನು ವೃದ್ಧಿಗೊಳಿಸುವ ಸರದಿ ನಿನ್ನದು'' ಎಂದು ಯಾವ ವರ್ಗವನ್ನಾದರೂ ಕರೆಯುವುದುಂಟೆ ? ಆಳುವ ವರ್ಗಗಳು ಅವನ್ನು ಮುನ್ನಡೆಸುವಾಗ ಕೇವಲ ನಿಸ್ವಾರ್ಥದಿಂದೇನೂ ಅದನ್ನು ಮಾಡುವುದಿಲ್ಲ, ಹಸಿದವರಿಗೆ ಹತ್ತು ತುತ್ತು ಆಹಾರ ಕೊಡಲು ಅಥವಾ ಬೆತ್ತಲಾಗಿರುವವರಿಗೆ ಬಟ್ಟೆ ಕೊಡಲು ಅಧಿಕಾರ ಚಲಾಯಿಸದವರು ಉತ್ಪಾದಕ ಶಕ್ತಿಗಳನ್ನು ಫಲಾಪೇಕ್ಷೆ ಇಲ್ಲದೆ ಬೆಳೆಸಿಯಾರೆ ! ಆ ವರ್ಗಗಳಿಗೆ ಅವುಗಳ ಭೌತಿಕ ಹಿತಾಸಕ್ತಿಗಳಿವೆ, ಬೇರೆಯವರ ದುಡಿಮೆಯಿಂದ ಮಿಗುತಾಯವನ್ನು ಸೆಳೆದುಕೊಳ್ಳುವ ಛಲವಿದೆ. ಹಾಗೆ ಮಾಡುವಾಗ ಉತ್ಪಾದಕ ಶಕ್ತಿಗಳನ್ನೂ ವೃದ್ಧಿಗೊಳಿಸಿಕೊಳ್ಳುತ್ತವೆ, ಅಷ್ಟೆ. ಅಂತೆಯೇ ಮಾನವ ಜನಾಂಗದ ಭೌತಿಕ ಮತ್ತು ಸಾಂಸ್ಕೃತಿಕ ಸಂಪತ್ತಿನ ಹೆಚ್ಚಳಕ್ಕೂ ಕೊಡುಗೆ ನೀಡುತ್ತವೆ. ಇಷ್ಟೆಲ್ಲಾ ನಡೆಯುವಾಗ ವರ್ಗ ಸಮಾಜದಲ್ಲಿ ಸಂಪನ್ಮೂಲಗಳು ಸಮಾಜದ ಬಹುಸಂಖ್ಯಾತರಿಗೆ ಲಭಿಸುವಂತೇನೂ ಇರುವುದಿಲ್ಲ, ಆದರೆ ಮುಂಬರುವ ಕಮ್ಯುನಿಸ್ಟ್ ವ್ಯವಸ್ಥೆಯಲ್ಲಿ ಅವು ಅವರಿಗೆ ದಕ್ಕುವುದಕ್ಕೆ ಪೀಠಿಕೆಯನ್ನು ವರ್ಗಸಮಾಜವು ಹಾಕಿಕೊಡುತ್ತದೆ. ವಾಂಛೆ ಬೆಳೆಸಿಕೊಳ್ಳುತ್ತಾನೆ. ಅಂತೆಯೇ ಪರಸ್ಪರ ಸಹಕಾರ, ಹೊಸ ಮಾದರಿಯ ಸಂಬಂಧಗಳು, ಆಶಾಪೂರೈಕೆಯ ಬೇರೆ ಬೇರೆ ಮಾದರಿಗಳು, ಎಲ್ಲಾ ಬೆಳೆಯುತ್ತವೆ.

ಮುಂದಿನ ಕಮ್ಯುನಿಸ್ಟ್ ಸಮಾಜದಲ್ಲಿ ಮಾನವ ಜನಾಂಗವು ಇವೆಲ್ಲವುಗಳ ವಾರಸುದಾರಿಕೆ ಪಡೆದುಕೊಳ್ಳುತ್ತದೆ, ಸರಿ; ಆದರೆ ಅದರ ನಿರ್ಮಿತಿಗೆ ಒಂದು ಪ್ರಕ್ರಿಯೆ ಇದೆ, ಅದರಲ್ಲಿ ಹಿಂಸೆ ಮತ್ತು ಶೋಷಣೆ ಇರುತ್ತವೆ. ಸಂಗ್ರಹಿಸಲ್ಪಟ್ಟ ಸಂಪತ್ತು ಇಡೀ ಸಮಾಜಕ್ಕೆ ದೊರೆಯುವಂತಹ ರೀತಿಯ ಸಾಮಾಜಿಕ ಸಂಬಂಧಗಳು ಆವಿರ್ಭಾವವಾಗುವುದು ಕೊನೆಯ ಘಟ್ಟದಲ್ಲಿ. ಆದರೆ ಆ ಸಂಪತ್ತು ಸಂಗ್ರಹವಾಗುವುದು ಹೇಗೆ ? ಮೂಲತಃ ಶ್ರಮದಿಂದ ದೊರಕುವ ಉತ್ಪನ್ನವನ್ನು ಬಹುಸಂಖ್ಯಾತರಾದ ಶ್ರಮಿಕರಿಗೆ ದೊರೆಯದಂತೆ ವ್ಯವಸ್ಥೆಗೊಳಿಸುವ



ಭೌತಿಕ ಸಂಪತ್ತು ನಮ್ಮ ನೈತಿಕ ಆರೋಗ್ಯಕ್ಕೆ ಚ್ಯುತಿ ತರುತ್ತದೆಯೆ ? ಹೌದೆನ್ನುತ್ತಾನೆ ಮಾರ್ಕ್ಸ್. ಆದರೆ ಕೆಲವು ಭಾವನಾವಾದಿ ಚಿಂತಕರಂತೆ ಅವನು ಅವೆರಡರ ನಡುವೆ ಕಂದಕವನ್ನು ನಿರ್ಮಿಸುವುದಿಲ್ಲ. ''ನಿಧಿ ಚಾಲ ಸುಖಮಾ'' ಎಂದು ಹಾಡಿ ಭೌತಿಕ ಸಂಪತ್ತನ್ನು ಅವಹೇಳನ ಮಾಡುವ ಸಂಪ್ರದಾಯದಲ್ಲಿ ಭೌತಿಕ ಸಂಪತ್ತು ನೈತಿಕ ಏಳಿಗೆಗೆ ಅಡಚಣೆ ಎಂಬ ತತ್ವವಿದೆ. ಅದಕ್ಕೆ ಭಿನ್ನವಾಗಿ ಮಾರ್ಕ್ಸ್ ಬಗೆಯುವುದೇ ಬೇರೆ : ಉತ್ಪಾದಕ ಶಕ್ತಿಗಳ ಅನಾವರಣದ ಪ್ರಕ್ರಿಯೆಯಲ್ಲಿ ಮಾನವನ ಕ್ರಿಯಾತ್ಮಕತೆ ಮತ್ತು ಚೈತನ್ಯ ಅನಾವರಣಗೊಳ್ಳುತ್ತವೆ. ಇತಿಹಾಸವು ಸದಾ ಪ್ರಗತಿಯ ಯಶೋಗಾಥೆಯಲ್ಲ, ಬದಲಾಗಿ ಒಂದು ವಿಧದ ವರ್ಗಸಮಾಜದಿಂದ ಇನ್ನೊಂದು ವರ್ಗಸಮಾಜಕ್ಕೆ ವರ್ಗಾವಣೆಯೂ ಅದರಲ್ಲುಂಟು. ಒಂದು ವಿಧದ ತುಳಿತ ಮತ್ತು ಶೋಷಣೆಯ ಬದಲು ಬೇರೊಂದು ವಿಧದ ತುಳಿತ ಮತ್ತು ಶೋಷಣೆ. ಹೀಗೆ ಕಠಿಣ ಹಾದಿಯನ್ನು ಸವೆಸುತ್ತಾ ಮಾನವ ಸಮಾಜವು ಮುಂದಕ್ಕೆ ಮತ್ತು ಎತ್ತರಕ್ಕೆ ಬೆಳೆಯುತ್ತದೆ; ಮಾನವನು ಸಂಕೀರ್ಣ ಅಗತ್ಯಗಳ, ಆಶಯಗಳ ಮುಖಾಂತರ ! ಇತಿಹಾಸವು ತನ್ನ ಕೆಟ್ಟಕಡೆಯಿಂದ ಪ್ರಗತಿ ಹೊಂದುವುದು ಈ ಕ್ರಮ ಎನ್ನುತ್ತಾನೆ ಮಾರ್ಕ್ಸ್. ನಾಳಿನ ನ್ಯಾಯಕ್ಕಾಗಿ ಇಂದು ಅನ್ಯಾಯದ ಹೊರೆ. ಉದ್ದೇಶಿತ ಗುರಿ ಮತ್ತು ಅದನ್ನು ತಲುಪಲು ಸಾಧನ, ಇವುಗಳ ನಡುವೆ ತೀರಾ ಅಸಾಮಂಜಸ್ಯವಿದೆ. ಇತಿಹಾಸದ ವೈಚಿತ್ರ್ಯ ಇದು : ಶೋಷಣೆ ಇಲ್ಲದೆ ಉತ್ಪಾದಕ ಶಕ್ತಿಯ ವಿಸ್ತರಣೆ ಇಲ್ಲ ಮತ್ತು ಅಂತಹ ವಿಸ್ತರಣೆ ಇಲ್ಲದೆ ಸಮಾಜವಾದಕ್ಕೆ ಅಗತ್ಯವಾದ ಭೌತಿಕ ಆಧಾರವಿಲ್ಲ. ಹಾಗಿದ್ದರೆ ಸಮಾಜವಾದವು ಗೆದ್ದಲು ಹುಳು ಕಟ್ಟುವ ಹುತ್ತದಲ್ಲಿ ಬಂದು ಅಡಗಿಕೊಳ್ಳುವ ಹಾವೆ ? ತಾನೇ ತನ್ನ ಪರಿಕರಗಳನ್ನು ಸಿದ್ಧ ಮಾಡಿಕೊಳ್ಳಲಾರದೆ ? ಮಾಡಿಕೊಳ್ಳಬಲ್ಲದು ಮತ್ತು ಮಾಡಿಕೊಳ್ಳುತ್ತದೆ, ಆದರೆ ಇತಿಹಾಸದ ನಡೆಯಲ್ಲಿ ಹಂತಗಳಂತೂ ಅನಿವಾರ್ಯ. ಇಂದಿನ ವೆನಿಜ್ಯುಯೇಲ, ಕ್ಯೂಬ, ವಿಯೆಟ್ನಾಂ ಮತ್ತು ಹಿಂದಿನ ರಷ್ಯಾ ಮತ್ತು ಚೀನಾ ಸಮಾಜವಾದದ ಅಸ್ತಿಭಾರವನ್ನು ಅಭಿವೃದ್ಧ ಬಂಡವಾಳಶಾಹಿ ವ್ಯವಸ್ಥೆ ಇಲ್ಲದಿದ್ದಾಗಲೇ ಹಾಕಿಕೊಂಡವು. ಹೊರದೇಶಗಳ ಬಂಡವಾಳಶಾಹಿ ಅವುಗಳ ನಾಶಕ್ಕೆ ಹಪಹಪಿಸುತ್ತಾ ಕೆಲವನ್ನು

ಭಗ್ನಗೊಳಿಸಿದೆ, ಕೆಲವನ್ನು ಸಂಕಟಕ್ಕೆ ಸಿಲುಕಿಸಿದೆ. ಬಂಡವಾಳ ಶಾಹಿಯ ಗಟ್ಟಿ ಸಂಪತ್ತನ್ನು ಸೃಷ್ಟಿಸುವವರು ದುಡಿಮೆಗಾರರೇ ತಾನೇ, ಆದ್ದರಿಂದ ಸಮಾಜವಾದಿ ವ್ಯವಸ್ಥೆಯು ಬಂಡವಾಳ ಶಾಹಿಯ ಆಶ್ರಯದಲ್ಲೇನೂ ಬೆಳೆಯುವುದಿಲ್ಲ.

ವರ್ಗಸಮಾಜವನ್ನು ತನ್ನ ನೈತಿಕ ಕ್ರೂರವರ್ತನೆಗಾಗಿ ಸುಮ್ಮನೆ ಖಂಡಿಸಿ ವಿರಮಿಸುವವನಲ್ಲ ಮಾರ್ಕ್ಸ್. ಮಾನವನ ಸಾಂಸ್ಕೃತಿಕ ಔನ್ನತ್ಯಕ್ಕೆ ಭೌತಿಕ ಅಡಿಪಾಯ ಅವಶ್ಯಕ. ಹಸಿವೆಯ ನಡುವೆಯೇ ಉತ್ತಮ ಬಾಂಧವ್ಯ ಬೆಳೆಸಿಕೊಳ್ಳ ಬೇಕೆಂಬ ಬೊಗಳೆ ಮಾರ್ಕ್ಸ್‌ವಾದಕ್ಕೆ ಹೊರತಾದ್ದು. ಹೊಸ ತಂತ್ರಜ್ಞಾನವು ಮಾನವನ ಸ್ವಂತದ ಸಾಧ್ಯತೆಗಳಿಗೆ ಕಡಿವಾಣ ಹಾಕಬಹುದು, ಆದರೆ ಅದು ಸಾಧ್ಯತೆಗಳನ್ನು ವಿಪುಲಗೊಳಿಸಲೂಬಹುದು. ಆಧುನಿಕತೆಯನ್ನು ಉನ್ಮಾದ ದಿಂದ ವೈಭವೀಕರಿಸಬಾರದು, ಅಂತೆಯೇ ಅಸಡ್ಡೆಯಿಂದ ನಿರಾಕರಿಸಲೂಬಾರದು. ಎರಡೂ ಒಂದೇ ಪ್ರಕ್ರಿಯೆಯ ಅಂಶಗಳು. ಅವನ್ನು ದ್ವಂದ್ವಮಾನ ದೃಷ್ಟಿಯಿಂದ ನೋಡಬೇಕು. ವೈರುಧ್ಯ ಅದರ ಮುಖ್ಯಾಂಶ.

ಮಾರ್ಕ್ಸ್ ನಿರೂಪಿಸುವ ಇತಿಹಾಸದ ಸಿದ್ಧಾಂತದಲ್ಲಿ ಸಮಸ್ಯೆಗಳಿಲ್ಲದಿಲ್ಲ. ಉದಾಹರಣೆಗೆ, ಎಲ್ಲ ವರ್ಗ ಸಮಾಜಗಳೂ ಬೇರೊಂದಾಗಿ ವಿಕಸಿಸುವಾಗ ಪ್ರಕ್ರಿಯೆ ಯಾವಾಗಲೂ ಒಂದೇ ತೆರನಾದ್ದೇಕೆ? ಅಂದರೆ, ಉತ್ಪಾದಕ ಶಕ್ತಿಗಳು ಮತ್ತು ಉತ್ಪಾದನಾ ಸಂಬಂಧಗಳ ಸಂಘರ್ಷವನ್ನುಳಿದು ಬೇರಾವ ಮಾರ್ಗವೂ ಇಲ್ಲವೆ? ಇಷ್ಟು ದೀರ್ಘಕಾಲದ ಇತಿಹಾಸದಲ್ಲಿ ಇದೊಂದೇ ಏಕೆ ಕೇಂದ್ರ ಕಾರಣವಾಯಿತು? ರಾಜಕೀಯ ವಿರೋಧವು ಪ್ರಬಲವಾಗಿದ್ದರೆ ಸ್ಥಾಪಿತವರ್ಗದ ಆಳ್ವಿಕೆಯನ್ನು ತನ್ನ ಉಚ್ಛ್ರಾಯಸ್ಥಿತಿಯಲ್ಲೂ ಪಲ್ಲಟಗೊಳಿಸಲಾಗುವುದಿಲ್ಲವೆ? ಉತ್ಪಾದಕ ಶಕ್ತಿಗಳು ಎಡವುವವರೆಗೆ ಕಾದು ಕುಳಿತಿರ

# ಅರಿವೆಗಳು

**ಕೊ**ಳೆತು ಲಡ್ಡಾದ
ನುಗ್ಗೆಯ ದಿಂಡು
ಚೊಗಟೆಯ ಮುಂಡಾ
ಜ್ವಾಳದ ದಂಟಿನ
ನವೆದ ತಡಿಕೆಗಳ
ಲಿಕಿ ಲಿಕಿ ಎನ್ನುವ ಗುಡಿಸಲು ನನ್ನದೆ

ಅವ್ವ
ಜೌಗು ಝರಿಯಂತ ಮೊಲೆ ಕೊಟ್ಟು
ಜ್ವಾಳದ ಅಂಬಲಿ ಕುಡಿಸಿ
ಅಂಬೆಗಾಲಿಕ್ಕಿಸಿ ನಡೆಸಿದ್ದು
ರಾಝು ಎಂದು ಎತ್ತಿ ಮುದ್ದಾಡಿದ್ದು
ಜೋಗುಳದ ಧ್ವನಿಯ
ಈ ಜೋಪಡಿಯಲ್ಲಿಯೇ

ಕಪ್ಪಾಗಿ ಕರಕಾಗಿ
ಡೊಕ್ಕೆ ಡೊಕ್ಕ್ಯಾಗಿದ್ದ
ಸುಕ್ಕು ಮಾರಿಯ
ಕುರುಚಲು ಗಡ್ಡದ ಅಪ್ಪ
ಹೆಗಲ ಮ್ಯಾಲೆ ನನ್ನ ಹೊತ್ತು
ಮಳೆ ಬಿಲ್ಲ ತೋರುತ್ತ
ಹಿಡಿ ಹಿಡಿ ಎಂದು
ಕಾಲೆತ್ತಿ ಮಿಟಿಕ್ಯಾಡಿ
ಹಳದಿ ಹಳದಿಯಾಗಿ ನಕ್ಕದ್ದು
ಈ ಮಣ್ಣ ಘಮನಾತದ
ತಡಿಕೆಯ ಮುಂದೆಯೆ.

ಊರ ಗೌಡನ ಕೆಂಗಣ್ಣಿನಂತ
ಉರಿ ಸೂರ್ಯನ ಝಳಕ್ಕೆ
ನನ್ನ ಜೋಪಡಿಯ ಮುಂದೆ
ಸವೆದ ನೂಲಿಗೆ ಒಣ್ಹಾಕಿದ
ಚಿಂದಿ ಮೋಡದಂತೆ
ಅರಿವೆಗಳ ದಂಡು ನಮ್ಮವೆ.

ಪಿಸಿ ಪಿಸಿದು ಚೂರಾದ
ನವೆದ ಸೀರೆಗೆ ಅವ್ವ
ಸೂಜಿ ಸುರುಗಿದರು
ಸೀರೆ ಪಿಸಿಯುವದು ನಿಲ್ಲುತ್ತಿಲ್ಲ
ಕುಂಡಿ ತೂತಾಗಿ
ಗಾಳಿ ಆಡುವ ಚಡ್ಡಿ ತಮ್ಮಂದು
ಪಕಳೆಗಳೆಲ್ಲ ಉದುರಿ
ಜರಿಗಳೆಲ್ಲಾ ಕಳಚಿ
ನೂಲು ಎಳೆ ಎಳೆಯಾದ
ಹೂವಿನ ಲಂಗ ತಂಗಿಯದು
ಹರಿದು ನುಗ್ಗಾದ
ತೊಡಲು ಬಾರದ ಅಂಗಿ ಅಪ್ಪಂದು

ಮುರಿದ ತಡಿಕೆಗಳಿಗೆ
ಗರಿ ಜೋಡಿಸಲು
ನಾನು ಸೊಡ್ಡೊಡೆದು ಸೆಟೆದು
ಮಣ್ಣೊಳಗೆ ಮಣ್ಣಾಗಿ
ಮುತ್ತಿನ ಕಾಳುಗಳ ಬೆಳೆದೆ
ಬೆಲೆ ಕೊಡಬಾರದೆಂದು
ದೊರೆಗಳೆ ನೀವು ಫರಮಾನು
ಹೊರಡಿಸಿದ್ದಿರಿ.
ಅನ್ನ ಬಟ್ಟೆಗಳ ಕೊಡುವ
ಉದ್ಯೋಗ ಖಾತ್ರಿಯ ಕಾರ್ಡಿನ
ಖಜಾನೆಗೆ ನಮ್ಮೂರ ಘಟ ಸರ್ಪಗಳು ಕಾವಲಿವೆ.

ಒಮ್ಮೊಮ್ಮೆ
ನಿಮ್ಮ ಎದೆಯೊಳಗಿನ
ಕಾಳ್ಗಿಚ್ಚಿಗೆ ಗುಡಿಸಲುಗಳು,
ನಮ್ಮ ಅಸ್ಥಿಪಂಜರಗಳು ಸುಟ್ಟು ಬೂದಿಯಾಗುತ್ತವೆ.

ಮದ್ದಾನೆಯಂಥ ನಿಮ್ಮ ಇಟ್ಯಾಚುಗಳು
ಗೊರಸಿನಿಂದ ಹೊಸೆದು ಹಾಕುತ್ತವೆ
ಆದರೂ ಬದುಕಿದ್ದೇವೆ
ನೆತ್ತರಿನ ಮಿಸುಕಾಟದಿಂದ



ನಾವು
ಉಸಿರಿರುವವರೆಗೂ
ಜೀವ ಅಂಗೈಯೊಳಗಿಡಿದು
ಬದುಕಬೇಕಂತೆ.

**ಕೆ. ಎ. ಹಾದಿಮನಿ**
ಆರೋಗ್ಯ ಕು. ಕ. ತರಬೇತಿ ಕೇಂದ್ರ, ಕೆ.ಆರ್.ಎಸ್. ರಸ್ತೆ,
ಮೇಟಗಳ್ಳಿ, ಮೈಸೂರು - ೫೭೦ ೦೧೬

ಬೇಕೆ? ಅಥವಾ ಬೇರೊಂದು ರೀತಿ ನೋಡೋಣ: ಉತ್ಪಾದಕ ಶಕ್ತಿಗಳು ವರ್ಧಿಸುತ್ತಿದ್ದರೆ ವರ್ಗಶತ್ರುವನ್ನು ತಂತ್ರಜ್ಞಾನದ ಅತ್ಯುಗ್ರ ಬಳಕೆಯಿಂದ ದಮನ ಮಾಡಲಾಗದೆ? ಅಮೆರಿಕಾದಂತಹ ದೇಶಗಳಲ್ಲಿ ದುಡಿಯುವ ವರ್ಗವನ್ನು ತುಳಿದಿಡಲು ಇದು ಪ್ರಾಯೋಗಿಕವಾಗಿ ಜಾರಿಯಲ್ಲಿದೆ. ದುಡಿಮೆಗಾರರ ಕೌಶಲ್ಯ ಹೆಚ್ಚಿದೆ, ಸಂಘಟನಾ ಶಕ್ತಿ ಕುದುರಿದೆ, ಶೈಕ್ಷಣಿಕವಾಗಿ ಅವರ ರಾಜಕೀಯ ಪ್ರಜ್ಞೆ ಪರಿಣಾಮಕಾರಿಯಾಗಿ ವಿಸ್ತಾರಗೊಳ್ಳಲು ಸಾಧ್ಯವಿದೆ; ಆದರೂ ಆಳುವ ವರ್ಗವನ್ನು ಹೊರದೂಡಲು ಏನಡ್ಡಿ? ಯಾವ ಉತ್ಪಾದಕ ಶಕ್ತಿಯವರ್ಧನೆ ಇದನ್ನೆಲ್ಲಾ ಸಾಧ್ಯಗೊಳಿಸಿದೆಯೋ ಅದೇ ಶಕ್ತಿ ಬಾಂಬುಗಳನ್ನು ಕೊಟ್ಟಿದೆ, ಬೇಹುಗಾರಿಕೆಗೆ ಸಮಗ್ರ ತಂತ್ರಜ್ಞಾನ ಒದಗಿಸಿದೆ ಮತ್ತು ಪ್ರತಿಗಾಮಿ ಮಾಧ್ಯಮಗಳನ್ನು ಪೋಷಿಸಿದೆ. ಹೊಸ ತಂತ್ರಜ್ಞಾನವು ದುಡಿಯುವವರನ್ನು ಅತಂತ್ರಕ್ಕೆ ದೂಡುವ ಸ್ಥಿತಿಯೂ ಉಂಟು: ನಿರುದ್ಯೋಗವನ್ನು ಹೆಚ್ಚಿಸುವ ಮೂಲಕ ಮತ್ತು ರಾಜಕೀಯ ನಿಷ್ಕ್ರಿಯತೆಗೆ ಇಂಬುನೀಡುವ ಮೂಲಕ. ಇಷ್ಟೆಲ್ಲಾ ಆದಮೇಲೂ ಸಾಮಾಜಿಕ ವರ್ಗವೊಂದು ಕ್ರಾಂತಿಯನ್ನುಂಟುಮಾಡಲು ಸಮರ್ಥವಿದೆಯೇ ಎಂಬುದು ಬೇರೆಷ್ಟೋ ಅಂಶಗಳನ್ನಾಧರಿಸಿರುತ್ತದೆ; ಉತ್ಪಾದಕ ಶಕ್ತಿಗಳ ವರ್ಧನೆಯ ಸಾಮರ್ಥ್ಯವಷ್ಟೇ ಸಾಲದು. ಅಲ್ಲದೆ, ಉತ್ಪಾದಕ ಶಕ್ತಿಗಳ ವೃದ್ಧಿಯಿಂದ ಸಾಮಾಜಿಕ ಸಂಬಂಧಗಳು ನಿಚ್ಚಳವಾಗಿ ಬದಲಾಗುತ್ತವೆಂಬುದು ಅರ್ಧಸತ್ಯದಂತೆ ಕಾಣುತ್ತದೆ. ಕಳೆದ ಕೆಲವು ಶತಮಾನಗಳ ಚರಿತ್ರೆ ಇದಕ್ಕೆ ಪುರಾವೆ ಒದಗಿಸುತ್ತದೆ. ಉದಾಹರಣೆಗೆ, ಬ್ರಿಟನ್ನಿನ ಔದ್ಯಮಿಕ ಕ್ರಾಂತಿಯನ್ನು ನೋಡಬಹುದು, ಇಲ್ಲವೆ ೧೯೪೭ರ ನಂತರದ ನಮ್ಮ ದೇಶವನ್ನು ನೋಡಬಹುದು. ಬೇರೆ ಬೇರೆ ಸಾಮಾಜಿಕ ಸಂಬಂಧಗಳಿರುವಾಗಲೂ ಒಂದೇ ತೆರನಾದ ಉತ್ಪಾದಕ ಶಕ್ತಿಗಳಿರಲು ಸಾಧ್ಯ. ಕಳೆದ ಹತ್ತಾರು ಶತಮಾನಗಳಲ್ಲಿ ಅದೆಷ್ಟು ಬಗೆಗಳಲ್ಲಿ ಸಾಮಾಜಿಕ ಸಂಬಂಧಗಳು ಬದಲಾಗಿವೆ, ನೋಡಿ – ಭಾರತವೂ ಸೇರಿದಂತೆ. ಅಷ್ಟೇ ಪ್ರಮಾಣದಲ್ಲಿ ಕೃಷಿ ಕ್ಷೇತ್ರದ ಉತ್ಪಾದಕ ಶಕ್ತಿಗಳು ಬದಲಾಗಿವೆಯೆ? ಆದ್ದರಿಂದ ಉತ್ಪಾದಕ ಶಕ್ತಿಗಳು ಹಾಗೂ ಸಾಮಾಜಿಕ ಸಂಬಂಧಗಳ ಬಗೆಗಿನ ಸೂತ್ರವನ್ನು ಶೇಕಡ ನೂರರಷ್ಟು ಸತ್ಯವೆಂದು ಬಗೆಯಲಾಗದು. ಅದನ್ನು ಮಾರ್ಕ್ಸ್ ಮನಗಂಡಿದ್ದ. ಅವನು ಚೀನಾ ಕುರಿತಂತೆ ವಿಶೇಷ ಅಧ್ಯಯನ ಮಾಡಿರದಿದ್ದರೂ ಅಲ್ಲಿ ಉತ್ಪಾದಕ ಶಕ್ತಿಗಳು ಬಹುಕಾಲ ಸ್ಥಗಿತಗೊಂಡಿದ್ದುದು ಅವನಿಗೆ ತಿಳಿದಿತ್ತು. ಹಾಗೆ ಉತ್ಪಾದಕ ಶಕ್ತಿಗಳನ್ನು ಹಿಗ್ಗಿಸುವ ವರ್ಗವೊಂದು ಚೀನಾದಲ್ಲಿ ಪ್ರಮುಖ ಪಾತ್ರ ವಹಿಸಲು ಇಲ್ಲದಿದ್ದುದು ಸ್ಪಷ್ಟವಿದೆ. ಇಷ್ಟೆಲ್ಲ ಹಿನ್ನೆಲೆಗಳಿದ್ದರೂ ಮಾರ್ಕ್ಸ್ ಪ್ರತಿಪಾದಿಸಿದ ಸೂತ್ರ ಬಹಳ ಉಪಯುಕ್ತವಾದ್ದು; ವಿಶೇಷತಃ ಇತಿಹಾಸದ ಸಂದರ್ಭದಲ್ಲಿ ಅದು ವಿವರಣೆಗಳನ್ನೊದಗಿಸುತ್ತದೆ.

ಉತ್ಪಾದಕ ಶಕ್ತಿಗಳು ಮತ್ತು ಸಾಮಾಜಿಕ ವರ್ಗಗಳನ್ನು ಕುರಿತಾದ ಸೂತ್ರವನ್ನು ಹೀಗೆ ನೋಡೋಣ: ಕೆಲವರು ಇತರರಿಗಿಂತ ಉತ್ತಮವಾದ ಜೀವನ ನಡೆಸುವ ಸಂಗತಿಗೆ ವ್ಯಾಪಕ ಉದಾಹರಣೆಗಳು ಬೇಕಿಲ್ಲ. ಅದು ಇಂದಿನ ಸತ್ಯವಿದ್ದಂತೆ ಸಿಂಧು ನದಿ ನಾಗರಿಕತೆ (ಅಥವಾ ಹರಪ್ಪ ಸಂಸ್ಕೃತಿ)ಯ ಸಂದರ್ಭದಲ್ಲೂ ಸತ್ಯವಾಗಿದ್ದಿತು. ಉತ್ತಮ ಜೀವನ ನಡೆಸುತ್ತಿದ್ದ ವರ್ಗಕ್ಕೆ ದುಡಿಯುವ ಜನ ತಮ್ಮ ಉತ್ಪಾದನೆಯಲ್ಲಿನ ಮಿಗುತಾಯವನ್ನು ಕೊಟ್ಟಿರದಿದ್ದರೆ ಅದು ಸಾಧ್ಯವಿರುತ್ತಿರಲಿಲ್ಲ. ಅಥವಾ ಒಬ್ಬ ರಾಜನ ಆಸ್ಥಾನ ಗಮನಿಸಿ. ಅದು ಜನಕ-ಯಾಜ್ಞವಲ್ಕ್ಯರ ಕಾಲವಿರಬಹುದು, ಅಥವಾ ನಂತರದ ಗುಪ್ತರ ಯುಗವಿರಬಹುದು. ಆಸ್ಥಾನದಲ್ಲಿದ್ದವರು ಕುರಿ ಮೇಯಿಸಲು ಹೋಗುತ್ತಿರಲಿಲ್ಲ, ಹೋಗಬೇಕಾಗಿರಲಿಲ್ಲ. ಬೇರೆ ಯಾರೋ ಆ ಕೆಲಸ ಮಾಡಿ ಇವರಿಗೆ ತುಪ್ಪಟದ ಶಾಲು ಒದಗಿಸುತ್ತಿದ್ದರು. ಇವರೇ ಆ ಕೆಲಸಕ್ಕೆ ಹೋಗಬೇಕಾಗಿದ್ದಿದ್ದರೆ ರಾಜನ ಆಸ್ಥಾನ ಖಾಲಿಯಾಗಿ ಬಿಡುತ್ತಿತ್ತು. ಕೃಷಿಕನ ತಂತ್ರಜ್ಞಾನವು ಸಾಕಷ್ಟು ಮುನ್ನಡೆ ಸಾಧಿಸಿ ತನಗೆ ಅವಶ್ಯಕವಾಗಿರುವುದಕ್ಕಿಂತಲೂ ಹೆಚ್ಚಿನ ಧಾನ್ಯ ಬೆಳೆಯುವ ಶಕ್ತಿಯನ್ನು ಕೃಷಿಕನಿಗೆ ನೀಡಿದೆ. ಅಂದರೆ ಉತ್ಪಾದಕ ಶಕ್ತಿಯು ಒಂದು ಉನ್ನತ ಹಂತವನ್ನು ತಲುಪಿದೆ. ಅವನು ತನ್ನ ಮಿಗುತಾಯ ಉತ್ಪನ್ನವನ್ನು ಆಸ್ಥಾನದ ಪಂಡಿತರಿಗೆ ಯಾವ ಕರಾರಿನ ಪ್ರಕಾರ ನೀಡುತ್ತಾನೆ? ಸ್ವಯಂ ಇಚ್ಛೆಯಿಂದಲೋ, ಬಲವಂತಕ್ಕೆ ಮಣಿದೋ? ಅಥವಾ ಎಂಥದೋ ಮೌಢ್ಯವನ್ನು ತುಂಬಿ ಅವನಿಂದ ಕಸಿಯಲಾಗುತ್ತದೋ? ಅವನಿಗೆ 'ಮಾರುಕಟ್ಟೆ ಬೆಲೆ' ನೀಡಿಯಂತೂ ಕೊಳ್ಳಲಿಲ್ಲ. ಕೊಂಡಿದ್ದರೆ ಅವನು ಸಾಮಾಜಿಕವಾಗಿ ಕೆಳವರ್ಗದಲ್ಲಿ ಸದಾಕಾಲ ಉಳಿದಿರುತ್ತಿದ್ದನೆ? ಇಲ್ಲೇ ಮಾರ್ಕ್ಸ್‌ನ ಕೊಡುಗೆ ಮಹತ್ವ ಪಡೆಯುವುದು. ಅವನ ಮುಖ್ಯ ಇಂಗಿತ ಇದು: ವರ್ಗ ಹೋರಾಟವೆಂದರೆ ನಿಜಾರ್ಥದಲ್ಲಿ ಮಿಗುತಾಯ ಉತ್ಪಾದನೆಯನ್ನು ಪಡೆದುಕೊಳ್ಳುವುದಕ್ಕಾಗಿ ಹೋರಾಟ. ಸಾಮರ್ಥ್ಯವಿದ್ದರೆ ಅದನ್ನು ಉತ್ಪಾದಕನು ಉತ್ತಮ ಬೆಲೆಗೆ ವಿಲೇವಾರಿ ಮಾಡಬಹುದು. ಸಾಮಾಜಿಕವಾಗಿ ಅವನು ಅಂತಹ ವರ್ಗಕ್ಕೆ ಸೇರಿಲ್ಲದಿದ್ದರೆ ತನ್ನ ಶ್ರಮಕ್ಕೆ ಕಡಿಮೆ ಪ್ರತಿಫಲ ಪಡೆದು ತೆಪ್ಪಗಿರಬೇಕು. ದುಡಿಮೆಗಾರನನ್ನು ಮಣಿಸುವ ವಿಧಾನಗಳು ಹಲವಿರುತ್ತವೆ. ಅದು ಕತ್ತಿಯ ಪ್ರಯೋಗವಾಗಬಹುದು ಇಲ್ಲವೇ ಗೀತಾವಾಕ್ಯದ ಪ್ರಾಬಲ್ಯವಾಗಬಹುದು. ಮಿಗುತಾಯದ ಉಪಭೋಗಕ್ಕಾಗಿ ನಡೆಯುವ ವರ್ಗ ಹೋರಾಟ ಯಾವಾಗ ಅನವಶ್ಯಕವಾದೀತು? ಉತ್ಪಾದನೆಯು ಎಲ್ಲರಿಗೂ ಬೇಕಾಗುವಷ್ಟು ಸಾಧ್ಯವಾಗುವವರೆಗೆ ತಾನೆ? ಹಾಗೆ ಎಲ್ಲರಿಗೂ ಸಾಕಾಗುವಷ್ಟು ಉತ್ಪಾದನೆಗೆ ತಕ್ಕುದಾಗಿ ಉತ್ಪಾದಕ ಶಕ್ತಿಗಳು ಬೆಳೆದಾಗ ಮಿಗುತಾಯದ ಪಾಲು ಪಡೆಯಲು ವರ್ಗ ಹೋರಾಟ ಏಕೆ ಬೇಕು? ಅದೇ ಸಾಮಾಜಿಕ ಸಂಬಂಧಗಳ ಪರಿವರ್ತನೆಯ ಹಂತ. ಇತಿಹಾಸದಲ್ಲಿ ನಡೆಯುತ್ತಾ ಬಂದಿರುವ ವಿದ್ಯಮಾನ ಇದು. ಅದನ್ನು ವೈಜ್ಞಾನಿಕವಾಗಿ ಗುರುತಿಸಿದ ಹೆಗ್ಗಳಿಕೆ ಮಾರ್ಕ್ಸ್‌ನದು.

''ವರ್ಗ'' ಎಂಬುದು ಮಾರ್ಕ್ಸ್ ಸೃಷ್ಟಿಸಿದ್ದಲ್ಲ, ಇತಿಹಾಸದಲ್ಲಿ ಅದು ಸೃಷ್ಟಿಯಾಗಿದೆ. ತಮ್ಮ ದುಡಿಮೆಯ ಫಲದ ಪಾಲನ್ನು ಬೇರೆಯವರಿಗೆ ಬಿಟ್ಟುಕೊಡಬೇಕಾದ ಬಲವಂತವಿದ್ದಾಗ ವರ್ಗವು ಸೃಷ್ಟಿಯಾಗುತ್ತದೆ. ಮಿಗುತಾಯದ ಉತ್ಪಾದನೆಗೆ ಅವಶ್ಯಕವಾದ ಉತ್ಪಾದಕ ಶಕ್ತಿಗಳು ಬೆಳೆದಿಲ್ಲದಿದ್ದ ಆದಿಮ ಸಮಾಜದಲ್ಲಿ ಸಾಮುದಾಯಿಕ ಜೀವನವಿತ್ತು, ಆಗ ವರ್ಗಗಳಿರಲಿಲ್ಲ. ಅಂತಹ ಆದಿ-ಸಮಾಜದ ಸ್ಮೃತಿಯು ಋಗ್ವೇದದ ಅನೇಕ ಭಾಗಗಳಲ್ಲಿ ಪ್ರತಿಫಲಿತವಾಗಿದೆ. ಊಳಿಗದವರು ಎಂಬ ವರ್ಗ ಆಗ್ಗೆ ಇದ್ದಿರಲು ಸಾಧ್ಯವಿಲ್ಲ. ಮಿಗುತಾಯ ಉತ್ಪಾದನೆ ಸಾಧ್ಯವಾಗುವಂತಹ ಉತ್ಪಾದಕ ಶಕ್ತಿಗಳು ಬೆಳೆದುಬಂದಾಗ ಸಮಾಜದ ವಿಭಜನೆ, ಮಿಗುತಾಯದ ಉಪಭೋಗಕ್ಕೆ ಕಿತ್ತಾಟ, ಆರಂಭವಾಗುತ್ತದೆ. ಹೀಗೆ ಉತ್ಪಾದಕ ಶಕ್ತಿಗಳು ವೃದ್ಧಿಯಾಗಿ, ಯಾವುದೇ ಕೊರತೆ ಇಲ್ಲದಷ್ಟು ಉತ್ಪನ್ನಗಳು ಸಮಾಜಕ್ಕೆ ಲಭ್ಯವಾದಾಗ ಸಾಮಾಜಿಕ ಸಂಬಂಧಗಳು ಭಿನ್ನವಾಗಿಯೇ ತೀರಬೇಕು. ಅದು ಒಂದು ದೇಶದ ಪ್ರಶ್ನೆಯಲ್ಲ, ಇಡೀ ಮಾನವ ಜನಾಂಗದ ಪ್ರಶ್ನೆ. ಭಾರತದಲ್ಲಿ ಕೊರತೆ ಕೂಡದು, ಹೈಟಿಯಲ್ಲೂ ಕೂಡದು. ಆ ಮಟ್ಟದ ಉತ್ಪಾದನೆಯು ಬಂಡವಾಳಶಾಹಿಯಡಿ ಸಾಧ್ಯ. ಆದರೆ ಬಂಡವಳಿಗ ವರ್ಗವು ಬೇಕಾದರೆ ಮಿಗುತಾಯ ಉತ್ಪನ್ನವನ್ನು ಸುಟ್ಟು ಹಾಕೀತು, ಜನರಿಗೆ ಅದನ್ನು ತಲುಪಿಸಲು ಸಿದ್ಧವಿರುವುದಿಲ್ಲ. ''ಕೋಟಿ ಖಂಡುಗ ಧಾನ್ಯ ಬೆಳೆಯಲು/ಲಾಭವಿಲ್ಲದೆ ಸುಡುವರು'' ಎಂದು ವಿ. ಸೀ. ತಮ್ಮ 'ಕ್ರೋಧಕೇತನ' ಎಂಬ ಕವನದಲ್ಲಿ ಮೂದಲಿಸಿದ್ದು ಇಂತಹ ಬಂಡವಾಳಶಾಹಿಯನ್ನು. ಉತ್ಪಾದಕ ಶಕ್ತಿಗಳ ವರ್ಧನೆಗೆ ಸರಿಸಮನಾದ ಸಾಮಾಜಿಕ ಸಂಬಂಧಗಳು ಬಂಡವಾಳಶಾಹಿಯಡಿ ಮೂಡುವುದಿಲ್ಲವೆಂದು ಇದರರ್ಥ. ಇತಿಹಾಸದಲ್ಲಿ ಕಾಣಬರುವ ವೈರುಧ್ಯ ಇದು, ಅದು ಪರಿಹಾರವಾಗುವುದು ಸಮಾಜವಾದಿ ಸಾಮಾಜಿಕ ಸಂಬಂಧಗಳು ಏರ್ಪಟ್ಟಾಗ. ಮಾರ್ಕ್ಸ್ ನಿರೂಪಿಸಿದ ಸೂತ್ರದ ಅರ್ಥ ಇದು.

ವರ್ಗ ಹೋರಾಟದ ಸಂದರ್ಭದಲ್ಲಿ ಇನ್ನೊಂದು ಪ್ರಶ್ನೆ ಹಾಕಿಕೊಳ್ಳೋಣ: ಹೀಗೆ ಹೋರಾಟಕ್ಕೆ ಪ್ರೇರಣೆ ಎಲ್ಲಿಯದು ಮತ್ತು ಹೋರಾಟ ಅಗತ್ಯವೆ? ಮಾನವನು ಸ್ವತಂತ್ರ ಜೀವಿಯಲ್ಲಾ, ಅವನು ಹೋರಾಟ ಮಾಡಬೇಕೇಕೆ? ಒಂದಂತೂ ನಿಜ: ದುಡಿಯುವ ಜನರ ಮುಷ್ಕರ ಅಥವಾ ಕಾರ್ಖಾನೆಯ ಲಾಕೌಟ್, ಇಲ್ಲವೇ ವಿವಿಧ ಉದ್ಯೋಗಗಳು ಇವೆಲ್ಲಾ ಕಾಣದ ಪರಮಾತ್ಮನ ಬೊಂಬೆಯಾಟವಂತೂ ಅಲ್ಲ. ಹೋಗಲಿ, ''ಇದು ನನ್ನ ಹಣೆಬರಹ'' ಎಂದು ದುಡಿಮೆಗಾರನು ಸುಮ್ಮನೆ ಕೂಡುವುದೂ ಇಲ್ಲ. ಒಂದು ಕಡೆ 'ಹಣೆಬರಹ' ಮತ್ತು ಇನ್ನೊಂದು ಕಡೆ 'ವ್ಯಕ್ತಿಯ ಕ್ರಿಯಾ ಸ್ವಾತಂತ್ರ್ಯ' ಇದ್ದರೆ ಇವೆರಡರ ನಡುವೆ ಸಾಂಗತ್ಯ ಹೇಗೆ ಸಾಧ್ಯ? ನಾನೊಬ್ಬ ಪೊಲೀಸ್ ಅಧಿಕಾರಿಯನ್ನು ಕೊಂದುಬಿಡುತ್ತೇನೆ ಎಂದಿಟ್ಟುಕೊಳ್ಳಿ. ಅದು ಆಗದ ಮಾತು, ನಾನು ಹಾಗೆ ಮಾಡಲಾರೆ, ಅದು ಬೇರೆ ಮಾತು; ಆದರೆ ವಾದಕ್ಕೆಂದು ಅದನ್ನು ಊಹಿಸಿಕೊಳ್ಳೋಣ. ಆಗ ಕೊಲ್ಲುವುದು ನನ್ನ ಹಣೆಬರಹ, ಕೊಲ್ಲಿಸಿಕೊಳ್ಳುವುದು ಅವನ ಹಣೆಬರಹ. ಇಬ್ಬರ ಹಣೆಬರಹಗಳನ್ನೂ ಬರೆದ ಬ್ರಹ್ಮನಿಗೆ ಅದು ತಿಳಿದಿರಲೇಬೇಕು. ನಾಳೆ ನಾನು ಕಡುಬು ತಿನ್ನಬೇಕೆಂದು ಸಹ ನನ್ನ ಹಣೆಬರಹ ಇರಬೇಕು; ಇಲ್ಲವೇ, ಉಪವಾಸವಿರಬೇಕೆಂದಿರಬಹುದು. ಹೀಗೆ ಎಲ್ಲಾ ಪೂರ್ವನಿರ್ಧಾರಿತವಾಗಿದ್ದು, ಅದರಂತೆ 'ಇತಿಹಾಸ' ಜರುಗುತ್ತಿದ್ದರೆ ಹೋರಾಟಕ್ಕೆ ಅರ್ಥವೇನಿದೆ, ವರ್ಗ ಹೋರಾಟ ಏಕೆ ಬೇಕು? ''ಸಮಾಜವಾದಿ ವ್ಯವಸ್ಥೆ ಬರುವುದಿದ್ದರೆ ಬರುತ್ತದೆ, ಅದಕ್ಕೆ ನಮ್ಮ ಪಾತ್ರವೇನೂ ಇಲ್ಲ'' ಎಂದು ದುಡಿಮೆಗಾರನಿಗೆ ತಿಳುವಳಿಕೆ ನೀಡಿದರೆ ಹೇಗಿರುತ್ತದೆ? ಸ್ವತಃ ಮಾರ್ಕ್ಸ್ ಹೇಳಿದ್ದಾನಲ್ಲ ''ಕಮ್ಯುನಿಸ್ಟ್ ಘೋಷಣಾಪತ್ರ''ದಲ್ಲಿ, ''ಸಮಾಜವಾದದ ಆವಿರ್ಭಾವವು ಅನಿವಾರ್ಯ'' ಎಂದು! ಭಂಡ ಬಂಡವಾಳಶಾಹಿಯ ಪತನ ಮತ್ತು

ಸಾಚಾ ದುಡಿಮೆಗಾರನ ಜಯ, ಎರಡೂ ಅನಿವಾರ್ಯವೆಂದು ಮಾರ್ಕ್ಸ್ ಹೇಳುವಾಗ ಇತಿಹಾಸದಲ್ಲಿ ಅಂತಹ ಒಂದು ನಿಯಮವನ್ನು ಗುಟ್ಟಾಗಿ ಬರೆದಿಡಲಾಗಿದೆ ಎಂದು ಭಾವಿಸಬೇಕೆ ? ಹಾಗಿದ್ದರೆ ರಾಜಕೀಯ ಹೋರಾಟದ ಅಗತ್ಯವೇನಿದೆ ? ಸತ್ಯನಾರಾಯಣನ ಪೂಜೆ-ಪ್ರಸಾದ ಸಾಕಲ್ಲ! ಇಂತಹ ನಿಲುವನ್ನು ತಾಳಿದ್ದವರನ್ನು 'ಫೇಬಿಯನ್ನರು' ಎಂದು ಕರೆಯುತ್ತಿದ್ದರು. ಮಾರ್ಕ್ಸ್ ಮೇಲಿನ ಒಂದು ಆಪಾದನೆ ಇದು : ಇತಿಹಾಸದ ಗತಿಯನ್ನು ಪೂರ್ವನಿರ್ಧಾರಿತ ಅನಿವಾರ್ಯವೆಂಬಂತೆ ವ್ಯಾಖ್ಯಾನಿಸಿಬಿಟ್ಟಿದ್ದಾನೆ ಆತ, ಎಂದು. ಅದು ನಿಜವಾದರೆ ಅವನು ರಾಜಕೀಯ ನಿಷ್ಕ್ರಿಯತೆಯನ್ನೂ ಬೋಧಿಸಬೇಕಾಗಿತ್ತು. ''ಬಂಡವಾಳಶಾಹಿಯ ಮರಣಾವಸ್ಥೆಯಲ್ಲಿ ಫ್ಯಾಸಿಸಂ ಒಂದು ಚಡಪಡಿಕೆ'' ಎಂದು ಭಾವಿಸಿ ಮಾರ್ಕ್ಸ್‌ವಾದಿಗಳು ಕೈಕಟ್ಟಿ ಕೂತು ಹಿಟ್ಲರನು ಹೂತುಹೋಗುವುದನ್ನು ಕಾಯುತ್ತಾ ಕುಣಿಯಲಿಲ್ಲವಲ್ಲ ಸದ್ಯ, ಎಂದು ನಾವಿಂದು ನಿಟ್ಟುಸಿರಿಡಬೇಕಾಗಿದೆ. ಮಾರ್ಕ್ಸ್ ಬಗ್ಗೆ ''ನಿಯತವಾದಿ'' ಅಥವಾ ''ಸಂಕಲ್ಪ ನಿರ್ಣಯವಾದಿ'' ಎಂಬ ಆಕ್ಷೇಪ ಎತ್ತುವವರು ಇದನ್ನು ಗಮನಿಸಬೇಕು. ಹೇಗೂ ಸಮಾಜವಾದ ಬರುತ್ತದೆ, ನಾವೆಲ್ಲಾ ಪುಷ್ಕರಿಣಿಯಲ್ಲಿ ಮಿಂದು ಪರಿಶುದ್ಧರಾಗೋಣ, ಎಂದು ಮಾರ್ಕ್ಸ್ ಹೇಳಲಿಲ್ಲ; ಬದಲಾಗಿ, ದುಡಿಯುವ ವರ್ಗವು ಕಾದಾಡಿ ಅಧಿಕಾರ ತಮ್ಮದಾಗಿಸಿಕೊಳ್ಳಬೇಕು, ಎಂದ. ಆ ವರ್ಗವು ಬಹು ಸಂಖ್ಯಾತರದ್ದು, ಅದು ಅಧಿಕಾರ ಸೆಳೆದುಕೊಳ್ಳಬಲ್ಲದು, ತರ್ಕಬುದ್ಧಿ ಹೊಂದಿರುವ ಆ ವರ್ಗ ಬಂಡವಾಳಶಾಹಿಗೆ ಪರ್ಯಾಯ ನಿರ್ಮಿಸಲು ಮುನ್ನುಗ್ಗಬೇಕು, ಎಂದ ಮಾರ್ಕ್ಸ್ ಸ್ವತಃ ರಾಜಕೀಯ ಸಂಘಟನೆಯ ಕೆಲಸ ಮಾಡಿದ್ದ. ತಮ್ಮ ಸ್ವತಂತ್ರ ಸಂಕಲ್ಪದಿಂದ ದುಡಿಯುವ ಪುರುಷರು-ಮಹಿಳೆಯರು ಬಂಡವಾಳಶಾಹಿಯನ್ನು ಕಿತ್ತೊಗೆಯುತ್ತಾರೆಂದ ಮಾರ್ಕ್ಸ್ ''ಸಂಕಲ್ಪ ನಿರ್ಣಯವಾದಿ'' ಹೇಗಾದಾನು !

ಮಾರ್ಕ್ಸ್ ಹೇಳಿದ್ದುದನ್ನು ಅಪಾರ್ಥ ಮಾಡುವುದು ಬೇಡವೆನ್ನುವುದಾದರೆ ಅವನ ಮಾತನ್ನು ಗ್ರಹಿಸಬೇಕಾದ್ದು ಹೀಗೆ: ಇತಿಹಾಸದಲ್ಲಿ ಹಲವು ಸಂದರ್ಭಗಳಿರುತ್ತವೆ; ಉತ್ಪಾದಕ ಶಕ್ತಿಗಳು ಸಂದರ್ಭಗಳನ್ನು ಉಂಟುಮಾಡುತ್ತವೆ; ಅದು ಸಾಮಾಜಿಕ ಸಂಬಂಧಗಳನ್ನು ರೂಪಿಸುತ್ತದೆ ಮತ್ತು ಅದರಲ್ಲಿ ಜನರ ಪಾತ್ರವಿದೆ, ಭಾಗವಹಿಸುವಿಕೆ ಇದೆ, ಮಧ್ಯಪ್ರವೇಶವಿದೆ. ಕೆಲವು ಸಂದರ್ಭಗಳಲ್ಲಿ ಇಂಥದೇ ಮಧ್ಯಪ್ರವೇಶವೆಂದು ದುಡಿಯುವ ವರ್ಗ ತೀರ್ಮಾನಿಸುತ್ತದೆ. ಭಾರತೀಯ ತತ್ವಶಾಸ್ತ್ರದಲ್ಲಿ ವ್ಯಕ್ತಿಯ ಸ್ವಾತಂತ್ರ್ಯವನ್ನು ಕುರಿತು ಹೇಳುವಾಗ ಆ ವ್ಯಕ್ತಿಗೆ ಏನೋ ಒಂದು ಕಾರ್ಯವನ್ನು ''ಮಾಡಲು, ಮಾಡದಿರಲು, ಬೇರೆ ರೀತಿಯಲ್ಲಿ ಮಾಡಲು'' (ಕರ್ತುಂ ಅಕರ್ತುಂ ಅನ್ಯಥಾ ಕರ್ತುಂ) ಶಕ್ಯವಿದೆ ಎಂಬ ಪ್ರತಿಪಾದನೆ ಇದೆ. ಗೋಮಾಂಸ ತಿನ್ನಬಹುದು, ತಿನ್ನದಿರಬಹುದು, ಅದರ ಬದಲು ಜಿಂಕೆ ಮಾಂಸ ತಿನ್ನಬಹುದು. ಮೂರರಲ್ಲಿ ಒಂದು ಆಯ್ಕೆಯ ಸ್ವಾತಂತ್ರ್ಯ ಸರ್ವಥಾ ಲಭ್ಯ. ಬೇಕಾದರೆ ನಾಲ್ಕನೆಯ ಆಯ್ಕೆಯಾಗಿ ಉಪವಾಸವನ್ನೂ ಅಂಗೀಕರಿಸಬಹುದು. ಬೇರೊಂದು ಉದಾಹರಣೆ ನೋಡುವುದಾದರೆ, ದುಡಿಯುವ ವರ್ಗವು ಅಸ್ಪೃಶ್ಯತೆಯನ್ನು ಪೋಷಿಸಬಹುದು, ನೀಗಿಸಬಹುದು, ಇಲ್ಲವೆ ಪೇಜಾವರ ಸ್ವಾಮಿಗಳಂತೆ ಹೊಸ ರೀತಿಯಲ್ಲಿ ಅನಾಗರಿಕ ಆಚರಣೆಗೆ ಸೊಪ್ಪು ಹಾಕಬಹುದು; ನಾಲ್ಕನೆಯ ಆಯ್ಕೆ : ಅದು ಸಮಸ್ಯೆಯಲ್ಲವೆಂದು ನಿರಾಸಕ್ತಿಭಾವ ತಾಳುವುದು. ಬಂಡವಾಳಶಾಹಿಯ ದರ್ಪ- ದೌರ್ಜನ್ಯಗಳ ಸಂದರ್ಭದಲ್ಲಿ ದುಡಿಯುವ ವರ್ಗಕ್ಕೆ ಆಯ್ಕೆಯ ಸ್ವಾತಂತ್ರ್ಯವಿದೆ. ಮಧ್ಯಪ್ರವೇಶ ಮಾಡಿ ಅದನ್ನು ಕದಲಿಸಬಹುದು, ನಿಷ್ಕ್ರಿಯವಾಗಿದ್ದು ಫ್ಯಾಸಿಸಂಗೆ ತುತ್ತಾಗಬಹುದು, ಇಲ್ಲವೆ ಪರಮಾಣು ಬಾಂಬುಗಳಿಗೆ ಆಹುತಿಯಾಗಿ ಬರ್ಬರ ಸಮಾಜಕ್ಕೆ ಹಿಂದಿರುಗಬಹುದು. ಮಾರ್ಕ್ಸ್ ಹೇಳುವಂತೆ, ಆಗ ಬಂಡವಾಳಶಾಹಿ ಮತ್ತು ದುಡಿಯುವ ವರ್ಗ, ಎರಡೂ ನಾಶವಾಗುತ್ತವೆ. ''ಸಂಕಲ್ಪ ನಿರ್ಣಯವಾದಿ''ಯಾಗಿದ್ದರೆ ಮಾರ್ಕ್ಸ್ ಅದನ್ನು ಮನ್ನಿಸಬೇಕಿತ್ತು. ಅದನ್ನವನು ಮಾಡಲಿಲ್ಲವೆಂಬುದು ಅವನ ವಿರೋಧಿಗಳು ಸಹ ಮಾನ್ಯಮಾಡುತ್ತಾರೆ.

೧೯ನೆಯ ಶತಮಾನದಲ್ಲಿ ಕ್ರಾಂತಿಕಾರಿ ಚಟುವಟಿಕೆಗಳಲ್ಲಿ ನಿರತನಾಗಿದ್ದ ಮಾರ್ಕ್ಸ್ ಬಂಡವಾಳಶಾಹಿಯ ಬಗ್ಗೆ ಮುಂಗಾಣದಿದ್ದ ಕೆಲವು ಅಂಶಗಳಿವೆ: ಉದಾಹರಣೆಗೆ, ಅದರ ವಿರುದ್ಧ ರಾಜಕೀಯವಾಗಿ ಬಂಡೇಳುವ ದುಡಿಮೆಗಾರರಿಗೆ ಸುಧಾರಣೆಯ ಸವಿಯುಣಿಸಿ ತಣಿಸುವುದು ಬಂಡವಾಳಶಾಹಿಗೆ ಸಾಧ್ಯವಾಗಿದೆ. ಆಗಾಗ್ಗೆ ಒಂದಿಷ್ಟು ರೊಟ್ಟಿ ತುಣುಕುಗಳನ್ನು ಉಣಿಸುತ್ತಾ ದುಡಿಯುವ ವರ್ಗದ ಹೋರಾಟದ ಕಸುವನ್ನು ಕುಗ್ಗಿಸುವ ತಂತ್ರ ಇಂದು ಅದರ ಶ್ರೀರಕ್ಷೆಯಾಗಿದೆ. ಅನಭಿವೃದ್ಧ ದೇಶಗಳ ಸಂಪತ್ತನ್ನು ಸೂರೆಗೊಂಡು ಅದರ ಒಂದು ಚಿಕ್ಕ ಭಾಗವನ್ನು ದುಡಿಯುವ ವರ್ಗಕ್ಕೆ ನೀಡಿ ಅದನ್ನು ಅಂಕೆಯಲ್ಲಿಟ್ಟುಕೊಳ್ಳುವುದು ಅಮೆರಿಕಾದಂತಹ ದೇಶಗಳಲ್ಲಿ ಈಗ ಸಾಧ್ಯವಾಗುತ್ತಿದೆ. ಭಾರತದಲ್ಲಿ ಯಾವನೋ ಸ್ವಾಮಿಯ ಕೈ ಹಿಡಿದರೆ ಬಂಡವಾಳಶಾಹಿಗೆ ನೆರವು ನೀಡಲು ಅವನು ಸಿದ್ಧನಾಗುತ್ತಾನೆ. ದುಡಿಯುವ ವರ್ಗದ ದಿಕ್ಕು ತಪ್ಪಿಸುತ್ತಾನೆ. ಜೊತೆಗೆ ದುರ್ದರ್ಶನಗಳ ಕಾರ್ಯಕ್ರಮ, ಕ್ರಿಕೆಟ್, ಮತೀಯ ಭಾವೋದ್ರೇಕ, ಜ್ಯೋತಿಷ್ಯ ಇತ್ಯಾದಿ ಅಸ್ತ್ರಗಳು ಸಹ ಬಂಡವಾಳಶಾಹಿಗೆ ಲಭ್ಯವಿವೆ. ಇದನ್ನೆಲ್ಲಾ ಮಾರ್ಕ್ಸ್ ನಿರೀಕ್ಷಿಸಿರಲಿಲ್ಲ. ಪರಮಾಣು ಶಸ್ತ್ರಗಳಿಂದ ವಿಶ್ವವೇ ಬೂದಿಯಾಗಿ ಹೋಗಿಬಿಡಬಹುದೆಂಬ ಆತಂಕ ಸಹ ಮಾರ್ಕ್ಸ್‌ನ ಮನಸ್ಸಿಗೆ ಬರುವಂತಿರಲಿಲ್ಲ. ಪರಿಸರ ವಿನಾಶದ ಭೀಕರ ಸಾಧ್ಯತೆ ಅವನ ಅರಿವಿಗೆ ಬಂದಿತ್ತು, ಆದರೆ ಅದೆಷ್ಟು ವಿಪತ್ಕಾರಿಯಾಗಬಹುದೆಂಬುದನ್ನು ಅವನು ಎಣಿಸಿರಲಿಲ್ಲ. ಅಂತಹ ಅಂಶಗಳಿಂದಾಗಿ ದುಡಿಯುವ ವರ್ಗದ ಕ್ರಾಂತಿಕಾರಿ ಶಕ್ತಿಯನ್ನು ಅವನು ಸ್ವಲ್ಪ ಉತ್ಪ್ರೇಕ್ಷಿಸಿರಬಹುದು, ಆದರೆ ಸಂಕಲ್ಪ ನಿರ್ಣಯವಾದಿಯಾಗಿ ಅವನೆಂದೂ ಮೊಂಡುಸೂತ್ರಗಳಿಗೆ ಕಟ್ಟುಬಿದ್ದಿರಲಿಲ್ಲ. ಮಾರ್ಕ್ಸ್ ಒಬ್ಬ ಪ್ರವಾದಿಯಲ್ಲ, ಅವನು ಸರ್ವಜ್ಞನಾಗಿರಲಿಲ್ಲ; ಆದರೆ ಅವನ ಮಾರ್ಗದರ್ಶಿ ವಿಶ್ಲೇಷಣಾ ಪದ್ಧತಿಯನ್ನು ಕರಗತಮಾಡಿಕೊಂಡು ಇಂದಿನ ಮಾರ್ಕ್ಸ್‌ವಾದಿಗಳು ಪ್ರಸ್ತುತ ಸಂದರ್ಭದ ಸಾಮಾಜಿಕ ವರ್ಗಗಳ ಮೀಮಾಂಸೆಯನ್ನು ಸಮರ್ಥವಾಗಿ ಮಂಡಿಸಲು ಸಾಧ್ಯ, ದುಡಿಯುವ ವರ್ಗದ ಇಂದು-ನಾಳೆಗಳನ್ನು ಪ್ರಕಾಶಮಾನವಾಗಿಸಲು ಸಾಧ್ಯ. ಮಾಹಿತಿ ಅಂತರ್ಜಾಲವು ಮಾರ್ಕ್ಸ್‌ಗೆ ತಿಳಿದಿರಲಿಲ್ಲ, ಆದರೆ ಅದನ್ನು ತಿಳಿಯಬಲ್ಲ ಮಾರ್ಕ್ಸ್‌ವಾದಿಗಳು ಇಂದು ನಮ್ಮ ನಡುವೆ ಇದ್ದಾರೆ. ಮಾರ್ಕ್ಸ್ ಆರಂಭಿಸಿದ್ದನ್ನು ಮುಂದುವರಿಸಲು ಅವರು ಬಾಧ್ಯರು.




ಉತ್ಪಾದಕ ಶಕ್ತಿಗಳು ಮತ್ತು ಉತ್ಪಾದನೆಯಲ್ಲಿ ಸಾಮಾಜಿಕ ಸಂಬಂಧಗಳು, ಇವೆರಡರಲ್ಲಿ ಮೊದಲನೆಯದಕ್ಕೆ ವಿಶೇಷ ಆದ್ಯತೆ ಮತ್ತು ಮನ್ನಣೆ ನೀಡಿದನೆಂದು ಮಾರ್ಕ್ಸ್ ಮೇಲಿನ ಆಕ್ಷೇಪ. ಆ ಕಾರಣದಿಂದಲೇ ಅವನ ಸಿದ್ಧಾಂತವನ್ನು ''ಡಿಟರ್ಮಿನಿಸ್ಟಿಕ್'' ಅಥವಾ ಸಂಕಲ್ಪ ನಿರ್ಣಯವಾದಿ ಎನ್ನಲಾಗಿದೆ. ಆದರೆ ಸ್ವತಃ ಮಾರ್ಕ್ಸ್ ಉತ್ಪಾದನೆಯ ಸಂದರ್ಭಗಳ ಸಾಮಾಜಿಕ ಸಂಬಂಧಗಳಿಗೆ ವಿಶೇಷ ಒತ್ತು ನೀಡಿರುವುದಿದೆ. ಉದಾಹರಣೆಗೆ, ಊಳಿಗಮಾನ್ಯ ಪದ್ಧತಿಯು ಬಂಡವಾಳಶಾಹಿಗೆ ಎಡೆಮಾಡಿಕೊಟ್ಟಿತಲ್ಲ ಏಕೆ ? ಬಂಡವಾಳಶಾಹಿಯು ಉತ್ಪಾದಕ ಶಕ್ತಿಗಳನ್ನು ವರ್ಧಿಸುತ್ತದೆ ಎಂಬ ಕಾರಣಕ್ಕಲ್ಲ; ಬದಲಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ಊಳಿಗಮಾನ್ಯತೆಯ ಸಾಮಾಜಿಕ ಸಂಬಂಧಗಳು ಬಂಡವಾಳಶಾಹಿ ಸಾಮಾಜಿಕ ಸಂಬಂಧಗಳೆದುರು ತತ್ತರಿಸಿ ಹೋಗಿದ್ದರಿಂದ. ಬಂಡವಾಳಶಾಹಿ ತಲೆಯೆತ್ತಲು ಊಳಿಗ ಮಾನ್ಯ ವ್ಯವಸ್ಥೆಯು ಅವಕಾಶ ಕಲ್ಪಿಸಿತು; ಅದು ಕೇವಲ ಉತ್ಪಾದಕ ಶಕ್ತಿಗಳು ಪ್ರವರ್ಧಮಾನಕ್ಕೆ ಬಂದಿದ್ದರಿಂದ

ಘಟಿಸಿದ ಸಂಗತಿಯಲ್ಲ. ಕೇವಲ ಉತ್ಪಾದಕ ಶಕ್ತಿಗಳೇ ಸಾಮಾಜಿಕ ವರ್ಗಗಳನ್ನು ಸಿದ್ಧಗೊಳಿಸುವಂತಿದ್ದರೆ ನಮ್ಮ ದೇಶದಲ್ಲಿ ಅಸ್ಪೃಶ್ಯತೆ ಎಂದೋ ತೊಲಗಿಹೋಗಿರುತ್ತಿತ್ತು. ಯಾವ ಸ್ವಾಮಿಯೂ ಅದಕ್ಕೆ ಜೀವ ತುಂಬಲು ಸಮರ್ಥ ನಾಗಿರುತ್ತಿರಲಿಲ್ಲ! ಹಾಗಿದ್ದರೆ, ಉತ್ಪಾದಕ ಶಕ್ತಿಗಳು ಊಳಿಗಮಾನ್ಯ ವ್ಯವಸ್ಥೆಯಡಿ ಬೆಳೆಯಲಿಲ್ಲವೆ ? ಬೆಳೆದುವು, ಅದಕ್ಕೆ ಕಾರಣ ವರ್ಗ ಹಿತಾಸಕ್ತಿ. ಕಳೆದ ಎರಡು ಶತಮಾನ ಗಳಲ್ಲಿ ಬಂಡವಾಳಶಾಹಿಯಡಿ ಉತ್ಪಾದಕ ಶಕ್ತಿಗಳು ಅಗಾಧ ವಾಗಿ ಬೆಳೆದಿವೆ; ಅದು ಹಾಗೆ ಸದಾ ವರ್ಧಿಸುತ್ತಿರದಿದ್ದರೆ ಅದಕ್ಕೆ ಉಳಿಗಾಲವಿರುವುದಿಲ್ಲ ಎಂಬ ಕಾರಣಕ್ಕೆ.

ಒಟ್ಟಿನಲ್ಲಿ, ಮಾನವ ಜೀವಿಗಳು ಸಾಮಾಜಿಕ ಸಂಬಂಧ ಗಳನ್ನು ಬೆಳೆಸಿಕೊಂಡಿದ್ದಾರೆ, ವರ್ಗ ಹೋರಾಟಗಳಲ್ಲಿ ಭಾಗಿಗಳಾಗಿದ್ದಾರೆ. ಆ ನಿಟ್ಟಿನಲ್ಲಿ ಅವರ ಇತಿಹಾಸವನ್ನು ಕಟ್ಟಿ ಕೊಂಡಿರುವವರು ಅವರೇ ಎನ್ನುವುದು ಸ್ಪಷ್ಟ. ವರ್ಗ ಹೋರಾಟಗಳು ಸೋತಿರುವುದೂ ಉಂಟಲ್ಲವೆ ? ಉತ್ಪಾದಕ ಶಕ್ತಿಗಳು ಮಾತ್ರ ನಿರ್ಧಾರಕ ಅಂಶಗಳಾಗಿದ್ದರೆ ಹೋರಾಟಗಳು ಸೋಲಬಾರದಲ್ಲ! ಸಮಾಜವಾದಿ ವ್ಯವಸ್ಥೆ ಅನಿವಾರ್ಯ ವೆಂದು ಮಾರ್ಕ್ಸ್ ಹೇಳಿದ್ದು ನಿಜ; ಆದರೆ ಪ್ಯಾರಿಸ್ ಕಮ್ಯೂನ್‌ನ ಸೋಲು ಅನಿವಾರ್ಯವೆಂದು ಅವನು ಭಾವಿಸಿರಲಿಲ್ಲ. ಗೋರ್ಬಚೇವ್‌ನಂಥವರು ಸೋವಿಯೆತ್ ಒಕ್ಕೂಟದ ಕಮ್ಯುನಿಸ್ಟ್ ಪಕ್ಷವನ್ನು ಸೈತಾನನ ಪಾದಗಳಡಿ ಅನಿವಾರ್ಯವಾಗಿ ಇಡುತ್ತಾರೆಂದೂ ಅವನು ಭಾವಿಸಿರಲಿಲ್ಲ. ಮಾರ್ಕ್ಸ್‌ನ ಈ ಮಾತುಗಳನ್ನು ಗಮನಿಸಿ : ''ಇತಿಹಾಸ ಏನನ್ನೂ ಮಾಡುವುದಿಲ್ಲ. ಅದರ ಬಳಿ ಸಂಪತ್ತಿಲ್ಲ, ಅದು ಯುದ್ಧಗಳನ್ನು ಮಾಡುವುದಿಲ್ಲ. ಅದನ್ನೆಲ್ಲಾ ಮಾಡುವುದು ಮಾನವ, ಜೀವಂತ ಮಾನವ. ಅವನ ಬಳಿ ಸಂಪತ್ತಿದೆ, ಅವನು ಸೆಣಸುತ್ತಾನೆ. ಇತಿಹಾಸವೆಂದರೆ ಮಾನವನು ತನ್ನ ಉದ್ದೇಶಗಳನ್ನು ಸಾಧಿಸಿಕೊಳ್ಳಲು ನಡೆಸುವ ಕ್ರಿಯೆ, ಅಷ್ಟೆ.'' ಇನ್ನೊಂದೆಡೆ ಅವನು ಹೇಳಿದ : ''ಭೌತವಾದಿ ವಿಧಾನವೆಂಬುದು ಒಂದು ಪತ್ತೆ ಹಚ್ಚುವ ಸಾಧನ; ಅದನ್ನು ಹಾಗೆ ಬಳಸದೆ ತಮ್ಮ ತಮ್ಮ ಅನುಕೂಲಕ್ಕೆ ತಕ್ಕಂತೆ ಇತಿಹಾಸವನ್ನು ವ್ಯಾಖ್ಯಾನ ಮಾಡಿಕೊಳ್ಳಹೊರಟರೆ ಆ ವಿಧಾನವು ಅದರ ವ್ಯತಿರಿಕ್ತ ಸ್ವರೂಪ ಧರಿಸಿಬಿಡುತ್ತದೆ.''

ಮಾನವನ ಕ್ರಿಯಾಶಕ್ತಿ ಸ್ವತಂತ್ರವಾದ್ದು. ಅದನ್ನು ಮಾರ್ಕ್ಸ್ ಸಹ ಒಪ್ಪಲೇಬೇಕು. ಅದನ್ನೊಪ್ಪಿದವರು ''ಸಂಕಲ್ಪ ನಿರ್ಣಯವಾದಿ''ಗಳಾಗಲಾರರು. ಹಣೆಬರಹದ ಖಡ್ಗ ಝಳಪಿಸುತ್ತಾರಲ್ಲ, ಅವರು ಆ ಮಾದರಿಗೆ ಸೇರುತ್ತಾರೆ. ''ಮನುಷ್ಯನ ಸ್ವಭಾವ ಬದಲಾಗ ಲಾರದು'' ಎನ್ನುತ್ತಾರಲ್ಲ, ಅವರು ಅದಕ್ಕೆ ಇನ್ನೊಂದು ಉದಾಹರಣೆ. ಇತಿಹಾಸದ ಅತ್ಯಂತ ದುರ್ಭರ ಕ್ಷಣಗಳಲ್ಲಿ ಮನುಷ್ಯರು ಆ ಇತಿಹಾಸಕಾಲದ ಸನ್ನಿವೇಶಗಳನ್ನು ಮೀರಿ ಸೆಣಸಿರುವ ನೂರಾರು ಉದಾಹರಣೆಗಳಿವೆ. ಹಾಗಿಲ್ಲದಿದ್ದರೆ ಭಾರತದಲ್ಲಿ ದಾಸ್ಯಪದ್ಧತಿ ಉತ್ಪಾಟನಗೊಳ್ಳುತ್ತಿತ್ತೆ? ಏಂಗೆಲ್ಸ್ ಅವಿರತವಾಗಿ ಮಿಲಿಟರಿ ಯುಕ್ತಿಗಳ ಅಭ್ಯಾಸ ಮಾಡಿದ್ದು ಇತಿಹಾಸದ ಸನ್ನಿವೇಶದಲ್ಲಿ ಅದನ್ನು ಮೀರಿ ಹೋರಾಡಲು ಜನರನ್ನು ಅಣಿ ಗೊಳಿಸುವ ಸಲುವಾಗಿ. ಭಗತ್ ಸಿಂಗ್ ನೇಣುಗಂಬವನ್ನೇರಿದ್ದೂ ಅದೇ ಕಾರಣಕ್ಕಾಗಿ.

ಹಾಗಿದ್ದರೆ ''ಅನಿವಾರ್ಯ'' ಎಂಬುವುದೇನೂ ಇಲ್ಲವೆ ? ಇದೆ, ಆದರೆ ಅದು ''ಸಂಕಲ್ಪ ನಿರ್ಣಯ'' ಅಲ್ಲ. ಹಿಟ್ಲರನ ಕೂಡುದೊಡ್ಡಿಯಲ್ಲಿ ಯಹೂದಿಗಳು ಸಾಯುವುದು ಅನಿವಾರ್ಯ, ಆದರೆ ಕೂಡುದೊಡ್ಡಿ ಅನಿವಾರ್ಯವಲ್ಲ. ಅಮರನಾಥ ಯಾತ್ರೆಗೆ ಹೋಗಿ ಸಾವನ್ನಪ್ಪುವುದು ಅನಿವಾರ್ಯವಲ್ಲ, ಆದರೆ ಅವ್ಯವಸ್ಥೆಯಿಂದಾಗಿ ಕೆಲವು ಯಾತ್ರಿಗಳು ಸಾಯುವುದು ಅನಿವಾರ್ಯ. ಇತಿಹಾಸದ ಅರ್ಥೈಸುವಿಕೆ ಇದರ ಗ್ರಹಿಕೆಯ ಆಧಾರದಲ್ಲಿ ನಡೆಯಬೇಕು. ''ಭಾರತದ ದುಡಿಯುವ ಜನ ಶೋಷಣೆಯಿಂದ ಮುಕ್ತರಾಗಿಯೇ ತೀರುತ್ತಾರೆ'' ಎಂದು ಹೇಳುತ್ತೇವೆ. ಅದು 'ಅನಿವಾರ್ಯ' ಎಂದಾಗ ನೈತಿಕವಾಗಿ ಅದು ಅಗತ್ಯ ಎಂದರ್ಥವೇ ವಿನಾ ರಾಜಕೀಯವಾಗಿ ಅದು ಇಂದೇ ನಡೆದುಹೋಗುತ್ತದೆಂದಲ್ಲ. ''ಹಾಗೆ ಮುಕ್ತರಾಗದಿದ್ದರೆ ಎಂತಹ ಅಚಿಂತ್ಯ ಹೀನಾಯ ಸ್ಥಿತಿ'' ಎಂಬುದು ಆ ಹೇಳಿಕೆಯ ವ್ಯಾಪ್ತಿ. ''ಸಮಾಜವಾದ, ಇಲ್ಲವೆ ಬರ್ಬರತೆ'' ಎಂದಾಗಲೂ ಅದೇ ಅರ್ಥವ್ಯಾಪ್ತಿ ಇದೆ. ಸಮಾಜವಾದದ ಪ್ರಾಪ್ತಿ ಆಗದಿದ್ದರೆ ಎಷ್ಟು ಬರ್ಬರ ಜೀವನಕ್ಕೆ ತುತ್ತಾಗುತ್ತೇವೆಂಬ ಆತಂಕ, ಆಶಯ, ಅದರಲ್ಲಿದೆ. ಉತ್ಪಾದಕ ಶಕ್ತಿಗಳ ವರ್ಧನೆ – ಸಾಮಾಜಿಕ ಸಂಬಂಧಗಳು – ವರ್ಗ ಹೋರಾಟ – ಸಮಾಜವಾದಿ ವ್ಯವಸ್ಥೆ ಎಂಬ ಸೂತ್ರವನ್ನು ಅರ್ಥ ಮಾಡಿಕೊಳ್ಳಲು ಇದು ಸೂಚನೆ ನೀಡುತ್ತದೆ. ವರ್ಗ ಹೋರಾಟಗಳು ಉಂಟುಮಾಡುವ ಕ್ರಾಂತಿಕಾರಿ ಬದಲಾವಣೆಗಳಿಂದ, ತಾವು




ದುಡಿದು ಗಳಿಸಿಕೊಳ್ಳದ ಸೌಲಭ್ಯಗಳನ್ನು ಕಳೆದುಕೊಳ್ಳುವ ಅಲ್ಪಸಂಖ್ಯಾತ ವರ್ಗಕ್ಕೆ ಕಸಿವಿಸಿ ಉಂಟಾಗುವುದು ಸ್ವಾಭಾವಿಕ; ಆದ್ದರಿಂದ ತನ್ನ ರಕ್ಷಣೆಗೆ ಅದು ಭದ್ರಕೋಟೆ ರಚಿಸಿ ಕೊಳ್ಳಲು ಯತ್ನಿಸುತ್ತದೆ. ಮಾರ್ಕ್ಸ್‌ನ ನಿರೂಪಣೆಯನ್ನು ಲೇವಡಿ ಮಾಡಿ ನಿರಾಕರಿಸುವುದು ಆ ವರ್ಗಕ್ಕೆ ಒಂದು ಆಯುಧ. ಆದರೆ ದುಡಿಯುವ ವರ್ಗವು ವರ್ಗ ಹೋರಾಟ ದಿಂದ ವಿಮುಖವಾಗಬೇಕಾಗಿಲ್ಲ, ಆಗುವುದಿಲ್ಲ. ಇತಿಹಾಸ ವನ್ನು ನಿರ್ಮಾಣ ಮಾಡುವ ಜವಾಬ್ದಾರಿಯನ್ನು ದುಡಿಯುವ ವರ್ಗವು ನಿರ್ವಹಿಸುತ್ತದೆ ಮತ್ತು ಮಾರ್ಕ್ಸ್ ಹೇಳುವಂತೆ, ಆಗಿನಿಂದ ಮಾನವ ಜನಾಂಗದ ಪೂರ್ವೇತಿಹಾಸ ಕೊನೆಗೊಂಡು ನಿಜೇತಿಹಾಸ ಆರಂಭಗೊಳ್ಳುತ್ತದೆ.

ಇತಿಹಾಸದ ನಿಯಮ ಮತ್ತು ನೈಸರ್ಗಿಕ ನಿಯಮ ಇವುಗಳ ಪೈಕಿ ಏಂಗೆಲ್ಸ್ ನೈಸರ್ಗಿಕ ನಿಯಮಕ್ಕೆ ಚ್ಯುತಿಯಿಲ್ಲ ವೆಂಬುದನ್ನು ಒತ್ತಿಹೇಳುತ್ತಾನೆ. ನೈಸರ್ಗಿಕ ನಿಯಮದಲ್ಲಿ ಇತಿಹಾಸದ ನಿಯಮವು ಅಂತರ್ಗತವಾಗಿದೆಯೆಂಬಂತೆ ಮಾರ್ಕ್ಸ್ ನಿರೂಪಣೆ ಆಗಾಗ್ಗೆ ತೋರಿಬರುತ್ತದೆ. ಇಬ್ಬರೂ ಒಪ್ಪುವ ಸಂಗತಿ ಇದು : ಇತಿಹಾಸದ ನಿಯಮವನ್ನು ಮಾನವ ರೂಪಿಸಬಲ್ಲ, ಆದರೆ ನೈಸರ್ಗಿಕ ನಿಯಮವನ್ನಲ್ಲ. ಬಂಡವಾಳಶಾಹಿಯಡಿ ಲಾಭದ ಪ್ರಮಾಣವು ಕುಸಿಯುತ್ತಿರುತ್ತದೆಂಬುದು ಇತಿಹಾಸದ ನಿಯಮ. ಆದರೆ ಅದು ಗುರುತ್ವಾಕರ್ಷಣೆಯ ನಿಯಮದಷ್ಟು ಅಬಾಧಿತವಲ್ಲ. ಆದಾಗ್ಯೂ, ಸಾಮಾಜಿಕ ಜೀವನವು ನಿಯಮರಹಿತವಲ್ಲ. ಅದೇನಾದರೂ ಹಾಗಿದ್ದಿದ್ದರೆ ಜೀವನದಲ್ಲಿ ಧ್ಯೇಯ, ಆಕಾಂಕ್ಷೆ, ನಿರೀಕ್ಷೆ ಇವಕ್ಕೆಲ್ಲಾ ಅರ್ಥವೇ ಇರುತ್ತಿರಲಿಲ್ಲ. ಸಾಧ್ಯತೆಗಳಿರುವಂತೆ ಜೀವನದಲ್ಲಿ ನಿರ್ಬಂಧಗಳೂ ಇವೆ. ರಷ್ಯದ ಈಜುಗಾರ್ತಿಯರು ಒಲಿಂಪಿಕ್ಸ್‌ನಲ್ಲಿ ಸಮಕಾಲಿಕವಾಗಿ ಈಜುವಾಗ ಅದೆಷ್ಟು ಕಾಲ ನೀರಿನಲ್ಲಿ ಮುಳುಗಿರಬಲ್ಲರು ! ಅದು ಸಾಧ್ಯತೆ. ಆದರೆ ಹಾಗೆ ಗಂಟೆಗಟ್ಟಲೆ ಉಳಿಯಲು ಅವರಿಗೂ ಸಾಧ್ಯವಿಲ್ಲ. ಅದು ನಿರ್ಬಂಧ. ಮಾನವನು ಇತಿಹಾಸ ನಿರ್ಮಿಸುವಾಗ ಈ ಎರಡನ್ನೂ ತಿಳಿದು ಮುಂದುವರಿಯುತ್ತಾನೆ. ಯಾವ ವ್ಯವಸ್ಥೆಯ ನಂತರ ಏನು, ಎಂಬುದು ಕೂಡ ಇವೆರಡರ ವ್ಯಾಪ್ತಿಗೆ ಸೇರಿದ್ದು. ಇತಿಹಾಸದ ನಿಯಮಕ್ಕೆ ಅಪವಾದ ಸಾಧ್ಯ, ನಿಸರ್ಗದ ನಿಯಮಕ್ಕೆ ಅದಿಲ್ಲ. ಸಮಾಜವಾದಿ ವ್ಯವಸ್ಥೆಯು ಮಾರ್ಕ್ಸ್ ಹೇಳಿದ ''ನಿಯಮ''ದ ಪ್ರಕಾರವೇ ಆಗಬೇಕೆಂದೇನೂ ಇಲ್ಲ. ಅಂದರೆ, ಉತ್ಪಾದಕ ಶಕ್ತಿಗಳಿಗಿರುವ ಸ್ಥಾನವು ಸಾಮಾಜಿಕ ವರ್ಗಕ್ಕೂ ಇದೆ. ಆದ್ದರಿಂದ ಅಭಿವೃದ್ಧ ಬಂಡವಾಳಶಾಹಿ ಇಲ್ಲದೆಯೂ ಸಮಾಜವಾದಿ ವ್ಯವಸ್ಥೆಗೆ ಕೆಲವೆಡೆ ಮಾನವ ಸಮಾಜವು ಕ್ರಮಿಸಿರುವ ಉದಾಹರಣೆಗಳಿವೆ. ಅಭಿವೃದ್ಧಿಯ ಹಾದಿಯನ್ನು ಸಹ ಬೇರೆಬೇರೆ ಸಮಾಜಗಳು ಬೇರೆಬೇರೆ ರೀತಿಗಳಲ್ಲಿ ಮಾಡಿಕೊಳ್ಳಲಾಗದು ಎಂದೇನೂ ಇಲ್ಲ. ವರ್ಗ ಹೋರಾಟದ ವೈವಿಧ್ಯ ಮತ್ತು ವೈಶಿಷ್ಟ್ಯ ಅದರಿಂದಲೇ ಅನನ್ಯ. ಬಂಡವಾಳಶಾಹಿಯ ಪಿಡುಗನ್ನು ಸಮಾಜದ ಮೇಲೆ ಹೇರಿರುವವರು ಸಮಾಜವಾದಿಗಳಲ್ಲ ತಾನೆ ! ಆದರೆ ಅದು ಇದೆ. ಅದಿರುವಾಗ ಸಮಾಜವಾದದ ಆಕಾಂಕ್ಷೆ ಹೊತ್ತವರು ಮಾಡಬೇಕಾದ್ದೇನು ? ಅಷ್ಟೊಂದು ಸಂಪತ್ತನ್ನು ಬಂಡವಾಳಶಾಹಿಯಡಿ ದುಡಿಯುವ ವರ್ಗವು ಸೃಷ್ಟಿಸುತ್ತದಲ್ಲ, ಅದನ್ನು ಜನರಿಗೆ ಮುಟ್ಟಿಸುವ ಕೆಲಸ ನಡೆಯ ಬೇಕಲ್ಲವೆ ? ಬಂಡವಾಳಶಾಹಿಯಡಿ ''ತನಗೆ, ತನಗೆ, ತನಗೆ ಮಾತ್ರ'' ಎಂಬ ಮೌಲ್ಯ ಅಸಹ್ಯವೆನಿಸುವಷ್ಟಿದೆ. ಮಾನವ ಸಮಾಜವನ್ನು ಅಂತಹ ಮೌಲ್ಯಕ್ಕೆ ಕಟ್ಟುಬಿದ್ದಿರದಂತೆ ಮಾಡುವುದೇ ವರ್ಗ ಹೋರಾಟ. ಆರ್ಥಿಕ-ಸಾಮಾಜಿಕ ನಿರ್ಬಂಧಗಳಿಂದ ಮಾನವನನ್ನು ಮುಕ್ತವಾಗಿಸಿ ತನ್ನ ಅಮೋಘ ಕ್ರಿಯಾಶಕ್ತಿಯನ್ನು ಸಂಪೂರ್ಣವಾಗಿ ಅಭಿವ್ಯಕ್ತಗೊಳಿಸಲು ಬೇಕಾದ ವ್ಯವಸ್ಥೆಯನ್ನು ಅಣಿಗೊಳಿಸುವುದು ವರ್ಗ ಹೋರಾಟದ ಗುರಿ. ಅದರ ಜವಾಬ್ದಾರಿ ಹೊತ್ತಿರುವುದು ದುಡಿಯುವ ವರ್ಗ. ಇದು ಮಾರ್ಕ್ಸ್ ಕಮ್ಯುನಿಸಂ ಕುರಿತು ಇರಿಸಿಕೊಂಡ ಪರಿಪ್ರೇಕ್ಷ್ಯ. ಅದೇ ಇಂದಿಗೂ ದುಡಿಯುವ ವರ್ಗದ ಧ್ಯೇಯ ಮತ್ತು ಧೋರಣೆ. ಪ್ರಜಾಪ್ರಭುತ್ವವಾದಿ ಕ್ರಮ ಮತ್ತು ಸಂಘಟಿತ ಹೋರಾಟ ಅದರ ಹಾದಿ. ಮಾರ್ಕ್ಸ್ ಹೇಳಿದ್ದರಲ್ಲಿ ತಪ್ಪೇನಿದೆ ?

**ಟೆರಿ ಈಗಲ್‌ಟನ್**

ಕನ್ನಡದಲ್ಲಿ ನಿರೂಪಣೆ : **ಡಾ॥ ಜಿ. ರಾಮಕೃಷ್ಣ**

೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೪ನೇ ಕ್ರಾಸ್, ಕಾವೇರಿನಗರ
ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

# ಗಿರಿಜನ ಸಂಸ್ಕೃತಿಯ ಮೇಲೆ ಬದಲಾಗುತ್ತಿರುವ ಆಹಾರ – ವ್ಯವಸಾಯ ಪದ್ಧತಿಯ ಪರಿಣಾಮಗಳು

ಜಿ. ಎಸ್. ಜಯದೇವ

“ಈ ಭಾರತೀಯ ಜೀವನ ವಿಧಾನದಿಂದ ಹೊರ ಸರಿಯಬೇಡಿ; ಭಾರತೀಯರೆಲ್ಲರೂ ಇತರ ಜನಾಂಗದವರಂತೆ ಆಹಾರ ಸೇವಿಸುವುದು, ಬಟ್ಟೆ ಧರಿಸುವುದು, ನಡವಳಿಕೆಯನ್ನು ಅಳವಡಿಸಿಕೊಳ್ಳುವುದು ಒಳ್ಳೆಯದೆಂದು ಕ್ಷಣ ಮಾತ್ರವೂ ಭಾವಿಸದಿರಿ.”

ಉಡುಗೆ-ತೊಡುಗೆ, ಆಹಾರ ಮುಂತಾದ ಈ ಸರ್ವೇಸಾಮಾನ್ಯ ವಿಷಯಗಳನ್ನು ಸಹ ಗಮನದಲ್ಲಿಟ್ಟುಕೊಂಡು ಸ್ವಾಮಿ ವಿವೇಕಾನಂದರು ಹೇಳುವ ಈ ಮಾತುಗಳ ಅರ್ಥ ದಿನ ಕಳೆದಂತೆ ನಮಗೆ ಗಾಢವಾಗಿ ಅನುಭವಕ್ಕೆ ಬರುತ್ತಿದೆ. ನಮ್ಮ ಸಂಸ್ಕೃತಿಗೂ ಈ ಸಾಮಾನ್ಯ ವಿಷಯಗಳಾದ ಆಹಾರ ಮುಂತಾದವುಗಳಿಗೂ ಏನು ಸಂಬಂಧ? ಇದನ್ನು ಕುರಿತು ಆಳವಾಗಿ ಚಿಂತಿಸುವುದು ಬಹಳ ಮುಖ್ಯ. ಅದರಲ್ಲೂ ಇಂದಿನ ಜಾಗತೀಕರಣ ತರುತ್ತಿರುವ ಬೃಹತ್ ಪ್ರಮಾಣದ ಸಾಂಸ್ಕೃತಿಕ ಪಲ್ಲಟಗಳ ಮೂಲವನ್ನು ಬಹುಶಃ ನಾವು ನಮ್ಮ ಬದಲಾಗುತ್ತಿರುವ ಆಹಾರ, ಉಡುಗೆ-ತೊಡುಗೆಗಳಲ್ಲಿ ಮತ್ತು ಇವುಗಳ ಉತ್ಪಾದನಾ ವಿಧಾನದಲ್ಲಿ ಗುರುತಿಸಬೇಕಾಗುತ್ತದೆ.

ಇದನ್ನು ಕೇವಲ ಊಹೆ ಮಾಡಿ ನಾನು ಹೇಳುತ್ತಿಲ್ಲ. ಕಳೆದೆರಡು ದಶಕಗಳಲ್ಲಿ ಗಿರಿಜನರ ಜೀವನದಲ್ಲಾಗುತ್ತಿರುವ ಬದಲಾವಣೆಗಳನ್ನು ಗಮನಿಸಿದರೆ ಅವರ ಸಂಸ್ಕೃತಿಯಲ್ಲಾಗುತ್ತಿರುವ ಕ್ಷಿಪ್ರ ಬದಲಾವಣೆಗೂ ಅವರ ವ್ಯವಸಾಯ-ಆಹಾರ ವಿಹಾರಾದಿ ಪದ್ಧತಿಗಳಿಗೂ ನೇರಸಂಬಂಧವಿರುವುದು ನಿರ್ವಿವಾದವಾಗಿ ಕಂಡುಬರುತ್ತಿದೆ. ಬಿಳಿಗಿರಿರಂಗನ ಬೆಟ್ಟದ ಸೋಲಿಗರ ಜೀವನವನ್ನು ಅರಿತುಕೊಳ್ಳಬೇಕೆಂದು ನಮ್ಮ ಆಶ್ರಮದ ಯುವಕ-ಯುವತಿಯರ ತಂಡ ಬಿಳಿಗಿರಿರಂಗನ ಬೆಟ್ಟದಲ್ಲಿ ಬೀಡುಬಿಟ್ಟು ಅಧ್ಯಯನ ನಡೆಸಿತು. ಅಧ್ಯಯನ ಎಂದರೆ ಬರೀ ಪುಸ್ತಕ ಓದುವುದು ಎಂದು ಭಾವಿಸುವ ವಿದ್ಯಾರ್ಥಿಗಳಿಗೆ ಇದೊಂದು ಹೊಸ ಅನುಭವವಾಗಿತ್ತು. ಸೋಲಿಗರನ್ನು ಮಾತನಾಡಿಸಿ ಅವರ ಬಾಯಿಂದಲೇ ಬದಲಾಗುತ್ತಿರುವ ಅವರ ಜೀವನ ವಿಧಾನದ ಬಗ್ಗೆ ಕೇಳಿ ತಿಳಿದುಕೊಂಡರು. ಅನೇಕ ತಲೆಮಾರುಗಳಿಂದ ಏಕಪ್ರಕಾರವಾಗಿ ನಡೆದುಬಂದ ಸಂಸ್ಕೃತಿಯೊಂದು ಬದಲಾಗಲು ಕಾರಣವೇನು ಎಂಬ ಬಗ್ಗೆ ಹೊಸ ತಿಳುವಳಿಕೆ ಈ ಮಾತುಕತೆಯಿಂದ ತಿಳಿಯಿತು. ಎಡ್ವಿನ್ ಆರ್ನಾಲ್ಡ್ ಹೇಳುವಂತೆ “ಈ ಪ್ರಪಂಚವನ್ನು

ಅಭಿವೃದ್ಧಿ ಎಂಬುದು ಕೇವಲ ಆರ್ಥಿಕ ಪ್ರಗತಿ ಮಾತ್ರವಲ್ಲ ಎಂಬುದನ್ನು ಇಂದಿನ ಸೋಲಿಗರ ಜೀವನ ಕ್ರಮವನ್ನು, ಅವರ ಆರೋಗ್ಯವನ್ನು ಗಮನಿಸಿದರೆ ತಿಳಿಯುತ್ತದೆ. ಕಾಫಿ, ಮೆಣಸುಗಳು ಅವರಿಗೆ ಹೇರಳವಾದ ಹಣವನ್ನು ತಂದುಕೊಟ್ಟಿರುವುದು ನಿಜ. ಆದರೆ ಈ ಹಣದ ನಿರ್ವಹಣೆಗೆ ಬೇಕಾದ ಶಿಸ್ತು ಸಂಯಮಗಳು ಸೋಲಿಗ ಸಂಸ್ಕೃತಿಗೆ ಆಗಂತುಕ ವಿಷಯಗಳು. ಹಣ ನಿರ್ವಹಣೆ ತಿಳಿಯದ ಈ ಮುಗ್ಧ ಗಿರಿಜನರು ಹೆಚ್ಚಾದ ಹಣದಿಂದ ಏನು ಮಾಡಬೇಕೆಂದು ತಿಳಿಯದೆ ಸಾರಾಯಿ, ಭಂಗಿ ಮುಂತಾದ ವ್ಯಸನಗಳ ದಾಸರಾಗಿ ತಮ್ಮ ಆರೋಗ್ಯವನ್ನು ಮತ್ತಷ್ಟು ಕೆಡಿಸಿಕೊಳ್ಳುತ್ತಿದ್ದಾರೆ. ಮೊಬೈಲ್ ಫೋನ್, ಎಫ್‌ಎಂ ರೇಡಿಯೊ, ಟಿ.ವಿ.ಗಳು ಗಿರಿಜನರ ಜೀವನವನ್ನು ಪ್ರವೇಶಿಸಿವೆ. ಜೊತೆಗೆ ದೇವಸ್ಥಾನದ ಮುಂದೆ ಭಿಕ್ಷೆಗಾಗಿ ಕುಳಿತುಕೊಳ್ಳುವ ಸೋಲಿಗರ ಸಂಖ್ಯೆಯೂ ದಿನೇ ದಿನೇ ಹೆಚ್ಚಾಗುತ್ತಿದೆ. ಹಿಂದೆ ಸೋಲಿಗರಲ್ಲಿ ಭಿಕ್ಷೆ ಬೇಡುವ ಪದ್ಧತಿ ಇರಲಿಲ್ಲ. ತಮ್ಮ ನಡುವೆ ಇರುವ ದುರ್ಬಲರನ್ನು ಸೋಲಿಗ ಸಮುದಾಯ ಹಂಚಿ ತಿನ್ನುವ ಪದ್ಧತಿಯಿಂದಾಗಿ ರಕ್ಷಿಸುತ್ತಿತ್ತು. ಆದರೆ ಈಗಿನ ಆಸ್ಪತ್ರೆ, ಶಾಲೆ ಬ್ಯಾಂಕುಗಳ ನಡುವೆ, ಕಾಫಿ–ಮೆಣಸು ಬೆಳೆಗಳ ಸಂವೃದ್ಧಿಯ ನಡುವೆ ಭಿಕ್ಷಾಟನೆಯೂ ತನ್ನದೇ ಸ್ಥಾನವನ್ನು ಪಡೆದುಕೊಂಡಿದೆ.







ತಾನು ಕಂಡದ್ದಕ್ಕಿಂತ ಹೆಚ್ಚು ಸಂತೋಷದಾಯಕವಾಗಿಯೂ ಮತ್ತು ಸುಂದರವಾಗಿಯೂ ಮಾಡುವವನು ಸುಸಂಸ್ಕೃತ'' ಎನಿಸಿಕೊಳ್ಳುತ್ತಾನೆ. ಇದನ್ನು ಒಂದು 'ಉದಾತ್ತ ಮಹತ್ವಾಕಾಂಕ್ಷೆ' ಎನ್ನುತ್ತಾನೆ ಆರ್ನಾಲ್ಡ್. ಈ ವಿವರಣೆಯ ಹಿಂದೆ ಈ ಸಂಸ್ಕೃತಿಚಿಂತಕನ ಮನದಾಳದಲ್ಲಿ 'ಪ್ರಯತ್ನದ' ಭಾವವಿದೆ. ಸೋಲಿಗರ ಜೀವನವನ್ನು ಮೂರು ದಶಕಗಳ ಹಿಂದೆ ಕಂಡಿದ್ದೇನೆ. ಆಗ ಇವರಿಗೆ ಇಂತಹ ಯಾವ ಉದ್ದೇಶಗಳು ಇಲ್ಲದಿದ್ದರೂ ಇವರು ಸಹಜವಾಗಿಯೇ ಕಾಡನ್ನು ಕೆಡಿಸದೆ, ಮನುಷ್ಯ ಸಂಬಂಧಗಳನ್ನು ಅನಗತ್ಯವಾಗಿ ಕಹಿ ಮಾಡದೆ ಬಾಳುತ್ತಿದ್ದುದನ್ನು ನಾನು ಕಣ್ಣಾರೆ ಕಂಡಿದ್ದೇನೆ. ಇಂದು ಸೋಲಿಗರ ವ್ಯವಸಾಯ ಪದ್ಧತಿ, ಆಹಾರ ಪದ್ಧತಿ, ಉಡುಗೆ ತೊಡುಗೆಗಳು, ಜೊತೆಗೆ ಕಾಡಿನ ಜೀವ ವೈವಿಧ್ಯತೆಯೂ ಬದಲಾಗುತ್ತಿದೆ. ಸೋಲಿಗರ ನಡುವೆ ಹಿಂದೆಂದೂ ಇಲ್ಲದಷ್ಟು ಹಣ ಚಲಾವಣೆ ತ್ವರಿತಗತಿಯಲ್ಲಿ ಸಾಗಿದೆ. ಇದರ ನೇರ ಪರಿಣಾಮವನ್ನು ನಾವು ಅವರ ಸಂಸ್ಕೃತಿಯಲ್ಲಾಗುತ್ತಿರುವ ಪಲ್ಲಟಗಳಲ್ಲಿ ಗುರುತಿಸದೆ ವಿಧಿಯಿಲ್ಲ. ಹಾಗಾಗಿ ನಮ್ಮ ಯುವಕರ ತಂಡದ ಅಧ್ಯಯನ ಕೇವಲ ಸೋಲಿಗರ ಜೀವನದ ಮೇಲಷ್ಟೆ ಬೆಳಕು ಚೆಲ್ಲಲಿಲ್ಲ, ಈ ಅಧ್ಯಯನದಿಂದಾಗಿ ನಮ್ಮ ಯುವಕರು ಬದಲಾಗುತ್ತಿರುವ ತಮ್ಮದೇ ಜೀವನ ವಿಧಾನಗಳನ್ನು ಕುರಿತು ಆತ್ಮವಿಮರ್ಶೆಯಲ್ಲಿ ತೊಡಗುವಂತೆ ಮಾಡಿತು. ನಮ್ಮ ಅಧ್ಯಯನದಿಂದ ಕಂಡುಬಂದ ಕೆಲವು ಸಂಗತಿಗಳು ಹೀಗಿವೆ.

ಮೂರು ಅಥವಾ ಅಪರೂಪಕ್ಕೆ ನಾಲ್ಕು ತಲೆಮಾರಿನ ಸೋಲಿಗ ಗಿರಿಜನ ಮುಖಂಡರನ್ನು ಸಂದರ್ಶಿಸುವ ಅವಕಾಶ ನಮ್ಮ ತಂಡಕ್ಕೆ ದೊರೆಯಿತು. ಮಾರಮ್ಮ ಎಂಬ ಸುಮಾರು ೮೫ರಿಂದ ೯೦ ವರ್ಷದ ಮುದುಕಿ ಅತ್ಯಂತ ಹಳೆಯ ತಲೆ. ನಿನ್ನ ವಯಸ್ಸೆಷ್ಟು ಅಜ್ಜಿ ಎಂದರೆ, ''ನಾನೇನು ಓದು ಬರಹ ಕಲಿತಿದ್ದೀನಾ; ನನಗೇನು ಗೊತ್ತು ನೀವೆಲ್ಲಾ ಓದು ಬರಹ ಕಲಿತಿದ್ದೀರಿ, ನಿಮಗ್ತಾನೆ ಗೊತ್ತಿರ್‍ಬೇಕು'' ಎಂದುಬಿಡುತ್ತಿದ್ದಳು. ನಾವು ಸಾಕಷ್ಟು ಕೆದಕಿ ಕೆದಕಿ ಕೇಳಿ ಅವಳ ಮಸುಕು ಮಸುಕಾದ ನೆನಪಿನ ಆಳದಿಂದ ಕೆಲವೊಂದು ರತ್ನಗಳನ್ನು ಹೆಕ್ಕಿ ತೆಗೆದೆವು. ಬಹಳ ಬಹಳ ಹಿಂದೆ ಮಲ್ಕಿ ಬೆಟ್ಟದ ದಟ್ಟ ಕಾಡುಗಳಲ್ಲಿ ಪೋಡು ಕಟ್ಟಿಕೊಂಡು (ಮನೆಗಳ ಗುಂಪು) ವಾಸ ಮಾಡುವಾಗ ಬಿದಿರಿನ ಪಾತ್ರೆಗಳಲ್ಲಿ ನೀರನ್ನು ಹೊತ್ತೊಯ್ಯುತ್ತಿದ್ದುದನ್ನು ನೆನಪಿಸಿಕೊಂಡಳು. ಸುಮಾರು ೪-೫ ಅಡಿ ಉದ್ದದ ಹೆಬ್ಬಿದಿರಿನ ಗೆಣ್ಣುಗಳನ್ನು ಒಡೆದು ತೆಗೆದು ತಳಭಾಗದನ್ನು ಮಾತ್ರ ಉಳಿಸಿ 'ಬಿದಿರ್‍ಣಾಣಿ' ಅಥವಾ ಬಿದಿರಿನ ಪಾತ್ರೆ ಮಾಡಿಕೊಳ್ಳುತ್ತಿದ್ದರು. ಇದರಲ್ಲಿ ನೀರು ತೆಗೆದುಕೊಂಡು ಹೋಗಿ ತಮ್ಮ ಗುಡಿಸಿಲಿನಲ್ಲಿದ್ದ ಮಣ್ಣಿನ ಮಡಕೆಗೆ ತುಂಬಿಕೊಳ್ಳುತ್ತಿದ್ದರು. ಆ ಕಾಲದಲ್ಲಿ ಬೆಟ್ಟಕ್ಕೆ ರಸ್ತೆಯಾಗಲೀ ಬಸ್ಸುಗಳಾಗಲೀ ಇರಲಿಲ್ಲ. ಕತ್ತೆಗಳ ಮೇಲೆ ಸಾಮಾನುಗಳನ್ನು ಹೇರಿಕೊಂಡು ವ್ಯಾಪಾರಿಗಳು ಬೆಟ್ಟಕ್ಕೆ ಬಂದು ಸೋಲಿಗರಿಗೆ ಬೇಕಾದ ಮಡಿಕೆ ಕುಡಿಕೆ, ಮಚ್ಚು, ಕುಡಗಿಲುಗಳನ್ನು ಕೊಟ್ಟು ಪ್ರತಿಯಾಗಿ ಸೋಲಿಗರ ಬಳಿ ಇರುತ್ತಿದ್ದ ರಾಗಿ, ಜೋಳ, ಬಾಳೆ, ಜೇನು ಮುಂತಾದವನ್ನು ಯಥೇಚ್ಛವಾಗಿ ಪಡೆಯುತ್ತಿದ್ದರು. ಮಾರಮ್ಮನ ಪ್ರಕಾರ ಈ ವಿನಿಮಯ ಪದ್ಧತಿ ಬೆಳ್ಳಿ ರೂಪಾಯಿಗಳು ಬಿಳಿಗಿರಿರಂಗನ ಬೆಟ್ಟವನ್ನು ಪ್ರವೇಶಿಸುವುದಕ್ಕೆ ಮೊದಲು ಆಚರಣೆಯಲ್ಲಿತ್ತು. ಆ ಕಾಲದಲ್ಲಿ ರಾಗಿ ಬೆಳೆಯುವುದೇ ಪ್ರಧಾನ ವ್ಯವಸಾಯ ವಾಗಿತ್ತು. ಅಲ್ಪ ಸ್ವಲ್ಪ ಜೋಳ, ಜೊತೆಗೆ 'ಎಡ್ಡ' ಎಂಬ ದಂಟಿನ ಸೊಪ್ಪಿನ ಜಾತಿಯ ಗಿಡವನ್ನು ಬೆಳೆಯುತ್ತಿದ್ದರು. ಎಡ್ಡನ ಬೀಜವನ್ನು ಹುರಿದು ಜೇನುತುಪ್ಪ ಸೇರಿಸಿ ತಯಾರಿಸುತ್ತಿದ್ದ ತಿನಿಸು ಅತ್ಯಂತ ರುಚಿಕರ. ಈಗಲೂ ಅಪರೂಪಕ್ಕೊಮ್ಮೆ ಈ ತಿನಿಸು ತಯಾರಿಸುವುದುಂಟು. ಅಲ್ಲದೆ ಕುಂಬಳ, ಬಾಳೆ, ತೊಗರಿ, ಸಾಸುವೆ, ನಿಂಬೆ, ಇತ್ಯಾದಿ ಬೆಳೆಗಳನ್ನು ಸಹ ಬೆಳೆಯುತ್ತಿದ್ದರು. ಸ್ನಾತಕೋತ್ತರ ಪದವೀಧರ ಸೋಲಿಗರ ಸಿ. ಮಾದೇಗೌಡ ತನ್ನ ಜನ ಹಿಂದೆ ಬೆಳೆಯುತ್ತಿದ್ದ ಬಗೆ ಬಗೆಯ ಬೆಳೆಗಳ ಬಗ್ಗೆ ಮಾಹಿತಿ ಸಂಗ್ರಹಿಸಿದ್ದಾರೆ. ಅವರ ಪ್ರಕಾರ ೧೩೫ ವಿವಿಧ ಬಗೆಯ ಸ್ಥಳೀಯ ಧಾನ್ಯ, ತರಕಾರಿ, ಹಣ್ಣಿನ ಗಿಡಗಳನ್ನು ಸೋಲಿಗರು ಬೆಳೆದು ಆಹಾರವಾಗಿ ಉಪಯೋಗಿಸುತ್ತಿದ್ದರು. ಪಾರಂಪರಿಕವಾದ ಈ ಬೆಳೆಗಳ ಬೀಜಗಳನ್ನು ಸಂರಕ್ಷಿಸುವ ಕೆಲಸವನ್ನು ಮಾದೇಗೌಡರು ಪ್ರಾರಂಭಿಸಿದರಾದರೂ ನೆರವಿನ ಕೊರತೆಯಿಂದಾಗಿ ಅದನ್ನು ಕೈಬಿಟ್ಟಿದ್ದಾರೆ. ಹಾಗಾಗಿ ಈ ವೈವಿಧ್ಯಮಯ ಬೀಜಗಳು ಈಗ ದುರ್ಲಭ. ಮಾರಮ್ಮನ ಪ್ರಕಾರ ಈಗ್ಗೆ ಕೆಲವು ವರ್ಷಗಳ ಹಿಂದೆ ರಾಗಿಯೇ ಅವರ ಮುಖ್ಯ ಆಹಾರವಾಗಿತ್ತು. ''ಈಗ ಸೊಸೈಟಿ ಅಕ್ಕಿ ಬಂದು ನಮ್ಮ ಜನ ರಾಗೀನೇ ಮರೀತಿದಾರೆ'', ಎನ್ನುತ್ತಾಳೆ ಮಾರಮ್ಮ.

೬೦ ವರ್ಷ ದಾಟಿರುವ ಮುತ್ತುಗದ ಗದ್ದೆ ಪೋಡಿನ ಹನುಮೇಗೌಡರನ್ನು ಮಾತನಾಡಿಸಿದೆವು. ಅವರ ಮನೆ ಅವರ ಜಮೀನಿನ ನಡುವೆ ಇತರ ಎಲ್ಲಾ ಸೋಲಿಗರ ಮನೆಯಂತೆಯೇ ಇತ್ತು. ಆದರೆ ಸುತ್ತ ಬೆಳೆದ ಬೆಳೆ ಮಾತ್ರ ಸೋಲಿಗರ ವ್ಯವಸಾಯ ಪದ್ಧತಿಗೆ ಸಂಬಂಧಿಸಿದ್ದಲ್ಲ. ಬದಲಿಗೆ ಬಿಳಿ ಹೂಗಳಿಂದ ತುಂಬಿ ತುಳುಕುತ್ತಿದ್ದ ಕಾಫಿ ತೋಟ ಇತ್ತು. ಮೊದಲು ಕುಮರಿ ಬೇಸಾಯ ಎಂದರೆ ಸ್ಥಳಾಂತರ ಬೇಸಾಯ ಮಾಡುತ್ತಿದ್ದ ಸೋಲಿಗರಿಗೆ ಈಗ ಅಲ್ಪ ಸ್ವಲ್ಪ ಭೂಮಿ ದೊರೆತಿದೆ. ರಾಗಿ, ಜೋಳ ಬೆಳೆದರೆ ಹಂದಿ ಆನೆಗಳ ಕಾಟ. ಕಾಫಿ ಬೆಳೆಗೆ ಈ ಕಾಟ ಇಲ್ಲ. ಜೊತೆಗೆ ಕಾಫಿ ಮಾರಾಟದಿಂದ ಸಾಕಷ್ಟು ಹಣ ಕೈಗೆ ಬರುತ್ತದೆ. ಹಾಗಾಗಿ ಹನುಮೇಗೌಡರು ಮತ್ತು ಅವರಂತೆ ಬಹಳಷ್ಟು ಸೋಲಿಗರು ಕಾಫಿ ಮತ್ತು ಮೆಣಸಿನ ಬೆಳೆಗೆ ಶರಣಾಗಿದ್ದಾರೆ. ಊಟಕ್ಕೆ ಬೇಕಾದ ರಾಗಿ, ಬೇಳೆ ಇತ್ಯಾದಿ ಕಾಳುಗಳನ್ನು ಅಂಗಡಿಯಿಂದ ಕೊಳ್ಳುವುದು ಈಗಿನ ಪರಿಪಾಠ. ಹನುಮೇಗೌಡರು ಹೇಳುತ್ತಾರೆ : ''ಏನು ಮಾಡಾದು ಮಾಸ್ವಾಮಿ, ನಮ್ಮ ಹೊಸ ರಾಗಿ ಹಬ್ಬಕ್ಕೂ ರಾಗಿ ಕೊಂಡು ಹಬ್ಬ ಮಾಡ್ತಿದ್ದೀವಿ.'' ಮತ್ತೆ ಹೇಳುತ್ತಾರೆ, ''ಹಿಂದೆಲ್ಲಾ ಸಾಕಷ್ಟು ಕುಂಬಳಕಾಯಿ, ಬಾಳೆ ಬೆಳೆಯುತ್ತಿದ್ದೆವು. ಆದರೆ ಈಗ ಹಂದಿಗಳ ಕಾಟದಿಂದ ಇದಾವುದನ್ನೂ ಮಾಡುತ್ತಿಲ್ಲ. ''ಹಿಂದೆ ಕೂಡ ಹಂದಿಗಳು ಇದ್ದವಲ್ಲವೇ'', ಎಂಬ ಪ್ರಶ್ನೆಗೆ ''ಹೌದು, ರಾತ್ರಿಯೆಲ್ಲಾ ಬೆಳೆ ಕಾಯ್ದುಕೊಳ್ಳುತ್ತಿದ್ದೆವು. ಆದರೆ ಈಗ ನಮ್ಮ ಜನ ಅಷ್ಟೊಂದು ಕಷ್ಟಪಡೋಕ್ಕೆ ತಯಾರಾಗಿಲ್ಲ'' ಹಿಂದೆಲ್ಲಾ ಏಪ್ರಿಲ್, ಮೇ ತಿಂಗಳುಗಳಲ್ಲಿ ಕಾಡೆಲ್ಲಾ ಬಗೆ ಬಗೆಯ ಹಣ್ಣುಗಳಿಂದ ತುಂಬಿ ತುಳುಕುತ್ತಿತ್ತಂತೆ. ಆಗ ಕೆಲವು ತಿಂಗಳು ಕೇವಲ ಈ ಹಣ್ಣುಗಳನ್ನು ತಿಂದೇ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದರಂತೆ. ಅಪರೂಪಕ್ಕೆ ಸ್ವಲ್ಪ ಕಾಡುಗೆಣಸುಗಳು, ಜೇನು ಸೇವಿಸುತ್ತಿದ್ದರು. ಹನುಮೇಗೌಡರು ಹೇಳುತ್ತಾರೆ : ''ಆಗ ನಮ್ಮ ಜನಕ್ಕೆ ಖಾಯಿಲೆ ಎಂದರೆ ಏನು ಅಂತ ಗೊತ್ತಿರ್ಲಿಲ್ಲ ಮಾಸ್ವಾಮಿ.'' ಆಗ ಅಲ್ಪ ಸ್ವಲ್ಪ ರೋಗ ಬಂದರೆ ಗಿಡಮೂಲಿಕೆ ಔಷಧಿ ಮಾಡಿ ವಾಸಿ ಮಾಡಿಕೊಳ್ಳುತ್ತಿದ್ದರಂತೆ. ಆದರೆ ಈಗ ಬರುತ್ತಿರುವ ಹೊಸ ರೋಗಗಳು ಗಿಡಮೂಲಿಕೆಗಳಿಗೆ ಬಗ್ಗುವುದಿಲ್ಲ. ಅದಕ್ಕೆ ಆಸ್ಪತ್ರೆ ಔಷಧೀನೇ ಬೇಕು ಅಂತಾರೆ ಹನುಮೇಗೌಡರು. ಅವರ ಪ್ರಕಾರ ಹಿಂದೆ ಕಾಡಿನ ಜೀವನದಲ್ಲಿ ಕಷ್ಟ ಇತ್ತು. ಆದರೆ ರೋಗಗಳು ಅಂದ್ರೆ ಏನು ಅಂತಾನೇ ಗೊತ್ತಿರಲಿಲ್ಲ, ಈಗ ಸೌಕರ್ಯಗಳು ಇವೆ ಜೊತೆಗೆ ರೋಗಗಳು ಬಹಳ ಇವೆ. ಅವರಿಗೆ ಬಹಳ ಹಿಂದೆ ಭಯ ಉಂಟುಮಾಡುತ್ತಿದ್ದ ರೋಗ ಎಂದರೆ ಸಿಡುಬು. ಇದನ್ನು 'ಗೋರ' ಎಂದು ಸೋಲಿಗರು ಕರೆಯುತ್ತಾರೆ. ಮಾರಮ್ಮನ ಪ್ರಕಾರ ಗೋರ ಬಂದರೆ ರೋಗ ಬಂದವನನ್ನು ಅಲ್ಲೇ ಬಿಟ್ಟು, ಅವನ ಬಳಿ ಒಂದಿಷ್ಟು ನೀರು-ಆಹಾರ ಇಟ್ಟು ಉಳಿದವರೆಲ್ಲರೂ ಪೋಡು ಖಾಲಿ ಮಾಡಿ ಹೋಗಿಬಿಡುತ್ತಿದ್ದರು. ''ನಾವು ರಾಗಿ ಬೀಸೊ ಕಲ್ಲನ್ನೂ ಮುಟ್ತಾ ಇರಲಿಲ್ಲ ಅಲ್ಲೇ ಬಿಡ್ತಾ ಇದ್ವಿ'' ಎಂದು ಮಾರಮ್ಮ ನೆನೆಸಿಕೊಳ್ಳುತ್ತಾಳೆ. ಆದರೆ ಬೇರೆ ರೋಗಗಳಿಗೆ ಅಷ್ಟು ಹೆದರುತ್ತಿರಲಿಲ್ಲ. ಗಿಡಮೂಲಿಕೆ, ದೇವಸ್ಥಾನದ ಮುಂದೆ ಮಲಗಿಸುವುದು... ಹೀಗೆ ಅವರ ಪದ್ಧತಿಯಂತೆ ವಾಸಿ ಮಾಡಿಕೊಳ್ಳುತ್ತಿದ್ದರು. ಸೋಲಿಗರೊಡನೆ ಬಹಳ ಕಾಲ ಕೆಲಸ ಮಾಡಿದ ಡಾ|| ಶ್ರೀಧರ್ ಅವರ ಪ್ರಕಾರ ಸೋಲಿಗರು ಸಾವನ್ನು ಅತ್ಯಂತ ಶಾಂತ ಮನಸ್ಸಿನಿಂದ ಸ್ವೀಕರಿಸುತ್ತಾರೆ. ಸಾವು ಬಂದಾಗ ತನಗೆ ಯಾವ ಸ್ಥಳದಲ್ಲಿ ದೇಹ ಬಿಡುವ ಇಚ್ಛೆ ಇದೆ ಎಂದು ಹೇಳಿ ದೇವಸ್ಥಾನದ ಮುಂದೆಯೋ ಅಥವಾ ಮನೆಯಲ್ಲೋ ಶಾಂತವಾಗಿ ಪ್ರಾಣಬಿಡುತ್ತಾರೆ. ಸಾಮಾನ್ಯವಾಗಿ ಆಸ್ಪತ್ರೆಯಲ್ಲಿ ಸಾಯಲು ಇವರು ಇಚ್ಛಿಸುವುದಿಲ್ಲ. ದೇಹತ್ಯಾಗ ಮಾಡುವಾಗ ಅವರ ಮುಖದ ಮೇಲಿನ ಶಾಂತಿ, ನಿರುದ್ವಿಗ್ನತೆ ನಾಡಜನಗಳಲ್ಲಿ ಕಾಣುವುದಿಲ್ಲ ಎನ್ನುತ್ತಾರೆ ಶ್ರೀಧರ್ ಅವರು.

ಕಾಫಿ, ಮೆಣಸುಗಳಿಂದ ಈಗ ಸಾಕಷ್ಟು ಹಣ ಗಳಿಸುತ್ತಿದ್ದಾರೆ ಸೋಲಿಗರು. ಜೊತೆಗೆ, ಉದ್ಯೋಗ ಖಾತ್ರಿ ಯೋಜನೆಯಡಿ ಸಾಕಷ್ಟು ಕೂಲಿಯೂ ಸಿಗುತ್ತಿದೆ. ದಿನಗೂಲಿಯಂತೂ ಒಂದೆರಡು ವರ್ಷಗಳಲ್ಲಿ ನಾಲ್ಕು ಪಟ್ಟು ಹೆಚ್ಚಾಗಿದೆ. ಈ ಪ್ರಗತಿಯ ಜೊತೆಜೊತೆಗೇ

ಸೋಲಿಗರು ಸಾರಾಯಿ-ಹೆಂಡದ ದಾಸರಾಗಿದ್ದಾರೆ. ಹಿಂದೆ ಆರೋಗ್ಯಕರವಾದ ಸಮತೋಲನ ಆಹಾರದ ಜೊತೆಗೆ ಪ್ರಾಣಿಗಳನ್ನು ಹಿಡಿದು ಮಾಂಸ ತಿನ್ನುತ್ತಿದ್ದರು. ಹಾಗಾಗಿ ಪ್ರೊಟೀನ್ ಪೌಷ್ಟಿಕಾಂಶವೂ ಸಹ ಆಹಾರದಲ್ಲಿ ಇರುತ್ತಿತ್ತು. ಈಗ ಸೋಲಿಗರು ತಮ್ಮ ಪಾರಂಪರಿಕ ಬೆಳೆಗಳನ್ನು ಕಳೆದುಕೊಂಡದ್ದೂ ಅಲ್ಲದೆ ಬಿಗಿಗೊಂಡಿರುವ ಅರಣ್ಯ ಕಾಯ್ದೆಯಿಂದಾಗಿ ಬೇಟೆಯಾಡುವುದು ತಪ್ಪಿಹೋಗಿದೆ. ಸೋಲಿಗರೊಡನೆ ಕಳೆದೆರಡು ದಶಕಗಳಿಂದಲೂ ಕೆಲಸ ಮಾಡುತ್ತಿರುವ ಡಾ|| ಶ್ರೀಧರ್ ಅವರ ಪ್ರಕಾರ ಸೋಲಿಗರಲ್ಲಿ ಅನೀಮಿಯ ರೋಗ ಹೆಚ್ಚು. ಇತ್ತೀಚಿನ ದಿನಗಳಲ್ಲಂತೂ ಬದಲಾದ ಅವರ ಆಹಾರ ಪದ್ಧತಿಯಿಂದಾಗಿ ಅನೀಮಿಯಾದ ಪ್ರಮಾಣ ಮತ್ತಷ್ಟು ಹೆಚ್ಚಾಗಿದೆ. ಜೊತೆಗೆ ಸೋಲಿಗರ ಆರೋಗ್ಯವೂ ಕ್ಷೀಣಿಸುತ್ತಿದೆ. ಹಿಂದೆಲ್ಲಾ ಕಾಡಿನಿಂದ ನೂರಾರು ಬಗೆಯ ಸೊಪ್ಪುಗಳನ್ನು ಆಯ್ದು ತಂದು ಸಾರು ಮಾಡಿ ಸೇವಿಸುತ್ತಿದ್ದರು. ಆದರೆ ಈಗ ಕಾಡಿನಲ್ಲಿ ಎಲ್ಲೆಲ್ಲೂ ಲಾಂಟಾನಾ ಪೊದೆಗಳು ಬೆಳೆದು ಸೊಪ್ಪುಗಳೇ ಸಿಕ್ಕುತ್ತಿಲ್ಲ ಎನ್ನುತ್ತಾಳೆ ಸೋಲಿಗರ ಕೇತಮ್ಮ. ಕೇತಮ್ಮನಿಗೆ ಕಾಡಿನಲ್ಲಿ ಸಿಗುವ ಸುಮಾರು ೩೦-೪೦ ಬಗೆಯ ವಿವಿಧ ಸೊಪ್ಪುಗಳನ್ನು ತರಕಾರಿಯಂತೆ ಬಳಸುವ ಕಲೆ ಗೊತ್ತು. ಆದರೆ ಈಗಿನ ತಲೆಮಾರಿನ ಸೋಲಿಗ ಯುವಕರು ಈ ಪಾರಂಪರಿಕ ಜ್ಞಾನದಿಂದ ವಂಚಿತರಾಗಿದ್ದಾರೆ. ''ನಿಮ್ಮ ಮಕ್ಕಳಿಗೆ ಈ ಕಾಡಿನ ಜ್ಞಾನವನ್ನು ಏಕೆ ಕೊಡುತ್ತಿಲ್ಲ'' ಎಂದು ಕೇಳಿದರೆ, ''ಏನ್ಮಾಡದು ಸ್ವಾಮಿ, ಮೊದಲು ನಾವು ಕಾಡಿನಲ್ಲಿ ಎಲ್ಲೆಂದರಲ್ಲಿ ಓಡಾಡ್ತ ಇದ್ವಿ. ಈಗ ಇಲಾಖೆಯವರ ಭಯ. ಜೊತೆಗೆ ಕಾಡಿನಲ್ಲಿ ಎಲ್ಲೆಲ್ಲೂ ಲಾಂಟಾನಾ ಪೊದೆಗಳು ಬೆಳೆದು ಸೊಪ್ಪು ಸಿಕ್ತಾ ಇಲ್ಲ'' ಎನ್ನುತ್ತಾಳೆ ಕೇತಮ್ಮ.

ಈಗಿನ ತಲೆಮಾರಿನ ಸೋಲಿಗ ಮಕ್ಕಳಿಗೆ ಕಾಡಿನಲ್ಲಿ ಸಿಗುವ ಬಗೆಬಗೆಯ ಸೊಪ್ಪುಗಳ ಜ್ಞಾನ ಇಲ್ಲ. ಒಮ್ಮೆ ತಾಯಿ-ಮಗಳು ಕಾಡಿನಲ್ಲಿ ಸೊಪ್ಪು ಕೀಳುತ್ತಿದ್ದರು. ನಾನು ವಾಹನ ನಿಲ್ಲಿಸಿ, ''ಏನು ಸೊಪ್ಪು ಕೀಳುತ್ತಿದ್ದೀರಿ'' ಎಂದು ಕೇಳಿದೆ. ೧೫-೧೬ ವರ್ಷದ ಮಗಳಿಗೆ ತಾನು ಕೀಳುತ್ತಿದ್ದ ಸೊಪ್ಪಿನ ಹೆಸರು ಕೂಡ ತಿಳಿದಿರಲಿಲ್ಲ. ಅಮ್ಮ ಕೀಳುತ್ತಿದ್ದುದನ್ನು ನೋಡಿ ತಾನೂ ಸೊಪ್ಪು ಕೀಳುತ್ತಿದ್ದಳು. ಮತ್ತೆ ಆ ಹುಡುಗಿಯನ್ನು ಕೇಳಿದೆ, ''ನಿನಗೆ ಕರವಾದಿ ಸೊಪ್ಪು ಗೊತ್ತಾ, ತಿಂದಿದ್ದೀಯಾ ?'' ಅವಳು ಇಲ್ಲ ಎಂದಳು. ನಾನು ಹೇಳಿದೆ, ''ನಿಮ್ಮ ಗೊರುಕನ ಹಾಡಿನಲ್ಲಿ ಕರವಾದಿ ಸೊಪ್ಪು ತಿನ್ನಬೇಕು ಎನ್ನುತ್ತಾರಲ್ಲ, ಅದರಲ್ಲಿ ಬಹಳ ಶಕ್ತಿ ಇದೆ ಅಂತಾರಲ್ಲ, ಈ ಮಾತುಗಳು ನಿನ್ನ ಕಿವಿಗೆ ಬಿದ್ದೇ ಇಲ್ಲವಾ'' ಎಂದೆ. ಆ ಹುಡುಗಿ ಇಲ್ಲ ಎಂದಳು. ಅಮ್ಮ ನಗುತ್ತ, ''ಈಗಿನ ಕಾಲದ ಮಕ್ಕಳಿಗೆ ಅದೆಲ್ಲಾ ಏನು ಗೊತ್ತು ಸ್ವಾಮಿ'' ಎಂದಳು. ''ನೀನೇಕೆ ಹೇಳಿಕೊಡುತ್ತಿಲ್ಲ'' ಎಂದು ಕೇಳಿದೆ. ''ಈಗ ನಾವ್ಯಾರು ಅದನ್ನು ತಿನ್ನುತ್ತಿಲ್ಲ, ಸ್ವಾಮಿ'' ಎಂದುಬಿಟ್ಟಳು. ಕರವಾದಿ ಎಂಬುದು ಒಂದು ಜಾತಿಯ ಮರ. ಅಂತಹ ಮರಗಳು ಬೇಕಾದಷ್ಟಿವೆ. ಸೊಪ್ಪು ಕೂಡ ಸಾಕಷ್ಟು ಸಿಗುತ್ತದೆ. ಅದರಲ್ಲಿ ಔಷಧೀಯ ಗುಣಗಳು ಇವೆ. ಹಾಗಾಗಿ ಹಿಂದೆ ಸೋಲಿಗರು ಈ ಸೊಪ್ಪನ್ನು ತಿನ್ನುತ್ತಿದ್ದರು. ಆದರೆ ಈಗ ನಿಷ್ಕಾರಣವಾಗಿ ಈ ಪಾರಂಪರಿಕ ಜ್ಞಾನವನ್ನು ಕಳೆದುಕೊಳ್ಳುತ್ತಿದ್ದಾರೆ.

ಸೋಲಿಗರ ಹನುಮೇಗೌಡರ ಪ್ರಕಾರ ಲಾಂಟಾನಾ ಪೊದೆಯಿಂದಾಗಿ ಇಂದು ಕಾಡಿನಲ್ಲಿ ಮರಗಳ ಸಸಿಗಳು ತಲೆ ಎತ್ತಲು ಸಾಧ್ಯವಾಗುತ್ತಲೇ ಇಲ್ಲ. ಎತ್ತರವಾಗಿ ಬೆಳೆದು ನಿಂತ ಮರಗಳು ಕಾಡಿನಲ್ಲಿವೆಯೇ ಹೊರತು ಈಗ ಹೊಸದಾಗಿ ಹುಟ್ಟಿ ಬೆಳೆಯುತ್ತಿರುವ ಒಳ್ಳೆ ಜಾತಿ ಮರಗಳ ಸಸಿಗಳು ಇಲ್ಲವೇ ಇಲ್ಲ. ಸೋಲಿಗರ ಬೊಮ್ಮೇಗೌಡ ಹೇಳುತ್ತಾನೆ, ''ಮನುಷ್ಯರಲ್ಲಿ ಹಸುಗೂಸು, ಎಳೆ ಮಕ್ಕಳು, ಬೆಳೆದ ಮಕ್ಕಳು, ಮಧ್ಯವಯಸ್ಕರು, ಮುದುಕರು ಹೀಗೆ ಬೇರೆ ಬೇರೆ ವಯಸ್ಸಿನವರನ್ನು ನಾವು ಕಾಣಬಹುದು. ಹೀಗಿದ್ರೇನೆ ಆರೋಗ್ಯ; ಆದರೆ ನಮ್ಮ ಕಾಡಿನಲ್ಲಿ ಈಗಿರೋವೆಲ್ಲ ಹಳೆಯ ಮರಗಳೇ. ಹೊಸದಾಗಿ ಹುಟ್ಟಿ ಬೆಳೀತಾ ಇರೋ ಮರಗಳು ಒಂದೂ ಕಾಣ್ತಾ ಇಲ್ಲ. ಇದಕ್ಕೆಲ್ಲಾ ಈ ಲಾಂಟಾನಾ ಪೊದೆಗಳೇ ಕಾರಣ. ಈ ಲಾಂಟಾನಾ ಪೊದೆಗಳಿಂದಾಗಿ ಮರದ ಸಸಿಗಳೂ ತಲೇನೇ ಎತ್ತಾ ಇಲ್ಲ. ಜೊತೆಗೆ, ಕಾಡಿನಲ್ಲಿ ನೆಲ್ಲಿಕಾಯಿ ಸಿಗೋದೂ ಕಡಿಮೆಯಾಗಿದೆ'' ಎನ್ನುತ್ತಾನೆ ಬೊಮ್ಮೇಗೌಡ. ಈ ಲಾಂಟಾನಾ ಸಮಸ್ಯೆಗೆ ಪರಿಹಾರ ಏನು ಎಂದು ಕೇಳಿದರೆ ಬೊಮ್ಮೇಗೌಡರ ಪ್ರಕಾರ ಇದಕ್ಕೆ ಪರಿಹಾರವೇ ಇಲ್ಲ. ಅಸಾಧ್ಯವಾಗಿ ಬೆಳೆದು ನಿಂತಿರುವ ಈ ಲಾಂಟಾನಾಗಳ ನಿರ್ಮೂಲನೆ ಸಾಧ್ಯವೇ ಇಲ್ಲ. ಇದರ ಮತ್ತೊಂದು ದುಷ್ಪರಿಣಾಮ ವೆಂದರೆ ಕಾಡಿಗೆ ಬೆಂಕಿ ಬಿದ್ದರೆ ಎತ್ತರಕ್ಕೆ ಹಬ್ಬಿ ನಿಂತಿರುವ ಲಾಂಟಾನಾದಿಂದಾಗಿ ಬೆಂಕಿ ಎತ್ತರವಾದ ಮರಗಳ ಎಲೆ ಕೊಂಬೆಗಳಿಗೂ ರಾಚಿಕೊಳ್ಳುತ್ತದೆ. ಈ ಬೆಂಕಿ ಕಾಡಿನ ಮರಗಳನ್ನು ಸಂಪೂರ್ಣವಾಗಿ ಧ್ವಂಸಮಾಡಿಬಿಡುತ್ತದೆ. ಲಾಂಟಾನಾ ಇಲ್ಲದೇ ಇದ್ದಾಗ ಕಾಡಿಗೆ ಬೆಂಕಿ ಬಿದ್ದರೆ ನೆಲದ ಮೇಲೆ ಬಿದ್ದಿದ್ದ ತರಗೆಲೆಗಳು ಮಾತ್ರ ಸುಟ್ಟು ಹೋಗುತ್ತಿದ್ದವು. ಬೆಳೆದು ನಿಂತ ಮರಗಳಿಗೆ ಇದರಿಂದ ಏನೂ ಹಾನಿಯಾಗುತ್ತಿರಲಿಲ್ಲ. ಜೊತೆಗೆ ಹೊಸಹುಲ್ಲು ಹುಟ್ಟಿ ಪ್ರಾಣಿಗಳಿಗೆ ಒಳ್ಳೆ ಮೇವು ಸಿಗುತ್ತಿತ್ತು. ರೋಗರುಜಿನಗಳು ಕಡಿಮೆಯಾಗುತ್ತಿದ್ದವು. ಈಗ ಕಾಡಿಗೆಲ್ಲ ರೋಗ ಅಂಟಿದೆ. ಅಲ್ಲದೆ ಈಗ ಲಾಂಟಾನಾ ಬೆಂಕಿಯಿಂದಾಗಿ ನೂರಾರು ವರ್ಷ ಬೆಳೆದು ನಿಂತ ಮರಗಳೂ ನಾಶವಾಗುತ್ತಿವೆ. ಹೀಗೆ ಲಾಂಟಾನಾ ಗಿಡಗಳಿಂದಾಗಿ ತಮ್ಮ ಕಾಡು ಸರ್ವನಾಶವಾದೀತೆಂಬ ಭಯ ಸೋಲಿಗರನ್ನು ಆವರಿಸಿದೆ.

ನಾವು ಬೆಟ್ಟಕ್ಕೆ ಹೋದ ಸಮಯದಲ್ಲಿ ದೊಡ್ಡ ಜಾತ್ರೆಗೆ ಸಿದ್ಧತೆಗಳು ನಡೆಯುತ್ತಿದ್ದವು. ಈ ಬಾರಿ ಬಿಳಿಗಿರಿರಂಗಸ್ವಾಮಿ ತೇರು ಅಲಂಕಾರ ಮಾಡಿಕೊಂಡು ನಿಂತಲ್ಲೇ ನಿಂತಿರುತ್ತದೆ. ಏಕೆಂದರೆ ಅದರ ಚಕ್ರ ಸರಿಯಾಗಿಲ್ಲ. ಹಾಗಾಗಿ ತೇರು ಎಳೆಯುವ ಪ್ರಮೇಯವೇ ಇಲ್ಲ. ಆದರೂ ಅದಕ್ಕೆ ಸಕಲ ಅಲಂಕಾರಗಳನ್ನು ಮಾಡುತ್ತಿದ್ದರು. ಈ ಕೆಲಸವನ್ನು ಸೋಲಿಗರು ತಲೆತಲಾಂತರಗಳಿಂದ ಮಾಡಿಕೊಂಡು ಬಂದಿದ್ದಾರೆ. ತೇರಿಗೆ ಬೇಕಾದ ಬಿದಿರಿನ ಬೊಂಬು, ಬೆಂಡೆ ಮರದ ಹಲಗೆಗಳು ಇತ್ಯಾದಿ ಎಲ್ಲವನ್ನೂ ಸೋಲಿಗರು ಕಾಡಿನಿಂದ ತಂದು ರಥವನ್ನು ಕಟ್ಟುತ್ತಾರೆ. ಸೋಲಿಗರಿಗೆ ಮರಗೆಲಸ ಬರುವುದಿಲ್ಲ. ಆದ್ದರಿಂದ ಬೆಟ್ಟದ ತಪ್ಪಲಿನ ಊರಾದ ಗುಂಬಳ್ಳಿ ಅಥವಾ ಅಂಬಳೆಯಿಂದ ಪಾರಂಪರಿಕವಾಗಿ ಕಾಯಕ ಮಾಡಿಕೊಂಡು ಬಂದಿರುವ ಬಡಗಿಗಳು ಬರುತ್ತಾರೆ. ಅವರು ಬೆಂಡೆ ಮರವನ್ನು ಕೊಯ್ದು ತೇರಿಗೆ ಬೇಕಾದ ಹಲಗೆಗಳನ್ನು ಮಾಡುತ್ತಾರೆ. ಈ ಸಂದರ್ಭದಲ್ಲಿ ಪುರಾಣಿ ಪೋಡಿನ ಸೋಲಿಗರ



ಮುಖಂಡ ರಂಗೇಗೌಡನನ್ನು ಮಾತನಾಡಿಸಿದೆವು. ಅವನ ಪ್ರಕಾರ ಇತ್ತೀಚೆಗೆ ಕಾಡಿನಲ್ಲಿ ಬೆಂಡೆ ಮರಗಳೇ ಕಡಿಮೆಯಾಗಿವೆ. ಈ ಬೆಂಡೆ ಮರಗಳು ಹಿಂದೆ ಕಾಡಿನಲ್ಲಿ ಯಥೇಚ್ಛವಾಗಿ ಸಿಗುತ್ತಿದ್ದವು. ಆನೆಗಳಿಗೆ ಇದರ ಸೊಪ್ಪು ಬಹಳ ಪ್ರಿಯ. ದೀಪಾವಳಿಯ ಸಮಯದಲ್ಲಿ ಕಾಡೆಲ್ಲಾ ಬೆಂಡೆ ಮರದ ಹೂವುಗಳಿಂದ ತುಂಬಿಹೋಗಿ ಕಾಡಿನ ಜೇನುತುಪ್ಪವೆಲ್ಲಾ ಈ ಹೂವಿನ ಮಕರಂದದಿಂದಾಗುತ್ತಿತ್ತು. ಹಾಗಾಗಿ ದೀಪಾವಳಿಯ ಸಮಯದಲ್ಲಿ ತೆಗೆದ ಜೇನುತುಪ್ಪ 'ಬೆಂಡೆಹೂವಿನ ತುಪ್ಪ' ಎಂದು ಪ್ರಸಿದ್ಧಿ. ಈ ತುಪ್ಪದ ರುಚಿಯೇ ರುಚಿ. ಆದರೆ ಈಗ ರಂಗೇಗೌಡನ ಪ್ರಕಾರ ಲಾಂಟಾನಾ ಪೊದೆಗಳಿಂದಾಗಿ ಬೆಂಡೆ ಮರಗಳೇ ಕಾಣೆಯಾಗಿವೆ. ಕಾಡನ್ನೆಲ್ಲಾ ಹುಡುಕಿದರೂ ದೊಡ್ಡ ಗಾತ್ರದ ಬೆಂಡೆ ಮರಗಳೇ ಕಾಣುವುದಿಲ್ಲ. ಬೆಂಡೆ ನಾರಿನಿಂದ ಮೈ ಉಜ್ಜಿ ತಲೆಗೆ ಸ್ನಾನ ಮಾಡಿದರೆ ಎಂತಹ ಕೊಳೆಯೂ ಹೋಗಿಬಿಡುತ್ತದೆ. ಈ ನಾರಿಗೆ ಸೋಪಿನ ಗುಣವಿದೆ. ಆದರೆ ಇಂದು ಈ ಮರಗಳೇ ದುರ್ಲಭ. ಹಾಗಾಗಿ ಬೆಂಡೆ ನಾರಿನ ಸ್ನಾನವೂ ಮರೆತುಹೋಗಿದೆ. ಹೀಗೆ ಲಾಂಟಾನಾ ಎಂಬ ರಾಕ್ಷಸ ಸೋಲಿಗರ ಜೀವನದ ಮೇಲೆ, ಸೋಲಿಗರ ಆರೋಗ್ಯದ ಮೇಲೆ, ಕಾಡಿನ ಆರೋಗ್ಯದ ಮೇಲೆ, ಅವರ ಸಂಸ್ಕೃತಿಯ ಮೇಲೆ ನೇತ್ಯಾತ್ಮಕ ಪ್ರಭಾವ ಬೀರುತ್ತಿದೆ.

ಮತ್ತೆ ರಂಗೇಗೌಡನನ್ನು ಕೇಳಿದೆವು, ''ನೀವು ಹತ್ತಿಪ್ಪತ್ತು ಸೋಲಿಗರು ವಾರಗಟ್ಟಲೆ ಈ ತೇರಿಗಾಗಿ ದುಡಿಯುತ್ತೀರಲ್ಲಾ, ನಿಮಗೆ ಕೂಲಿ ಸಿಗುತ್ತದೆಯೇ ?'' ರಂಗೇಗೌಡ ಅಸಮಾಧಾನದಿಂದ ಹೇಳಿದ, ''ಎಲ್ಲಿ ಸ್ವಾಮಿ ಕೂಲಿ, ನಮಗೆಲ್ಲಾ ತಲೆಗೆ ಇಷ್ಟು ಅಂತ ಅಕ್ಕಿ-ಕಾಳು ಕೊಡುತ್ತಾರೆ. ನಾವೇ ಬೇಯಿಸಿ ತಿಂತೀವಿ.'' ''ಹಾಗಾದರೆ ಈ ಕೆಲಸ ಏಕೆ ಮಾಡ್ತೀರಿ'' ಎಂದು ಕೇಳಿದೆವು. ಅದಕ್ಕೆ ಹೇಳಿದ : ''ತಲೆತಲಾಂತರಗಳಿಂದ ಈ ಕೆಲಸ ಮಾಡ್ತಾ ಇದೀವಿ, ಪುರಾಣಿ ಪೋಡಿನ ಸೋಲಿಗರಿಂದ ತೇರು ನಿಂತೋಯ್ತು ಅಂತ ಕೆಟ್ಟ ಹೆಸರು ಬರೋದು ಬೇಡ ಅಂತ ಮಾಡ್ತಾ ಇದೀವಿ, ಆದರೆ ನೋಡಿ, ಕೆಳಗಾಡಿನಿಂದ ಬರೋ ಮರಗೆಲಸದವರಿಗೆ ಕೂಲಿ ಕೊಡ್ತಾರೆ, ದಿನಕ್ಕೆ ಇನ್ನೂರು ಮುನ್ನೂರು ಕೊಡ್ತಾರೆ, ಏನೋ ನಮ್ಮವರು ಹಿಂದಿನಿಂದ ಮಾಡ್ಕೊಂಡು ಬಂದಿದ್ದಾರೆ. ಆದ್ದರಿಂದ ಮಾಡ್ತಾ ಇದೀವಿ.'' ಬಿಳಿಗಿರಿರಂಗಸ್ವಾಮಿ ಸೋಲಿಗರ ಹೆಣ್ಣನ್ನು ಮದುವೆಯಾಗಿದ್ದಾನೆಂದು,

ಆದ್ದರಿಂದ ಬಿಳಿಗಿರಿರಂಗ ತಮ್ಮ ಭಾವನೆಂದು ಸೋಲಿಗರು ಹೆಮ್ಮೆಯಿಂದ ಹೇಳಿಕೊಳ್ಳುವುದು ಉಂಟು. ಆದರೆ ರಂಗೇಗೌಡನ ಮಾತಿನಲ್ಲಿ ಅಂತಹ ಯಾವ ಭಾವುಕತೆಯೂ ಕಂಡುಬರಲಿಲ್ಲ. ದೇವಸ್ಥಾನದವರು ಅನುಸರಿಸುವ ತಾರತಮ್ಯ ಸೋಲಿಗರಿಗೆ ಒಂದು - ಕೆಳಗಾಡಿನ ಮರಗೆಲಸದವರಿಗೆ ಒಂದು. ಇದರಿಂದ ರಂಗೇಗೌಡನಿಗೆ ಅಸಮಾಧಾನ ವಾಗಿತ್ತು. ಈ ಅಸಮಾಧಾನದ ನಡುವೆಯೂ ಬಿಳಿಗಿರಿರಂಗ ತಮ್ಮ 'ಭಾವ' ಎಂಬ ವಿಷಯ ಗೌಣವಾಗಿ ಕಂಡಿರಬೇಕು. ಏಕೆಂದರೆ ಸೋಲಿಗರೂ ಈಗ ಸಂಪಾದಿಸುವ ಶಕ್ತಿಯನ್ನು, ಹಣದ ಶಕ್ತಿಯನ್ನು ಅರಿಯುತ್ತಿದ್ದಾರೆ. ಎಲ್ಲವನ್ನೂ ಪ್ರಶ್ನಿಸುವಷ್ಟು ತಿಳುವಳಿಕೆ ಬಂದಿದೆ.

ಕಾಡಿನ ನಟ್ಟನಡುವೆ ಇರುವ ಗೊಂಬೆಗಲ್ಲು ಎಂಬ ಪೋಡಿಗೆ ಹೋಗಿ ಅಲ್ಲಿಯ ಶಿಕಾರಿ ಜಡೆಯ ಹಾಗೂ ಅವರ ತಮ್ಮಂದಿರನ್ನು ಮಾತನಾಡಿಸಿದೆವು. ಈ ಪೋಡಿಗೆ ವಿದ್ಯುಚ್ಛಕ್ತಿ, ನೀರಿನ ಸೌಲಭ್ಯ ಇವಾವುವೂ ಇಲ್ಲ. ಹತ್ತಿರದ ನೀರಿನ ಸೆಲೆಗಳಿಂದ ಇವರು ನೀರು ತರುತ್ತಾರೆ. ಇಲ್ಲಿಯೂ ಸೋಲಿಗರು ಕಾಫಿ, ಮೆಣಸು ಬೆಳೆಯುತ್ತಿದ್ದರು. ಜೊತೆಗೆ ರಾಗಿಯನ್ನೂ ಸಹ ಬೆಳೆದಿದ್ದು ಕಂಡುಬಂತು. ಈ ಪ್ರದೇಶಕ್ಕೆ ರಸ್ತೆ ಇಲ್ಲ, ಬಸ್ ಸೌಕರ್ಯವಿಲ್ಲ ಕಾಲುನಡಿಗೆಯಲ್ಲೇ ಬರಬೇಕು. ಆದಕಾರಣ ಇಲ್ಲಿಯ ಸೋಲಿಗರು ಹೆಚ್ಚು ಬದಲಾದಂತೆ ಕಂಡುಬರಲಿಲ್ಲ. ಆದರೆ ಕೆಲವು ಆಗಂತುಕ ದೇವರುಗಳು ಸೋಲಿಗರ ನಂಬಿಕೆ ವಲಯ ದೊಳಗೆ ತೂರಿಕೊಂಡಿದ್ದಾರೆ. ಉದಾಹರಣೆಗೆ, ಶಿಕಾರಿ ಸಿದ್ದೇಗೌಡ ಪಾರಂಪರಿಕವಾಗಿ ತಮ್ಮಡಿಯಲ್ಲ. 'ತಮ್ಮಡಿ' ಎಂದರೆ ಅಧಿಕೃತ ಪೂಜಾರಿ ಎಂದು ಅರ್ಥ. ಆದರೆ ತಾನು ಶನಿಮಹಾತ್ಮನ ತಮ್ಮಡಿ ಎಂದು ತನಗೆ ತಾನೇ ಘೋಷಿಸಿಕೊಂಡು ತಾನು ವಾರ ವಾರ ಸ್ನಾನ ಮಾಡಿ ಶನಿಮಹಾತ್ಮನ ಪೂಜೆ ಮಾಡುವುದಾಗಿ ಹೇಳಿದ. ಉದ್ದ ಕೂದಲನ್ನೂ ಬಿಟ್ಟಿದ್ದ. ಸೋಲಿಗರು ಮುಖ್ಯವಾಗಿ ಕ್ಯಾತೇದೇವರು, ಜಡೇಸ್ವಾಮಿ, ದೊಡ್ಡ ಸಂಪಿಗೆ ದೇವರು ಹೀಗೆ ಕೆಲವು ದೇವರುಗಳನ್ನು ಪೂಜೆ ಮಾಡುತ್ತಾರೆ. ಈ ಶನಿಮಹಾತ್ಮನ ತಮ್ಮಡಿಯನ್ನು, ''ನಿನಗೆ ಬಹಳ ಇಷ್ಟವಾದ ದೇವರು ಯಾರು'' ಎಂದು ಕೇಳಿದೆವು. ಆಶ್ಚರ್ಯವೆಂದರೆ ಅವನು ಸೋಲಿಗ ದೇವರ ಒಂದು ಹೆಸರನ್ನೂ ಹೇಳಲಿಲ್ಲ. ತಾನು ಶನಿಮಹಾತ್ಮನ ಜೊತೆಗೆ ಸಿದ್ದಪ್ಪಾಜಿಯನ್ನು ಕೂಡ ಪೂಜೆ ಮಾಡುವುದಾಗಿ ಹೇಳಿಕೊಂಡ. ಈ ಹೊಸ ದೇವರುಗಳ ಬಗ್ಗೆ ಇತರ ಸೋಲಿಗರಾರೂ ಆಕ್ಷೇಪಣೆ ಮಾಡುವುದೇ ಇಲ್ಲ. ಹಾಗಾಗಿ ಈ ದೇವರುಗಳಿಗೆ ನಿಧಾನವಾಗಿ ಸೋಲಿಗರ ಗುಡಿಗಳಲ್ಲಿ ಸ್ಥಾನ ದೊರೆಯುತ್ತಿದೆ.

ವ್ಯವಸಾಯ, ಬೆಳೆಗಳ ವೈವಿಧ್ಯತೆಯಲ್ಲಿ ಬದಲಾವಣೆ, ಇಡೀ ಕಾಡಿನ ಜೀವ ವೈವಿಧ್ಯತೆಯಲ್ಲಿ ಆಗುತ್ತಿರುವ ಬದಲಾವಣೆಗಳು, ಜೊತೆಗೆ ದಿನೇದಿನೇ ಬಿಗಿಗೊಳ್ಳುತ್ತಿರುವ ಅರಣ್ಯ ಕಾಯ್ದೆಗಳು ಈ ಎಲ್ಲವೂ ಸೋಲಿಗರ ಆಹಾರ ಪದ್ಧತಿ ಹಾಗೂ ಸಂಸ್ಕೃತಿಯ ಮೇಲೆ ದೊಡ್ಡ ಪ್ರಹಾರವನ್ನೇ ಮಾಡಿದೆ. ರಾಗಿಯ ಸ್ಥಾನವನ್ನು ಕ್ರಮೇಣ ಅಕ್ಕಿ ಆಕ್ರಮಿಸಿ ಕೊಳ್ಳುತ್ತಿದೆ. ಕೇತೆದೇವರು - ಜಡೆಸ್ವಾಮಿಯ ಸ್ಥಾನವನ್ನು ಶನಿಮಹಾತ್ಮ ಹಾಗೂ ಸಿದ್ದಪ್ಪಾಜಿಗಳು ಆಕ್ರಮಿಸುತ್ತಿದ್ದಾರೆ. ಈ ಪಲ್ಲಟಗಳು ಅಭಿವೃದ್ಧಿಯ ಸಂಕೇತಗಳಲ್ಲ, ಇವು ಅವನತಿಯ ಸಂಕೇತಗಳು ಎಂದು ಅರಿವು ಮೂಡಿಸುವ ಯಾವ ಕಾರ್ಯಕ್ರಮವೂ ಬಿಳಿಗಿರಿರಂಗನಬೆಟ್ಟದಲ್ಲಿ ಚಾಲ್ತಿಯಲ್ಲಿಲ್ಲ. ಬದಲು, ಅರಣ್ಯ ಕಾಯ್ದೆಗಳನ್ನೆಲ್ಲಾ ಧಿಕ್ಕರಿಸಿ ತಲೆ ಎತ್ತುತ್ತಿರುವ ರೆಸಾರ್ಟುಗಳು ವಿಜೃಂಭಿಸುತ್ತಿವೆ.



ಅಭಿವೃದ್ಧಿ ಎಂಬುದು ಕೇವಲ ಆರ್ಥಿಕ ಪ್ರಗತಿ ಮಾತ್ರವಲ್ಲ ಎಂಬುದನ್ನು ಇಂದಿನ ಸೋಲಿಗರ ಜೀವನ ಕ್ರಮವನ್ನು, ಅವರ ಆರೋಗ್ಯವನ್ನು ಗಮನಿಸಿದರೆ ತಿಳಿಯುತ್ತದೆ. ಕಾಫಿ, ಮೆಣಸುಗಳು ಅವರಿಗೆ ಹೇರಳವಾದ ಹಣವನ್ನು ತಂದುಕೊಟ್ಟಿರುವುದು ನಿಜ. ಆದರೆ ಈ ಹಣದ ನಿರ್ವಹಣೆಗೆ ಬೇಕಾದ ಶಿಸ್ತು ಸಂಯಮಗಳು ಸೋಲಿಗ ಸಂಸ್ಕೃತಿಗೆ ಆಗಂತುಕ ವಿಷಯಗಳು. ಹಣ ನಿರ್ವಹಣೆ ತಿಳಿಯದ ಈ ಮುಗ್ಧ ಗಿರಿಜನರು ಹೆಚ್ಚಾದ ಹಣದಿಂದ ಏನು ಮಾಡಬೇಕೆಂದು ತಿಳಿಯದೆ ಸಾರಾಯಿ, ಭಂಗಿ ಮುಂತಾದ ವ್ಯಸನಗಳ ದಾಸರಾಗಿ ತಮ್ಮ ಆರೋಗ್ಯವನ್ನು ಮತ್ತಷ್ಟು ಕೆಡಿಸಿಕೊಳ್ಳುತ್ತಿದ್ದಾರೆ. ಮೊಬೈಲ್ ಫೋನ್, ಎಫ್‌ಎಂ ರೇಡಿಯೊ, ಟಿ.ವಿ.ಗಳು ಗಿರಿಜನರ ಜೀವನವನ್ನು ಪ್ರವೇಶಿಸಿವೆ. ಜೊತೆಗೆ ದೇವಸ್ಥಾನದ ಮುಂದೆ ಭಿಕ್ಷೆಗಾಗಿ ಕುಳಿತುಕೊಳ್ಳುವ ಸೋಲಿಗರ ಸಂಖ್ಯೆಯೂ ದಿನೇ ದಿನೇ ಹೆಚ್ಚಾಗುತ್ತಿದೆ. ಹಿಂದೆ ಸೋಲಿಗರಲ್ಲಿ ಭಿಕ್ಷೆ ಬೇಡುವ ಪದ್ಧತಿ ಇರಲಿಲ್ಲ. ತಮ್ಮ ನಡುವೆ ಇರುವ ದುರ್ಬಲರನ್ನು ಸೋಲಿಗ ಸಮುದಾಯ ಹಂಚಿ ತಿನ್ನುವ ಪದ್ಧತಿಯಿಂದಾಗಿ ರಕ್ಷಿಸುತ್ತಿತ್ತು. ಆದರೆ ಈಗಿನ ಆಸ್ಪತ್ರೆ, ಶಾಲೆ ಬ್ಯಾಂಕುಗಳ ನಡುವೆ, ಕಾಫಿ-ಮೆಣಸು ಬೆಳೆಗಳ ಸಂವೃದ್ಧಿಯ ನಡುವೆ ಭಿಕ್ಷಾಟನೆಯೂ ತನ್ನದೇ ಸ್ಥಾನವನ್ನು ಪಡೆದುಕೊಂಡಿದೆ.

ಈ ಎಲ್ಲದರ ಪರಿಣಾಮವಾಗಿ ಸೋಲಿಗರು ತಮ್ಮ ಮೂಲ ಆಚರಣೆಗಳನ್ನು, ಹಬ್ಬ ಹರಿದಿನಗಳನ್ನು ಕಾಟಾಚಾರಕ್ಕೆ ಮಾತ್ರ ಮಾಡುತ್ತಿದ್ದಾರೆ. ಕಳೆದ ೩೦ ವರ್ಷಗಳಲ್ಲಿ ಆಗುತ್ತಿರುವ ಈ ಕ್ಷಿಪ್ರ ಬದಲಾವಣೆಗಳಿಗೂ ಅವರ ಆಹಾರ, ವ್ಯವಸಾಯ, ಉಡುಗೆ-ತೊಡುಗೆ ಇತ್ಯಾದಿ ಜೀವನ ಕ್ರಮದ ಬದಲಾವಣೆಗೂ ನೇರವಾದ ಸಂಬಂಧ ಇರುವುದನ್ನು ನಾವು ಸ್ಪಷ್ಟವಾಗಿ ಕಾಣಬಹುದು. ಬದಲಾದ ಈ ಆಚಾರ-ವಿಚಾರಗಳ ನಡುವೆ ಮನುಷ್ಯ ಸಂಬಂಧಗಳು, ಮೌಲ್ಯಗಳು ಸಹ ಬದಲಾಗುವುದು ಅನಿವಾರ್ಯ.

ಈ ಹಿನ್ನೆಲೆಯಲ್ಲಿ ನಮ್ಮ ಯುವಕರು ತಮ್ಮದೇ ಜೀವನ ವಿಧಾನವನ್ನು ಕುರಿತು ಚಿಂತಿಸತೊಡಗಿದರು. ಜಾಗತೀಕರಣದ ದೈತ್ಯ ಪ್ರಭಾವ ತಮ್ಮದೇ ಜೀವನದ ಮೇಲೆ ಹೇಗೆ ಪಲ್ಲಟಗಳನ್ನು ತರುತ್ತಿದೆ ಎಂದು ಚಿಂತಿಸಿದರು. ಎಲ್ಲೋ ಒಂದು ಕಡೆ ನಾವು ಲಘುವಾಗಿ ಪರಿಗಣಿಸುವ ಆಹಾರ ವಿಹಾರಾದಿ ಪದ್ಧತಿಗಳು ದೂರಗಾಮಿಯಾಗಿ ಇಡೀ ಸಂಸ್ಕೃತಿಯ ಪಲ್ಲಟಗಳಿಗೆ ಕಾರಣವಾಗುವುದು ಮತ್ತು ಆ ಮೂಲಕ ಮನುಷ್ಯ ಸಂಬಂಧ ಗಳನ್ನು, ಮೌಲ್ಯಗಳನ್ನು ಏರುಪೇರು ಮಾಡುವುದನ್ನು ಕಾಣುತ್ತೇವೆ. ಒಟ್ಟಿನಲ್ಲಿ ಮನುಷ್ಯ ಮುಖ್ಯವಾಗಿರಬೇಕಾದ ಕಡೆ ಸಾಂಸ್ಕೃತಿಕ ಪಲ್ಲಟಗಳು ವಸ್ತುಕೇಂದ್ರಿತವಾಗಿ ಬೆಳೆಯುತ್ತ ಮನುಷ್ಯನನ್ನು ಎರಡನೇ ದರ್ಜೆಗೆ ಇಳಿಸಿಬಿಡುತ್ತವೆ. ಇದಕ್ಕೆ ಪರಿಹಾರವೇನು, ಎಂದು ಚಿಂತಿಸಿದ ಮಕ್ಕಳು 'ನನ್ನತನ' ಎಂಬುದನ್ನು ನಾವು ನಮ್ಮ ಆಹಾರ ವಿಹಾರ, ಉಡುಗೆ ತೊಡುಗೆಗಳಲ್ಲಿ ಉಳಿಸಿಕೊಳ್ಳಬೇಕು. ಹಾಗೆ ಉಳಿಸಿಕೊಳ್ಳುವ ಮೂಲಕ ಮಾತ್ರ 'ನಾವು ನಾವಾಗೇ' ಉಳಿಯಬಹುದೆಂದು ಭಾವಿಸತೊಡಗಿದರು.

**ಜಿ. ಎಸ್. ಜಯದೇವ**
ದೀನಬಂಧು ಟ್ರಸ್ಟ್, ಚಾಮರಾಜನಗರ - ೫೭೧ ೩೧೩



## ಅಭಿನಂದನೆ

ಕರ್ನಾಟಕದ ಪ್ರಮುಖ ಪ್ರಗತಿಪರ ಚಿಂತಕರಲ್ಲೊಬ್ಬರಾದ ನಾಡೋಜ ಬರಗೂರು ರಾಮಚಂದ್ರಪ್ಪನವರಿಗೆ ೨೦೧೧ನೇ ಸಾಲಿನ ಪಂಪ ಪ್ರಶಸ್ತಿಯನ್ನು ಕೊಡಲಾಗಿದೆ. ಉಪನ್ಯಾಸಕರಾಗಿ, ಸಾಹಿತಿಯಾಗಿ, ಚಲನಚಿತ್ರ ನಿರ್ದೇಶಕರಾಗಿ, ಜನಪರ ದೃಷ್ಟಿಕೋನದಿಂದ ಕ್ರಿಯಾಶೀಲರಾಗಿರುವ ಎಡಪಂಥೀಯ ತಾತ್ವಿಕ ಬದ್ಧತೆ ಹೊಂದಿರುವ ಬರಗೂರು ರಾಮಚಂದ್ರಪ್ಪನವರನ್ನು 'ಹೊಸತು' ಪತ್ರಿಕೆ ಅಭಿನಂದಿಸುತ್ತದೆ.

# ನೆನಪಿನಂಗಳದಲ್ಲಿ ಕ್ಯಾಪ್ಟನ್ ಲಕ್ಷ್ಮಿ

**ಡಾ|| ಎನ್. ಗಾಯತ್ರಿ**

ಸ್ವಾತಂತ್ರ್ಯ ಗಂಗೆಗೆ ಸಾವಿರಾರು ತೊರೆಗಳು. ಅವುಗಳಲ್ಲೊಂದು ತೊರೆ ಸುಭಾಷ್ ಚಂದ್ರ ಬೋಸರ 'ಇಂಡಿಯನ್ ನ್ಯಾಷನಲ್ ಆರ್ಮಿ.' ಈ ಸೇನೆಯ ಮಹಿಳಾ ಅಂಗ ರಾಣಿ ಝಾನ್ಸಿ ರೆಜಿಮೆಂಟ್. ಅದರ ಕ್ಯಾಪ್ಟನ್ ಲಕ್ಷ್ಮಿ ಸ್ವಾಮಿನಾಥನ್. ಹೀಗಾಗಿ ಸುಭಾಷ್ ಚಂದ್ರ ಬೋಸ್ ಮತ್ತು ಕ್ಯಾಪ್ಟನ್ ಲಕ್ಷ್ಮಿಯ ಹೆಸರುಗಳು ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅಚ್ಚಳಿಯದೆ ಉಳಿದಿವೆ.

ಎರಡನೇ ಮಹಾಯುದ್ಧದ ಸಂದರ್ಭದಲ್ಲಿ ಸುಭಾಷ್ ಚಂದ್ರ ಬೋಸರು ಸಿಂಗಪುರದಲ್ಲಿ ಕಟ್ಟಿದ ಆಜಾದ್ ಹಿಂದ್ ಫೌಜ್‌ನಲ್ಲಿ ಮಹಿಳೆಯರಿಗೇ ಪ್ರತ್ಯೇಕವಾಗಿ ರೂಪಿಸಿದ ಝಾನ್ಸಿರಾಣಿ ರೆಜಿಮೆಂಟಿನ ಕ್ಯಾಪ್ಟನ್ ಆಗಿ ನೇತಾಜಿಯವರಿಂದ ನೇಮಿಸಲ್ಪಟ್ಟ ಡಾ|| ಲಕ್ಷ್ಮಿ ಪೂರ್ವ ಏಷ್ಯಾದಲ್ಲಿನ ಭಾರತೀಯ ಮಹಿಳೆಯರ ಸಂಘಟನೆಯ ಹೊಣೆ ಹೊತ್ತವರು. ಲಕ್ಷ್ಮಿಯವರ ಹೋರಾಟದ ಸೆಲೆಗೆ ಕುಟುಂಬದ ಹಿನ್ನೆಲೆಯೂ ಕಾರಣ. ಮದ್ರಾಸ್ ಉಚ್ಚ ನ್ಯಾಯಾಲಯದಲ್ಲಿ ಪ್ರಖ್ಯಾತ ವಕೀಲರಾಗಿದ್ದ ಡಾ|| ಸ್ವಾಮಿನಾಥನ್ ಮತ್ತು ನಾಯಕಿಯಾಗಿದ್ದ ಅಮ್ಮುಕುಟ್ಟಿಯವರ ಅಕ್ಕರೆಯ ಮಗಳಾಗಿ ಜನಿಸಿದ ಲಕ್ಷ್ಮಿಗೆ ಬದುಕಿನ ದಾರಿ ತಾವು ಬಯಸಿದ್ದನ್ನು ಸಾಧಿಸಲು ಅನುವು ಮಾಡಿಕೊಟ್ಟಿತ್ತು. ಪುಟ್ಟ ಬಾಲಕಿ ತಾಯಿಯೊಂದಿಗೆ ಸಭೆ, ಸಮಾರಂಭಗಳಲ್ಲಿ ಭಾಗವಹಿಸುತ್ತಾ ಚಳುವಳಿಯ ಪಾಠಗಳನ್ನು ಬಾಲ್ಯದಿಂದಲೇ ಕಲಿತವರು. ಅಮ್ಮನ ಜೊತೆಗೂಡಿ ವಿದೇಶಿ ವಸ್ತುಗಳನ್ನು ಸುಡುವ ಕಾಯಕದಲ್ಲಿ ತನ್ನ ಬಟ್ಟೆಗಳೊಂದಿಗೆ ಆಟಿಕೆಗಳನ್ನೂ ಸುಟ್ಟಿದ್ದರು. ಹೆಂಡದಂಗಡಿಗಳ ಮುಂದೆ ಪಿಕೆಟಿಂಗ್ ಮಾಡುತ್ತಾ ದೇಶದ ಸ್ವಾತಂತ್ರ್ಯದ ಕನಸು ಕಂಡವರು. ಓದಿನಲ್ಲಿ ಮುಂದಿದ್ದ ಚುರುಕು ಬುದ್ಧಿಯ ಲಕ್ಷ್ಮಿ ವೈದ್ಯೆಯಾಗಿ ಬಡಜನರ ಸೇವೆ ಮಾಡಬಯಸಿದರು. ವೈದ್ಯಕೀಯ ಪದವಿ ಪಡೆದನಂತರ ವೈದ್ಯೆಯಾಗಿ ನೆಲೆಸಿ ಬಡರೋಗಿಗಳ ಶುಶ್ರೂಷೆಯಲ್ಲಿ ತೊಡಗಿದರು. ಇಂಡಿಯನ್ ನ್ಯಾಷನಲ್ ಆರ್ಮಿಯನ್ನು ಸ್ಥಾಪಿಸಿದ ನೇತಾಜಿ ಸುಭಾಷ್ ಚಂದ್ರ ಬೋಸರ ಕರೆಗೆ ಓಗೊಟ್ಟು ಐ.ಎನ್.ಎ.ಯ ಮಹಿಳಾ ವಿಭಾಗದ ರಾಣಿ ಝಾನ್ಸಿ ರೆಜಿಮೆಂಟಿನ ನೇತೃತ್ವ ವಹಿಸಿ ನೂರಾರು ವೀರ ಮಹಿಳೆಯರಿಗೆ ತರಬೇತಿ ನೀಡಿದರು. ಸ್ವಾತಂತ್ರ್ಯಾನಂತರ ೧೯೪೭ರಲ್ಲಿ ಕರ್ನಲ್ ಸೆಹಗಲ್‌ರವರನ್ನು ಮದುವೆಯಾದ ನಂತರ ಸಂಪೂರ್ಣವಾಗಿ ಮಾರ್ಕ್ಸ್‌ವಾದಿ ಚಳುವಳಿಯಲ್ಲಿ ತಮ್ಮನ್ನು ತೊಡಗಿಸಿಕೊಂಡರು ಮತ್ತು ಕಾನ್ಪುರದಲ್ಲಿ ನೆಲೆಸಿ ತಮ್ಮ ವೈದ್ಯ ವೃತ್ತಿಯನ್ನು ಮುಂದುವರಿಸಿದರು. ಆಗ ಪಾಕಿಸ್ತಾನದಿಂದ ಪ್ರವಾಹೋಪಾದಿಯಲ್ಲಿ ಬರುತ್ತಿದ್ದ ನಿರಾಶ್ರಿತರ ಸೇವೆಯಲ್ಲಿ ಲಕ್ಷ್ಮಿ ತಮ್ಮನ್ನು ತೊಡಗಿಸಿಕೊಂಡರು. ೧೯೭೦ರ ವೇಳೆಗೆ ಇವರ ಸೇವೆಯ ದಿಕ್ಕು ಮತ್ತೊಂದು ಕಡೆಗೆ ವಿಸ್ತರಿಸಿತು. ಪಶ್ಚಿಮ ಬಂಗಾಳದಲ್ಲಿ ಬಾಂಗ್ಲಾ ದೇಶದಿಂದ ಬರುತ್ತಿದ್ದ ನಿರಾಶ್ರಿತರಿಗೆ ವೈದ್ಯಕೀಯ ಸೇವೆಯನ್ನು ನೀಡಲು ಧಾವಿಸಿದರು. ಆ ನಂತರ ತಮ್ಮ ೫೧ನೆಯ ವಯಸ್ಸಿನಲ್ಲಿ ಮಾರ್ಕ್ಸ್‌ವಾದಿ ಪಕ್ಷಕ್ಕೆ ಸೇರ್ಪಡೆ ಯಾದ ನಂತರ ಹಲವಾರು ಪ್ರಗತಿಪರ ಚಟುವಟಿಕೆಗಳ ನೇತೃತ್ವ ವಹಿಸಿದರು. ಭೋಪಾಲ್ ಅನಿಲ ದುರಂತದ ಸಂದರ್ಭದಲ್ಲಿ ಅಲ್ಲಿಗೆ ತೆರಳಿ ವೈದ್ಯಕೀಯ ಸೇವೆ ಸಲ್ಲಿಸಿದರು. ಅಲ್ಲಿನ ಅನುಭವಗಳನ್ನು ಆಧರಿಸಿ, ಗರ್ಭಿಣಿ ಮಹಿಳೆಯರ ಮೇಲೆ ಅನಿಲ ದುರಂತದ ದುಷ್ಪರಿಣಾಮಗಳ ಕುರಿತು ವರದಿ ಮಾಡಿದರು. ಇಂದಿರಾ ಗಾಂಧಿ ಹತ್ಯೆಯ ನಂತರ ಭುಗಿಲೆದ್ದ ಸಿಖ್ ಹತ್ಯಾಕಾಂಡದ ಸಂದರ್ಭದಲ್ಲಿ ಕಾನ್ಪುರದಲ್ಲಿ ಬೀದಿಗಿಳಿದ ಕ್ಯಾಪ್ಟನ್ ಲಕ್ಷ್ಮಿ, ಸಿಖ್ ವಿರೋಧಿ ದೊಂಬಿಕೋರರನ್ನು ನಿಗ್ರಹಿಸಿ, ತಮ್ಮ ನೆರೆಹೊರೆಯ ಸಿಖ್ ಬಾಂಧವರನ್ನು ರಕ್ಷಿಸಿದರು. ೧೯೯೬ರಲ್ಲಿ ಬೆಂಗಳೂರಿನಲ್ಲಿ ನಡೆದ ವಿಶ್ವಸುಂದರಿ ಸ್ಪರ್ಧೆಯನ್ನು ವಿರೋಧಿಸಿ ನಡೆದ ಚಳುವಳಿಯ ನೇತೃತ್ವ ವಹಿಸಿದ್ದರು. ಈ ಮಧ್ಯೆ ರಾಜ್ಯಸಭೆಗೂ ನೇಮಕಗೊಂಡರು. ೧೯೮೧ರಲ್ಲಿ ಅಖಿಲ ಭಾರತ ಜನವಾದಿ ಮಹಿಳಾ ಸಂಘಟನೆಯ ಉಪಾಧ್ಯಕ್ಷೆಯೂ ಆದರು. ೧೯೯೮ರಲ್ಲಿ 'ಪದ್ಮ ವಿಭೂಷಣ' ಪ್ರಶಸ್ತಿಯಿಂದ ಸನ್ಮಾನಿತರಾಗಿದ್ದರು. ೨೦೦೨ರ ಜುಲೈ ೧೫ರಂದು ಭಾರತ ಸರ್ಕಾರದ ಅತ್ಯುನ್ನತ ಪದವಿಗಾಗಿ ಚುನಾವಣೆ ನಡೆದಾಗ ರಾಷ್ಟ್ರಪತಿ ಸ್ಥಾನಕ್ಕೆ ಎಡಪಕ್ಷಗಳ ಅಭ್ಯರ್ಥಿಯಾಗಿ ಸ್ಪರ್ಧಿಸಿದ್ದರು.



ಲೇಖಕಿ ಮತ್ತು ಅವರ ಮಗಳು ಮೈತ್ರಿ ಲಕ್ಷ್ಮಿಯವರೊಡನೆ ಬೆಂಗಳೂರು ರೈಲ್ವೆ ಸ್ಟೇಷನ್ ಎದುರಿನಲ್ಲಿ; ಮೆರವಣಿಗೆ ಹೊರಟಿದ್ದು ಅಲ್ಲಿಂದ.



ಹೀಗೆ ಅವಿರತವಾಗಿ ಬಾಳಿನುದ್ದಕ್ಕೂ ಅರ್ಥಪೂರ್ಣ ಚಟುವಟಿಕೆಗಳಿಂದ ಶ್ರೀಮಂತವಾಗಿರುವ ಕ್ಯಾಪ್ಟನ್ ಲಕ್ಷ್ಮಿಯವರ ಬದುಕು ನಮ್ಮ ದೇಶದ ಚರಿತ್ರೆಯ ಬಹುಮುಖ್ಯ ಭಾಗ; ಸುವರ್ಣಾಕ್ಷರದಲ್ಲಿ ಬರೆದಿಡುವಂತಹುದು. ಸ್ವಾತಂತ್ರ್ಯ ಪ್ರೇಮದ ಕುಟುಂಬದಲ್ಲಿ ಜನಿಸಿ ಸ್ಟೆತಾಸ್ಕೋಪ್ ಹಿಡಿವ ಕೈ ಬಂದೂಕು ಹಿಡಿಯುವಲ್ಲೂ ಸೈ ಎನಿಸಿಕೊಂಡಿತು. ಜನರ ಕಷ್ಟಕೋಟಲೆಗಳ ನಿವಾರಣೆಗಾಗಿ ಬೀದಿ ಬೀದಿಯಲ್ಲಿ ಹೋರಾಟದ ಬಾವುಟ ಹಿಡಿದ ಕೈ ಸಂಸತ್ತನ್ನೂ ಪ್ರವೇಶಿಸಿ ಪ್ರಜಾಪ್ರಭುತ್ವವಾದಿ ಹೋರಾಟಕ್ಕೆ ದಿಕ್ಸೂಚಿ ಬರೆಯಲು ಹೊರಟ ಈ ಧೀರೋದಾತ್ತ ಚೇತನ ಇದೇ ಜುಲೈ ೨೩.ರಂದು ಚಿರಶಾಂತಿಗೆ ಸಂದಿತು. ಈ ಸಂದರ್ಭದಲ್ಲಿ ಈ ಮಹಾನ್ ಹೋರಾಟಗಾರ್ತಿಗೆ ಇಲ್ಲಿದೆ ಅಕ್ಷರ ನಮನ.

ಬದುಕಿರುವಾಗಲೇ ದಂತಕಥೆಯಾದ ಕ್ಯಾಪ್ಟನ್ ಲಕ್ಷ್ಮಿ ಹೆಸರೇ ಒಂದು ರೋಮಾಂಚನ ! ಈ ಅಪರೂಪದ ಜೀವಿಯನ್ನು ಎಂದಾದರೂ ಹತ್ತಿರದಿಂದ ನೋಡಬಹುದೆಂದು ನಾನು ಚಿಕ್ಕವಳಿರುವಾಗ ನೆನೆಸಿರಲಿಲ್ಲ. ಆದರೆ ಅಂತಹದೊಂದು ಸೌಭಾಗ್ಯ ನನಗೆ ಬದುಕಿನಲ್ಲಿ ಮೂರು ಬಾರಿ ಒದಗಿ ಬಂದಿತ್ತು. ಆ ಮಧುರ ನೆನಪುಗಳ ಮೆಲುಕು ಇಲ್ಲಿದೆ :

೧೯೮೧ರ ಮಾರ್ಚ್‌ನಲ್ಲಿ ದೇಶದ ದೊಡ್ಡ ಮಹಿಳಾ ಸಂಘಟನೆಯಾದ ಜನವಾದಿ ಮಹಿಳಾ ಸಂಘಟನೆಯ ಸ್ಥಾಪನಾ ಸಮಾವೇಶ ಮದ್ರಾಸಿನಲ್ಲಿ ನಡೆದಿತ್ತು. ಬೆಂಗಳೂರಿನಿಂದ ಕರ್ನಾಟಕದ ಪ್ರತಿನಿಧಿಗಳಾಗಿ ನಾನು, ವಿಮಲಾ ಮತ್ತು ಒಂದಿಬ್ಬರು ಈ ಸಮಾವೇಶದಲ್ಲಿ ಭಾಗವಹಿಸಲು ತೆರಳಿದ್ದೆವು. ಆ ಬೃಹತ್ ಸಮಾವೇಶವನ್ನು ನೋಡಿ ನನಗೆ ಮತ್ತು ವಿಮಲಾಗೆ ಏನೋ ಒಂದು ರೀತಿಯ ಹಿಂಜರಿಕೆ, ನಾಚಿಕೆ, ಸಂಕೋಚ ಎಲ್ಲವೂ ಉಂಟಾಗಿದ್ದವು. ಕೇರಳ, ಪಶ್ಚಿಮ ಬಂಗಾಳ, ಆಂಧ್ರ, ಮಹಾರಾಷ್ಟ್ರ ಹಾಗೂ ತಮಿಳುನಾಡಿನ ಪ್ರತಿನಿಧಿಗಳ ದೊಡ್ಡ ಸಮೂಹ, ಅವರ ಮಾತುಕತೆ, ವೇದಿಕೆಯ ಮೇಲೆ ಬಂದು ಅವರು ಮಂಡಿಸುತ್ತಿದ್ದ ವಿಚಾರಗಳು - ಎಲ್ಲವನ್ನೂ ಬೆರಗಾಗಿ ನೋಡುತ್ತಿದ್ದೆವು. ವೇದಿಕೆಯ ಮೇಲೆ ಪ್ರೆಸಿಡಿಯಂನಲ್ಲಿ ಆಸೀನರಾಗಿದ್ದ ಮಹಿಳಾ ನಾಯಕಿಯರಲ್ಲಿ ತಮ್ಮ ಅಪರೂಪದ ಸೌಂದರ್ಯ ಮತ್ತು ವ್ಯಕ್ತಿತ್ವದಿಂದ ಮಿಂಚುತ್ತಿದ್ದ ಕ್ಯಾಪ್ಟನ್ ಲಕ್ಷ್ಮಿಯನ್ನಂತೂ ನಾವು ಬೆರಗಾಗಿ ನೋಡುತ್ತಿದ್ದೆವು. ಮೌನ ಗೌರಿಯರಂತೆ ಸಮ್ಮೇಳನದಲ್ಲಿ ಭಾಗವಹಿಸುತ್ತಿದ್ದ ನಮ್ಮನ್ನೂ ಹಾಗೆಯೇ ಲಕ್ಷ್ಮಿ ಗಮನಿಸುತ್ತಿದ್ದರೆನಿಸುತ್ತದೆ. ನಮ್ಮ ಬಳಿ ಬಂದು ನಮ್ಮ ಊಟ, ವಸತಿಯೆಲ್ಲವನ್ನು ವಿಚಾರಿಸಿ ನಮ್ಮಲ್ಲಿದ್ದ ಸಂಕೋಚವನ್ನು ಹೋಗಿಸಿದ್ದರು. 'ಚಿಂತೆ ಬೇಡ, ಉತ್ತರ ಪ್ರದೇಶದಲ್ಲೂ ಮಹಿಳಾ ಚಳುವಳಿ ಬೆಳೆದಿರುವುದು ಅಷ್ಟಕ್ಕಷ್ಟೇ. ಇನ್ನು ಮುಂದೆ ಚಳುವಳಿಯನ್ನು ಕಟ್ಟಿ ಬೆಳೆಸೋಣವಂತೆ ಅದಕ್ಕೇನು' ಎಂದು ಸಮಾಧಾನಪಡಿಸಿದರು. ಹೀಗೆ ಸಮ್ಮೇಳನದ ನಾಯಕಿಯರಲ್ಲೆಲ್ಲಾ ಇಂದಿಗೂ ಹೆಚ್ಚಿಗೆ ನೆನಪಿಗೆ ಬರುವವರು ಚೈತನ್ಯದ ಚಿಲುಮೆಯಾಗಿದ್ದ ಕ್ಯಾಪ್ಟನ್ ಲಕ್ಷ್ಮಿ. ಅವರು ಮೂರು ದಿನ ನಡೆದ ಆ ಸಮ್ಮೇಳನದ ಉಸಿರಾಗಿದ್ದರು. ಅವರ ವ್ಯಕ್ತಿತ್ವದ ಪ್ರಭಾವ ಸಭೆಗಳ ಎಲ್ಲ ಕಾರ್ಯಕ್ರಮಗಳ ಮೇಲೂ ಅಚ್ಚೊತ್ತುವಂತಿತ್ತು. ಅಲ್ಲಿ ಒಂದು ಸಂಜೆ ಸಮೂಹ ಗಾಯನದ ಸಾಂಸ್ಕೃತಿಕ ಕಾರ್ಯಕ್ರಮವೊಂದನ್ನು ಏರ್ಪಡಿಸಲಾಗಿತ್ತು. ವಿವಿಧ ರಾಜ್ಯಭಾಷೆಗಳ ಗಾಯನವನ್ನು ಹಾಡುತ್ತಿದ್ದರು. ಕನ್ನಡದ್ದಿನ್ನೂ ಹಾಡಿರಲಿಲ್ಲ. ಸುಮ್ಮನೆ ಕುಳಿತಿದ್ದ ನಮ್ಮ ಬಳಿ ಬಂದು, 'ನಿಮ್ಮ ಕನ್ನಡದ ಹಾಡು ಇನ್ನೂ ಬಂದಿಲ್ಲವೆಂದು ನಿಮಗೆ ಬೇಸರವೇ ? ತಾಳಿ. ಹಾಡಿಸುವೆ' ಎಂದು ನಮಗೆ ಹೇಳಿ, ಕೂಡಲೆ ಅಲ್ಲಿಗೆ ಹೋಗಿ ಕನ್ನಡದ ಹಾಡು ಹೇಳಲು ಹೇಳಿದರು. ಆ ಕೂಡಲೇ ಸಮೂಹ ಗಾಯನದವರು ಕುವೆಂಪುರವರ 'ಜಯ ಕರ್ನಾಟಕ ಮಾತೆ'ಯ ಗೀತೆಯನ್ನು ಹಾಡಿದರು. 'ಕ್ಯಾಪ್ಟನ್ ಲಕ್ಷ್ಮಿ' ಎಂದ ಕೂಡಲೇ ಈ ಮಧುರ ಆತ್ಮೀಯತೆಯ ಕ್ಷಣಗಳು ನಮ್ಮ ಕಣ್ಣ ಮುಂದೆ ಬರುತ್ತವೆ.

೧೯೯೬ರಲ್ಲಿ ಬೆಂಗಳೂರಿನಲ್ಲಿ ವಿಶ್ವಸುಂದರಿ ಸ್ಪರ್ಧೆ ನಡೆಯುವುದಿತ್ತು. ಅದನ್ನು ಬೆಂಗಳೂರಿನ ಎಲ್ಲ ಮಹಿಳಾ ಸಂಘಟನೆಗಳು ಪ್ರತಿಭಟಿಸಲು ಸನ್ನದ್ಧವಾಗಿದ್ದವು. ಈ ಸಂಬಂಧವಾಗಿ ಒಂದು ಬೃಹತ್ ಪ್ರತಿಭಟನೆಯನ್ನು ಆಯೋಜಿಸಲಾಗಿತ್ತು. ಜನ ಸಾಗರವೇ ನೆರೆದಿತ್ತು. ಈ ಪ್ರತಿಭಟನಾ ಪ್ರದರ್ಶನವನ್ನು ಉದ್ಘಾಟಿಸಿ, ನೇತೃತ್ವ ವಹಿಸಲು ಆಗ ಸಂಸದೆಯಾಗಿದ್ದ ಪುತ್ರಿ ಸುಭಾಷಿಣಿ ಅಲಿಯೊಂದಿಗೆ ಲಕ್ಷ್ಮಿ ಬೆಂಗಳೂರಿಗೆ ಆಗಮಿಸಿದ್ದರು. ಬೆಂಗಳೂರು ರೈಲ್ವೇ ನಿಲ್ದಾಣದ ಮುಂದೆ ನೆರೆದಿದ್ದ ಜನಸಾಗರವನ್ನು ಉದ್ದೇಶಿಸಿ ಅವರು ಮಾತನಾಡಬೇಕಿತ್ತು. ಅಲ್ಲಿ ಯಾವುದೇ ವೇದಿಕೆಯಿರಲಿಲ್ಲ. ಆದರೆ ಅಲ್ಲೊಂದು ಅಂಬಾಸಿಡರ್ ಕಾರು ನಿಂತಿತ್ತು. ನಾವೆಲ್ಲಾ ಸಂಘಟಕರು ಅವರನ್ನು ಹೇಗೋ ಮಾಡಿ ಕಾರಿನ ಮೇಲೆ ಹತ್ತಿಸಿದೆವು. ಆಗ ಅವರ ಪ್ರಾಯ ಎಂಬತ್ತೆರಡು ವರ್ಷ. ಆ ಕಾರಿನ ಮೇಲೆ ಪುಟ್ಟ ಹುಡುಗಿಯಂತೆ ಹತ್ತಿ ನಿಂತು ನೆರೆದಿದ್ದ ಜನಸ್ತೋಮವನ್ನು ಉದ್ದೇಶಿಸಿ ಭಾಷಣ ಮಾಡಿದ ಈ ಎಂಭತ್ತೆರಡರ ಯುವತಿಯ ಸಾಹಸವನ್ನು ಅಲ್ಲಿ ನೆರೆದಿದ್ದ ಸಾವಿರಾರು ಜನರು ಮರೆಯುವುದು ಹೇಗೆ ಸಾಧ್ಯ ? ಈ ಕಾರ್ಯಕ್ರಮ ಮುಗಿಸಿ ಮಾರನೆಯ ದಿನ ಊರಿಗೆ ಹೋಗಲು ವಿಮಾನ ನಿಲ್ದಾಣಕ್ಕೆ ಹೊರಟು ನಿಂತಿದ್ದಾಗ, ಪಾರ್ವತಿ ಮೆನನ್‌ರ ಮನೆಯಲ್ಲಿ 'ಅಚಲ' ಪತ್ರಿಕೆಗೆಂದು ಒಂದು ಚುಟುಕು ಸಂದರ್ಶನವನ್ನು ಮಾಡಿಕೊಂಡೆ.

೨೦೦೨ರ ಜುಲೈ ೧೫ರಂದು ರಾಷ್ಟ್ರಪತಿ ಹುದ್ದೆಗಾಗಿ ಚುನಾವಣೆ ನಡೆಯುವುದಿತ್ತು. ಅಧಿಕಾರಾರೂಢ ಬಿ.ಜೆ.ಪಿ. ಮತ್ತು ಕಾಂಗ್ರೆಸ್ ಪಕ್ಷಗಳು ಅಬ್ದುಲ್ ಕಲಾಂರನ್ನು ರಾಷ್ಟ್ರಪತಿ ಅಭ್ಯರ್ಥಿ ಸ್ಥಾನಕ್ಕೆ ನಿಲ್ಲಿಸಿದ್ದವು. ಆಗ ಅವರಿಗೆ ಪ್ರತಿಯಾಗಿ ಎಡಪಕ್ಷಗಳು ಕ್ಯಾಪ್ಟನ್ ಲಕ್ಷ್ಮಿಯವರನ್ನು ತಮ್ಮ ಅಭ್ಯರ್ಥಿಯಾಗಿ ನಿಲ್ಲಿಸಿದ್ದವು. ಚುನಾವಣಾ ಪ್ರಚಾರಕ್ಕೆಂದು ಬೆಂಗಳೂರಿಗೆ ಆಗಮಿಸಿದ್ದ ಕ್ಯಾಪ್ಟನ್ ಲಕ್ಷ್ಮಿಯವರನ್ನು ಬೆಂಗಳೂರಿನ ನಾಗರಿಕರು ಹರ್ಷೋಲ್ಲಾಸದಿಂದ ಸ್ವಾಗತಿಸಿ ನೀಡಿದ ಅದ್ದೂರಿಯ ಆತ್ಮೀಯ ಸ್ವಾಗತ ಅವರ ವ್ಯಕ್ತಿತ್ವದ ಜನಪ್ರಿಯತೆಗೂ ಸಾಕ್ಷಿಯಾಗಿತ್ತು. ನಾಗರಿಕರಿಗೆ ಹೇಗೋ ಹಾಗೆ ಕ್ಯಾಪ್ಟನ್ ಲಕ್ಷ್ಮಿಯವರಿಗೂ ಇದು ಮೈನವಿರೇಳಿಸುವ ಸಂದರ್ಭವೇ. ಬೆಂಗಳೂರಿನಲ್ಲಿದ್ದಷ್ಟು ಹೊತ್ತು ಬಿಡುವಿಲ್ಲದ ಚಟುವಟಿಕೆಗಳಲ್ಲಿ ತೊಡಗಿದ್ದ ಕ್ಯಾಪ್ಟನ್ ಲಕ್ಷ್ಮಿಯವರು ಬೆಂಗಳೂರನ್ನು ಬಿಟ್ಟು ತೆರಳುವ ಮುನ್ನ ನಗರದ ಮಹಿಳಾ ಸಂಘಟನೆಗಳ ಸದಸ್ಯರನ್ನು ಭೇಟಿಯಾಗಬಯಸಿದರು. ಅದಕ್ಕೆಂದೇ ಒಂದು ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಈ ಸಂದರ್ಭದಲ್ಲಿ 'ಹೊಸತು' ಪತ್ರಿಕೆಗೆ ಅವರನ್ನು ಸಂದರ್ಶಿಸಬೇಕೆಂದಾಗ ನನಗೆ ಅರ್ಧ ಗಂಟೆಯ ಸಮಯ ಕೊಟ್ಟುದಲ್ಲದೆ ಹಲವಾರು ಮೌಲಿಕ ಸಂಗತಿಗಳನ್ನು ಕುರಿತು ಮಾತಾಡಿದರು : ''ಭಾರತಕ್ಕೆ ಇನ್ನೂ ಸಂಪೂರ್ಣ ಸ್ವಾತಂತ್ರ್ಯ ಸಿಕ್ಕಿಲ್ಲ. ೧೯೪೭ರಲ್ಲಿ ನಮಗೆ ದೊರಕಿದ್ದುದು ಕೇವಲ ಸ್ವಾತಂತ್ರ್ಯ. ಇಂದು ಅದಕ್ಕೆ ಅಡ್ಡಿಯೊಡ್ಡುತ್ತಿರುವ ಆರ್ಥಿಕ ಮತ್ತು ಸಾಮಾಜಿಕ ದಾಸ್ಯದಲ್ಲಿ ನಾವು ಸಿಕ್ಕಿ ಹಾಕಿಕೊಂಡಿದ್ದೇವೆ. ಅದರ ವಿರುದ್ಧವೂ ನಾವು ಹೋರಾಟ ನಡೆಸಬೇಕು.'' ಸುಭಾಷ್ ಚಂದ್ರ ಬೋಸರ ನೇತೃತ್ವದಲ್ಲಿ ಅವರು ನಡೆಸಿದ ಹೋರಾಟ ಅವರ ನೆನಪಿನಾಳದಲ್ಲಿ ಸ್ಥಿರವಾಗಿದ್ದು ಅವರಿಗೆ ಅದು ಎಂದೆಂದೂ ಬಾಳದೀವಿಗೆಯಾಗಿ ಮುನ್ನಡೆಸುತ್ತಿತ್ತು, ಎಂಬುದನ್ನು ಕಾಣಬಹುದಾಗಿತ್ತು. ಅಂದಿನ ಅವರ ನೆನಪುಗಳನ್ನು ನೆನಪುಮಾಡಿಕೊಳ್ಳುವುದು ಅವರಿಗೆ ಹರ್ಷ ಕೊಡುತ್ತಿತ್ತು. ಐ.ಎನ್.ಎ.ನಲ್ಲಿ ಮಹಿಳೆಯರ ಪಾತ್ರವೇನಿತ್ತು, ಎಂಬ ಪ್ರಶ್ನೆಗೆ ಲಕ್ಷ್ಮಿ ಉತ್ತರಿಸಿದ್ದು ಹೀಗೆ : ''ದೇಶದ ಸ್ವಾತಂತ್ರ್ಯಕ್ಕೆ ಹೋರಾಡುವುದು ನಮ್ಮ ಮುಖ್ಯ ಧ್ಯೇಯವಾಗಿದ್ದರೂ, ಅವರ ಜೊತೆ ಜೊತೆಯಲ್ಲಿಯೇ ಮಹಿಳೆಯರ ಕಾಳಜಿಗಳಿಗೂ ಗಮನ ಕೊಡಲಾಗುತ್ತಿತ್ತು. ಸೇನೆಯಲ್ಲಿ ಮಹಿಳೆಯರು ಇರಬೇಕೇ ಬೇಡವೇ, ಎನ್ನುವ ವಾದ ಇತ್ತೀಚಿನದಾದರೂ ಮಹಿಳೆಯರದೇ ಆದ ಸೇನೆಯೊಂದನ್ನು ಕಟ್ಟಿದ ಕೀರ್ತಿ ಸುಭಾಷ್ ಚಂದ್ರ ಬೋಸರದು. 'ನಿಮ್ಮದೇ ಹಕ್ಕುಗಳಿಗಾಗಿ ನಿಮ್ಮದೇ ಸ್ವಾತಂತ್ರ್ಯಕ್ಕಾಗಿ ಹೋರಾಡಿ' ಎಂದು ಅವರು ಹೇಳುತ್ತಿದ್ದರು. ರಾಣಿ ಝಾನ್ಸಿ ರೆಜಿಮೆಂಟಿನ ನೇತೃತ್ವವನ್ನು ನನಗೆ ವಹಿಸಿದ್ದರು. ಸುಮಾರು ಒಂದು ಸಾವಿರ ಮಹಿಳೆಯರಿದ್ದ ಈ ರೆಜಿಮೆಂಟಿನಲ್ಲಿ ೨೦೦ ಮಂದಿ ನರ್ಸಿಂಗ್ ತರಬೇತಿಯನ್ನು ಮಾಡಿಕೊಂಡವರಾಗಿದ್ದರು. ಈ ಸೇನೆಯಲ್ಲಿ ಕೆಲಸ ಮಾಡುವುದೇ ಒಂದು ವಿಶೇಷ ಅನುಭವವಾಗಿತ್ತು. ಹೆಣ್ಣಿನ ಸಾಂಪ್ರದಾಯಿಕ ಮಾದರಿಯನ್ನೇ ಬದಲಾಯಿಸಿದ ಈ ಪಾತ್ರ ನಮಗೆ ವಿಶೇಷವಾಗಿತ್ತು.''

ಲಕ್ಷ್ಮಿಯವರು ವೈದ್ಯರಾಗಿ ಸೇವೆ ಸಲ್ಲಿಸುತ್ತಾ ಹಣವನ್ನೇನೂ ಮಾಡಲಿಲ್ಲ. ಬದಲಿಗೆ ಸಾವಿರಾರು ಬಡ ಕೂಲಿ ಕಾರ್ಮಿಕರ ಆರೋಗ್ಯದ ಸ್ಥಿತಿ-ಗತಿಗಳನ್ನು ಉತ್ತಮಗೊಳಿಸಲು ತಮ್ಮದೇ ಗಳಿಕೆಯನ್ನು ಹಂಚಿದರು. ಕಾನ್ಪುರದಲ್ಲಿ ಆರ್ಯನಗರದಲ್ಲಿದ್ದ ಅವರ ಮನೆಯ ಸುತ್ತ ಸದಾ ರೋಗಿಗಳ ಸಂತೆಯೇ ನೆರೆದಿತ್ತು ಎಂಬುದನ್ನು ನೆನಪಿಸಿಕೊಳ್ಳುವ ಈ ಕರುಣಾಮಯಿಯ ಜೀವನವನ್ನು ಹತ್ತಿರದಿಂದ ಕಂಡ ನನ್ನ ಬ್ಯಾಂಕಿನ ಗೆಳತಿಯರು ಹೇಳುತ್ತಿದ್ದ ಕತೆಗಳು ನನಗೆ ಈಗಲೂ ಕಣ್ಣಿಗೆ ಕಟ್ಟಿದಂತಿವೆ.



**ಡಾ|| ಎನ್. ಗಾಯತ್ರಿ**
೨೦೧, ಸ್ಕೈಲೈನ್, ಗೋಲ್ಡನ್ ರೇಸ್
ಅಪಾರ್ಟ್‌ಮೆಂಟ್ಸ್, ಛತ್ರಂ ಬ್ಲಾಕ್, ಗವೀಪುರ
ಬೆಂಗಳೂರು - ೫೬೦೦೧೯



✷

ಜಿ. ನಾಗಕುಮಾರ್, ಜಿ. ರವಿ

# ಸಮನ್ವಯ ಶಿಕ್ಷಣದ ಗೊತ್ತು ಗುರಿಗಳು

ಸ್ವತಂತ್ರ ಭಾರತಕ್ಕೀಗ ೬೫ ವರ್ಷಗಳು. ಸಂವಿಧಾನದತ್ತವಾದ ಆರು ಮೂಲಭೂತ ಹಕ್ಕುಗಳ ಪಟ್ಟಿಗೆ ಈಚೆಗೆ ಏಳನೆಯದಾಗಿ ಶಿಕ್ಷಣವೂ ಸೇರ್ಪಡೆಗೊಂಡಿದೆ. ಈ ಹಕ್ಕುಗಳ ಅನುಷ್ಠಾನ ಮತ್ತು ಚಲಾವಣೆಯಲ್ಲಿ ಸುಲಭವಾಗಿಯೇ ಗುರುತಿಸಬಹುದಾದ ವಿಪರ್ಯಾಸಗಳು ಹಲವು – ಮುಖ್ಯವಾಗಿ ಶಿಕ್ಷಣ ಕ್ಷೇತ್ರವಂತೂ ದೇಶದ ಎಲ್ಲ ಪ್ರಮುಖ ನಗರಗಳಲ್ಲಿ ಪಸರಿಸಿರುವ ಏಕೈಕ ಲಾಭದಾಯಕ ಉತ್ಪಾದನಾ ವಲಯವಾಗಿ ಪರಿಣಮಿಸಿದೆ. ನಮ್ಮ ಸರಕಾರಗಳು ಶಿಕ್ಷಣದ ಖಾಸಗೀಕರಣವನ್ನು ತಮ್ಮ ಆದ್ಯ ಕರ್ತವ್ಯವನ್ನಾಗಿಸಿಕೊಂಡು ತಮ್ಮದೇ ಶಾಲೆಗಳನ್ನು ಕಡೆಗಣಿಸಿರುವುದರಿಂದ ನಮ್ಮ ರಾಜ್ಯದಲ್ಲಿ ಅನೇಕರ ಪಾಲಿಗೆ ಪ್ರಾಥಮಿಕ ಶಿಕ್ಷಣವೇ ನಿರ್ಗಮ ರೂಪವನ್ನು ತಾಳಿದೆ ಎಂಬುದೊಂದು ನಿರ್ವಿವಾದ ವಾಸ್ತವ. ಸರಕಾರಿ ಶಾಲೆಗಳಲ್ಲಿ ಮೂಲಭೂತ ಸೌಕರ್ಯಗಳ ಕೊರತೆಯ ಬಗ್ಗೆ - ಇನ್ನೂ ಹೆಚ್ಚು ಶಾಲೆಗಳ ಅಗತ್ಯದ ಬಗ್ಗೆ – ಕಾಳಜಿ ವಹಿಸಿದ್ದವರು ಈ ಶಾಲೆಗಳನ್ನು ಮುಚ್ಚುವ ಸರಕಾರದ ಹುನ್ನಾರ ಹಾಗೂ ಆರ್ಯಸ್ಸಸ್‌ನ ಚಿಂತನಗಂಗೆಯಿಂದ ಚಿಮ್ಮಿರುವ ಬಿಜೆಪಿ ಸರಕಾರದ ಹಲವಾರು ಕಾರ್ಯಕ್ರಮಗಳ ವಿರುದ್ಧ ಶಕ್ತಿ ಪ್ರದರ್ಶನಗಳನ್ನು ನಮ್ಮ ರಾಜ್ಯದಲ್ಲಿ ಆಯೋಜಿಸಿದ್ದಾರೆ.

ರಾಷ್ಟ್ರಮಟ್ಟದಲ್ಲೂ ಯುಪಿಎ ಸರಕಾರ ಶಿಕ್ಷಣಕ್ಷೇತ್ರದಲ್ಲಿ ಹುಟ್ಟುಹಾಕಿರುವ ಪಿಡುಗುಗಳು ಹಲವು. ಉದಾಹರಣೆಗೆ, ರಾಮಾಯಣ ಮತ್ತು ಕಾರ್ಟೂನ್‌ಗಳನ್ನು ಕುರಿತ ಅದರ ಧೋರಣೆಯ ಕತೆಗಳು ಮತ್ತೊಂದು ರಾಮಾಯಣಕ್ಕೆ - ಹಲವಾರು ಮಹಾಕಾರ್ಟೂನ್‌ಗಳಿಗೆ ವಸ್ತುವಾಗಿ ಪರಿಣಮಿಸಿರುವುದು.

ನಮ್ಮ 'ಪ್ರಜೆಗಳ ಪ್ರಭುತ್ವ'ದಲ್ಲಿ ಆರ್ಥಿಕವಾಗಿ ಸಾಮಾನ್ಯರಾದವರು ಶಿಕ್ಷಣ ಕ್ಷೇತ್ರದಲ್ಲಿ ಎದುರಿಸುವ ಅವಕಾಶಗಳ ಬರ ಪ್ರಕೃತಿದತ್ತವಾದುದಲ್ಲ! ದಕ್ಕಿಸಿಕೊಳ್ಳಲಾಗದ್ದು, ಲಭ್ಯ ಇಲ್ಲದ್ದು ಹಾಗೂ ಲಭ್ಯ ಇದ್ದರೂ ಮನಸ್ಸಿಗೆ ಒಗ್ಗದ್ದು... ಇವುಗಳಲ್ಲಿ ಯಾವುದನ್ನು ಆಯ್ಕೆ ಮಾಡಿಕೊಳ್ಳಬೇಕು ? ಬಹಳಷ್ಟು ಖಾಸಗಿ ಶಾಲೆಗಳಲ್ಲೂ ಫೀ ಮಾತ್ರವೇ ಉತ್ಕೃಷ್ಟ; ಶಿಕ್ಷಣದ ಸೌಲಭ್ಯ ಮತ್ತು ಬೋಧನೆಯ ಉತ್ಕೃಷ್ಟತೆ ಸಾಧಾರಣ ಮಟ್ಟದ್ದೇ ಎಂಬುದು ಬಹಳಷ್ಟು ಪೋಷಕರು ತಮ್ಮಲ್ಲೇ ಕಾಯ್ದುಕೊಳ್ಳುವ ಗುಟ್ಟು- ಗೊಣಗು. ಸರ್ವರಿಗೂ ಶಿಕ್ಷಣ ಒದಗಿಸುವ ಜವಾಬ್ದಾರಿಯಿಂದ ಯಾವುದೇ ಸಮರ್ಪಕ ಪರ್ಯಾಯವನ್ನೂ ಕಾರ್ಯರೂಪಕ್ಕೆ ತರದೆ ನುಸುಳುತ್ತಿರುವ ಸರಕಾರ ಮತ್ತದರ ಅಧಿಕಾರಿಗಳು ನಾಚಿಕೊಳ್ಳಬೇಕಾದ ರೀತಿಯಲ್ಲಿ, ಅನಿವಾರ್ಯವೇನೋ ಎಂಬಂತೆ ಬೆಳೆದಿರುವ ಟ್ಯೂಶನ್ ಭೂತ. ಉನ್ನತ ಶಿಕ್ಷಣವನ್ನೂ ಒಳಗೊಂಡಂತೆ ನಮ್ಮ ಶಿಕ್ಷಣ ವ್ಯವಸ್ಥೆ ಸಮಸ್ಯೆಗಳ ಆಗರ.

ಶಿಕ್ಷಣದ ಹಕ್ಕು ಚಲಾವಣೆಗೆ ಬರಬೇಕಾದರೆ ಅದು ಎದುರಿಸಬೇಕಾದ ವಿಪರ್ಯಾಸಗಳ ಮಜಲುಗಳು ಹಲವು. ಈ ವಿಪರ್ಯಾಸಗಳನ್ನು ಪ್ರಭುತ್ವ ಹೇಗೆ ಹುಟ್ಟುಹಾಕುತ್ತದೆ ಮತ್ತು ಕಾಪಾಡಿಕೊಂಡು ಬರುತ್ತದೆ ಎಂಬುದರ ಸಮಯೋಚಿತ ವಿಶ್ಲೇಷಣೆ ಕಳೆದ ಜುಲೈ ತಿಂಗಳ 'ಹೊಸತು'ನಲ್ಲಿನ ಜಿ.ಆರ್. ಅವರ ಸಂಪಾದಕೀಯದಲ್ಲಿ ಕಾಣಸಿಗುತ್ತದೆ. ಈ ರಾಜ್ಯದ ಪ್ರತಿ ವಿದ್ಯಾರ್ಥಿ-ಅಧ್ಯಾಪಕ-ಪೋಷಕ ಓದಲೇಬೇಕಾದಂತಹ ಸಮಕಾಲೀನ ವಿಶ್ಲೇಷಣೆ ಅದು, ಈ ಮೂರೂ ಸಮೂಹಗಳ ಸಹಭಾಗಿತ್ವದಲ್ಲಿ ಸಾಗಬೇಕಾದ ಹೋರಾಟಕ್ಕೆ ದಿಕ್ಸೂಚಿಯಾಗಬಲ್ಲಂಥದು.

ದೈಹಿಕವಾಗಿ - ಮಾನಸಿಕವಾಗಿ - ಆರ್ಥಿಕವಾಗಿ ಸದೃಢರಾಗಿರುವವರನ್ನೇ ಅಲುಗಾಡಿಸುವ, ಅವರ ಕ್ರಿಯಾಶೀಲತೆಯನ್ನು ಪ್ರಾಥಮಿಕ-ಮಾಧ್ಯಮಿಕ ಹಂತಗಳಲ್ಲಿಯೇ ಹಿಚುಕಿಹಾಕುವ ನೀತಿಗಳು, ನಿರ್ದೇಶನಗಳು ಮತ್ತು ಅವಕ್ಕೆ 'ಸಾಮಾಜಿಕ ನ್ಯಾಯ'ದ ಬುನಾದಿ ಒದಗಿಸುವ ನ್ಯಾಯಾಲಯಗಳು ನಮ್ಮ 'ಪ್ರಜೆಗಳ ಪ್ರಭುತ್ವ'ದಲ್ಲಿ ರಾರಾಜಿಸುತ್ತಿವೆ. ಇನ್ನು ಒಂದಲ್ಲ ಒಂದು ರೀತಿಯ ಅಂಗವೈಕಲ್ಯಕ್ಕೆ ತುತ್ತಾಗಿರುವವರ ಶಿಕ್ಷಣದ ಪರಿಸ್ಥಿತಿ ಹೆಚ್ಚು ಹೀನಾಯವಾಗಿಯೇ ಇರಬೇಕು ಎಂದು ಊಹಿಸುವುದು ಸಹಜ ಅಲ್ಲವೆ ?

ಶಾಲೆಯ ಸೌಲಭ್ಯದಿಂದ ವಂಚಿತರಾದ ಇಂತಹ ಮಕ್ಕಳ ಸಂಖ್ಯೆ ಇತರ ದೇಶಗಳಿಗೆ ಹೋಲಿಸಿದರೆ ನಮ್ಮ ದೇಶದಲ್ಲೇ ಅಧಿಕವಿರಬೇಕು. ವಿಶ್ವಸಂಸ್ಥೆಯ ಅಂಕಿ-ಅಂಶಗಳ ಪ್ರಕಾರ ಈ ವಿಶ್ವದಲ್ಲಿ, ಒಂದಿಲ್ಲೊಂದು ರೀತಿಯ ಅಂಗವೈಕಲ್ಯಕ್ಕೆ ತುತ್ತಾಗಿರುವವರ ಒಟ್ಟು ಸಂಖ್ಯೆ ಸುಮಾರು ೬೫ ಕೋಟಿ. ಅಂದರೆ ಒಟ್ಟು ಜನಸಂಖ್ಯೆಯ ಶೇ. ೧೦ರಷ್ಟು. ಜಗತ್ತಿನ ಅತಿ ಬಡವರ ಎಣಿಕೆಯಲ್ಲಿ ಶೇ. ೨೦ರಷ್ಟು





ಮಂದಿ ಅಂಗವಿಕಲರು. ಶೇ. ೯೮ರಷ್ಟು ಅಂಗವಿಕಲ ಮಕ್ಕಳು ಅಭಿವೃದ್ಧಿ ಪಥದಲ್ಲಿವೆ ಎನ್ನಲಾಗುವ ದೇಶಗಳಲ್ಲೇ ಶಾಲೆಗೆ ಹೋಗುತ್ತಿಲ್ಲವಂತೆ. ಅಂಗವಿಕಲ ಯುವಕ ಮತ್ತು ಮಹಿಳೆಯರ ಸಾಕ್ಷರತೆ ಕ್ರಮವಾಗಿ ಶೇ. ೩ ಮತ್ತು ಶೇ. ೧ರಷ್ಟು, ಅಂದರೆ ನಮ್ಮ ಸರಕಾರಗಳು ಅಂಗವಿಕಲರ ಶೈಕ್ಷಣಿಕ ಸಮಸ್ಯೆಗಳು ಜಾಗತಿಕವಾದ್ದು ಎಂದು ಸುಲಭವಾಗಿಯೇ ಸಮರ್ಥಿಸಿಕೊಳ್ಳಲು ವಿಪುಲ ಬುನಾದಿಯನ್ನು ಈ ಅಂಕಿ-ಸಂಖ್ಯೆಗಳು ಒದಗಿಸುತ್ತವೆ! ಗಂಭೀರ ಸಮಸ್ಯೆಗೆ ಪೂರಕ ಪರಿಹಾರ ಒದಗಿಸುವ ಅಭ್ಯಾಸವನ್ನು ನಮ್ಮ ಪ್ರಭುತ್ವದ ಉತ್ತರಾಧಿಕಾರಿಗಳು - ಉತ್ತರಾಧಿಕಾರಿ ಸಂಸ್ಥೆಗಳು ಹೊಂದಿಲ್ಲವಲ್ಲ.

೨೦೦೧ರ ಜನಗಣತಿ ಮತ್ತು ೨೦೦೨ರ ನಮೂನೆಗಳ ಮಾಹಿತಿ ಆಧಾರದಲ್ಲಿ ನಡೆದ ರಾಷ್ಟ್ರೀಯ ಸಮೀಕ್ಷೆಗಳಿಂದ ಲಭ್ಯವಿರುವ ಈ ಕುರಿತ ನಮ್ಮ ದೇಶದ ಕೆಲವು ಅಂಕಿ-ಸಂಖ್ಯೆಗಳು ಇಂತಿವೆ :

**(ಕೋಷ್ಟಕ ೧)**

| | ೨೦೦೧ ಜನಗಣತಿ | ೨೦೦೨ ಸಮೀಕ್ಷೆ |
|---|---|---|
| ೧. ಅಂಗವೈಕಲ್ಯಕ್ಕೆ ತುತ್ತಾಗಿರುವವರ ಸಂಖ್ಯೆ | ೨.೧೯ ಕೋಟಿ | ೧.೮೫ ಕೋಟಿ |
| ೨. ಒಟ್ಟು ಜನಸಂಖ್ಯೆಯ ಶೇಕಡಾವಾರು ವಿಂಗಡಣೆ | ೨.೧೩% | ೧.೮% |
| – ಪುರುಷರು | ೧೨,೬೦೫,೬೩೫ | -- |
| – ಮಹಿಳೆಯರು | ೦೯,೩೦೧,೧೩೪ | -- |
| – ಗ್ರಾಮೀಣ ಪ್ರದೇಶಿಗರು | ೭೫% | ೭೬% |
| ನಗರ ಪ್ರದೇಶಿಗರು | ೨೫% | ೨೪% |
| – ಸಾಕ್ಷರತೆ | ೪೯% | ೪೫% |
| – ಒಂದಕ್ಕಿಂತಲೂ ಹೆಚ್ಚು ಅಂಗವಿಕಲತೆ ಉಳ್ಳವರು | ೧೦.೬೩% | -- |

ಜನಗಣತಿ ಹಾಗೂ ಸಮೀಕ್ಷೆಗಳ ಹಿಂದಿನ ಗಂಭೀರತೆ ಮತ್ತು ನಿಖರತೆಯನ್ನು ಚೆನ್ನಾಗಿಯೇ ಬಲ್ಲ ನಾವು, ಈ ಸೂಚ್ಯಂಕಗಳೇ ಅಂಕಿ-ಅಂಶಗಳನ್ನು ವಾಸ್ತವದತ್ತ ಬೆಟ್ಟು ತೋರಿಸುವ ಸೂಚಿಗಳೇ ವಿನಾ ಸಂಪೂರ್ಣ ಸತ್ಯಗಳಲ್ಲ ಎಂಬುದನ್ನು ಗಮನದಲ್ಲಿ ಇಟ್ಟುಕೊಳ್ಳಬೇಕು. ಈ ಮಾತು ವಿಶ್ವಸಂಸ್ಥೆಯ ಅಂಕಿಗಳಿಗೂ ಅನ್ವಯಿಸುತ್ತದೆ. ಸಮಸ್ಯೆ ಈ ಅಂಕಿಗಳು ಪ್ರತಿನಿಧಿಸುವುದಕ್ಕಿಂತಲೂ ತೀವ್ರವಾಗಿಯೇ ಇರಬೇಕು ಎಂಬುದು ಆರೋಗ್ಯಕರ ಊಹೆಯೆ.

''ಮಾಹಿತಿ ಸಂಗ್ರಹಣೆಯ ಸಂದರ್ಭದಲ್ಲಿ ಕುರುಡರು-ಕಿವುಡರು ಮತ್ತು ವ್ಹೀಲ್‌ಛೇರುಗಳನ್ನು ಬಳಸುವವರನ್ನು ಮಾತ್ರವೇ ಅಂಗವಿಕಲರೆಂದು



ಪರಿಗಣಿಸಲಾಗುತ್ತಿತ್ತು. ಹೀಗಾಗಿ ಅಂಗವಿಕಲರ ಶಿಕ್ಷಣ, ಉದ್ಯೋಗ, ಅವರ ಪರಿಸರ... ಇತ್ಯಾದಿ ಅಂಶಗಳನ್ನು ಕುರಿತ ನಿಖರ ಅಂಕಿ-ಸಂಖ್ಯೆಗಳು ಇಂದು ಲಭ್ಯ ಇಲ್ಲ.'' ಮಾಹಿತಿ ಸಂಗ್ರಹಣೆಯ ರೂಪರೇಷೆಗಳನ್ನು ವಿವರಿಸುವ ಕೇಂದ್ರ ಸರಕಾರದ 'ಅಂಕಿ-ಅಂಶಗಳ ಕೇಂದ್ರ ಕಚೇರಿ' ಮಾರ್ಚ್ ೨೦೧೨ರಲ್ಲಿ ಹೊರಡಿಸಿರುವ, 'ಅಂಗವೈಕಲ್ಯತೆಯ ಅಂಕಿ-ಅಂಶಗಳ ಕೈಪಿಡಿ'ಯಲ್ಲಿ ಈ ಅರ್ಥ ಬರುವ ಮಾತುಗಳಿವೆ. ಹೊಸ ಸೂತ್ರಗಳ ಆಧಾರದ ಅಂಕಿ-ಅಂಶಗಳು ಮುಂದಿನ ಜನಗಣತಿ-ಸಮೀಕ್ಷೆಗಳಿಂದ ಲಭ್ಯವಾಗಬೇಕಷ್ಟೆ. ಈ ಸಮುದಾಯದ ಸಮಸ್ಯೆಗಳತ್ತ ಸರಕಾರಗಳ ನಿರ್ಲಕ್ಷ್ಯ ಹಾಗೂ ಒಟ್ಟಾರೆ ಸಮಾಜದ ಉಪೇಕ್ಷೆಯನ್ನು ಇದು ಎತ್ತಿ ತೋರಿಸುತ್ತದೆ.

'ಅಂಗವಿಕಲರೂ ಈ ಸಮಾಜದ ಪ್ರಜೆಗಳು ಮತ್ತು ಸಮಾನಾವಕಾಶಗಳನ್ನು ನಿರೀಕ್ಷಿಸುವುದು ಅವರ ಸಾಮಾಜಿಕ ಹಕ್ಕು' ಎಂಬ ಆರೋಗ್ಯಕರ ಯೋಚನೆಗಳನ್ನು ಪ್ರಚುರ ಪಡಿಸುವ, ಅದಕ್ಕೆ ಪೂರಕವಾದ ಯೋಜನೆಗಳನ್ನು ರೂಢಿಗೆ ತರುವ ದಿಕ್ಕಿನಲ್ಲಿ ವಿಶ್ವಸಂಸ್ಥೆ ದಶಕಗಳಿಂದ ಕಾರ್ಯ ನಿರತವಾಗಿದೆ. ಇದಕ್ಕೆ ಸಂಬಂಧಿಸಿದಂತೆ, ಈ ಸಂಸ್ಥೆಯ ಜನರಲ್ ಅಸೆಂಬ್ಲಿ ೧೩ ಡಿಸೆಂಬರ್, ೨೦೦೬ರಲ್ಲಿ 'ಅಂಗವಿಕಲರು ಆಯಾ ಸಮಾಜಗಳಲ್ಲಿ ಸಕ್ರಿಯವಾಗಿ, ತಮಗೆ ಸರಿ ಕಂಡ ರೀತಿಯಲ್ಲಿ ಜೀವಿಸುವ ಹಕ್ಕನ್ನು ಪಡೆದಿರುತ್ತಾರೆ, ಎಂಬುದನ್ನು ಗುರುತಿಸಿ ಅದಕ್ಕೆ ಅಗತ್ಯವಾದ ಪರಿಸರವನ್ನು ನಿರ್ವಹಿಸುವ ಕುರಿತು ಅಂಗೀಕರಿಸಲಾದ ನಿರ್ಣಯವೊಂದಕ್ಕೆ ನಮ್ಮ ದೇಶವೂ ಬದ್ಧ. ಶಿಕ್ಷಣದ ಸಾರ್ವತ್ರೀಕರಣ ಮತ್ತು ಸಮನ್ವಯ ಶಿಕ್ಷಣವನ್ನು ಹೆಚ್ಚು ಗಂಭೀರವಾಗಿ ನಿರ್ವಹಿಸುವುದು, ಇತ್ಯಾದಿಗಳು ಈ ನಿರ್ಣಯದಲ್ಲಿ ಅಡಕವಾಗಿವೆ. ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿ ಇಂತಹುದೇ ಉದ್ದೇಶ ಮತ್ತು ಆದೇಶಗಳನ್ನು ಹೊತ್ತ ಅನೇಕ ಮಾದರಿ-ನೀತಿ-ಸಂಹಿತೆಗಳಿವೆ. ಉದಾಹರಣೆಗೆ, ಅಂಗವಿಕಲತೆಯ ಕಾರಣಕ್ಕಾಗಿಯೇ ಇಂತಹ ಮಕ್ಕಳನ್ನು ಸಾರ್ವಜನಿಕ ಶಿಕ್ಷಣದ ಪರಿಧಿಯಿಂದಲಾಗಲಿ ಇಲ್ಲವೇ ಪ್ರಾಥಮಿಕ ಮತ್ತು ಮಾಧ್ಯಮಿಕ ಹಂತಗಳಲ್ಲಿನ ಉಚಿತ ಮತ್ತು ಕಡ್ಡಾಯ ಶಿಕ್ಷಣದ ಸೌಲಭ್ಯದಿಂದಾಗಲಿ ಹೊರಗಿಡಬಾರದು ಎಂಬ ಸ್ಪಷ್ಟ ಸೂಚನೆ ಇಂತಹವರ ಹಕ್ಕುಗಳ ರಕ್ಷಣೆಯ ಗುರಿಹೊತ್ತ ವಿಶ್ವಸಂಸ್ಥೆಯ ಅಂಗಸಂಸ್ಥೆ ಯು.ಎನ್.ಸಿ.ಆರ್.ಪಿ.ಡಿ.ಯ ೨೪ನೇ ನಿಯಮದಲ್ಲಿದೆ. ಮಕ್ಕಳ ಹಕ್ಕುಗಳನ್ನು ಕುರಿತ ವಿಶ್ವಸಂಸ್ಥೆಯ ೧೯೮೯ರ ನಿಯಮಗಳು, ಸರ್ವರಿಗೂ ಶಿಕ್ಷಣ ಕುರಿತ ಬಹುತೇಕ ರಾಷ್ಟ್ರಗಳ ೧೯೯೦ರ ಸಹಮತದ ಘೋಷಣೆ, ಅಂಗವಿಕಲ ಮಕ್ಕಳ ಕಲ್ಯಾಣಕ್ಕಾಗಿ ಸಮಾನತೆ ಮತ್ತು ಸಮಾನಾವಕಾಶಗಳನ್ನು ಕುರಿತ ವಿಶ್ವಸಂಸ್ಥೆಯ ೧೯೯೩ರ ಆದಿ ನಿಯಮಗಳು, ಯುನೆಸ್ಕೋದ ಕಾರ್ಯಕ್ರಮದ ಚೌಕಟ್ಟು ಮತ್ತು ಈ ಕುರಿತ ೧೯೯೪ರ ಹೇಳಿಕೆ, ೨೦೦೬ರ ಅಂಗವಿಕಲರ ಹಕ್ಕುಗಳನ್ನು ಕುರಿತ ವಿಶ್ವಸಂಸ್ಥೆಯ ಸಭೆಯ ದಾಖಲೆಗಳು, ನಮ್ಮ ಸರಕಾರದ ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿ, ಅಂಗವಿಕಲರಿಗೆ ಸಮಾನತೆ ಮತ್ತು ಸಮಾನಾವಕಾಶಗಳನ್ನು ಕುರಿತ ನಿಯಮ - ೧೯೯೫, ೨೦೦೯ರ ಮಕ್ಕಳ ಉಚಿತ ಮತ್ತು ಕಡ್ಡಾಯ ಶಿಕ್ಷಣದ ಹಕ್ಕು ನಿಯಮಾವಳಿ... ಇತರೆ, ಹೀಗೆ ಘೋಷಣೆ ಹೇರಳವಾಗಿದೆ.

ಅಂಗವಿಕಲರ ಶಿಕ್ಷಣ ಹಕ್ಕಿನ ಆದ್ಯತೆಯ ಬಗೆಗಿನ ಚರ್ಚೆಯನ್ನು ೧೯೬೪ರಲ್ಲಿ ರಚಿಸಲಾಗಿದ್ದ ಕೊಠಾರಿ ಆಯೋಗ ಮಾಡಿತ್ತು. ಸ್ವತಂತ್ರ ಭಾರತದ ಪ್ರಥಮ ಶಿಕ್ಷಣ ಆಯೋಗ ಎಂಬ ಹೆಗ್ಗಳಿಕೆ ಈ ಆಯೋಗದ್ದು. ಈ ಆಯೋಗದ ವರದಿಯು, ಶಿಕ್ಷಣದಲ್ಲಿ ಸಮಾನಾವಕಾಶಗಳನ್ನು ಕಲ್ಪಿಸುವ ಕುರಿತ ಅಧ್ಯಾಯ ಅಂಗವಿಕಲರ ಶಿಕ್ಷಣದ ಹಕ್ಕಿನ ಬಾಧ್ಯತೆಗಳನ್ನು ಪೂರೈಸುವಲ್ಲಿ ನಮ್ಮಲ್ಲಿ ಇದುವರೆಗೆ ನಡೆದಿರುವ ಪ್ರಯತ್ನಗಳು ಬಹಳ ಕಡಿಮೆ; ಈ ದಿಸೆಯಲ್ಲಿ ಯಾವುದೇ ಮಹತ್ವದ ಬೆಳವಣಿಗೆಯನ್ನು ತ್ವರಿತವಾಗಿ ಸಾಧಿಸುವುದು ಕಷ್ಟ; ಶೈಕ್ಷಣಿಕವಾಗಿ ಮುಂದುವರಿದ ರಾಷ್ಟ್ರಗಳಿಂದ ನಾವು ಕಲಿಯಬೇಕಾದ್ದು ಬಹಳಷ್ಟಿದೆ ಎಂಬಿತ್ಯಾದಿ ಮಾತುಗಳನ್ನು ಹೊಂದಿದೆ. ಅಂಧ, ಕಿವುಡ-ಮೂಗ, ಕೈ-ಕಾಲು ಹೀನರು ಮತ್ತು ಮಾನಸಿಕ ನ್ಯೂನತೆಗಳನ್ನುಳ್ಳವರನ್ನು ಶಿಕ್ಷಣದ ಸವಲತ್ತುಗಳ ಹಕ್ಕುದಾರರನ್ನಾಗಿ ಮಾಡಬೇಕಾದ್ದು ತುರ್ತಾಗಿ ಆಗಬೇಕಾದ ಕೆಲಸ ಎಂದು ಒತ್ತಿ ಹೇಳಿ ಇಂತಹ ಕಾರ್ಯಕ್ರಮದ ಗೊತ್ತು-ಗುರಿಗಳನ್ನು ಗುರುತಿಸಿ, 'ಅಂಗವಿಕಲರ ಶಿಕ್ಷಣವೂ ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯ ಅವಿಭಾಜ್ಯ ಅಂಗವಾಗಿ ಬೆಳೆಯಬೇಕು' ಎಂದು ಸ್ಪಷ್ಟಪಡಿಸಿತ್ತು. ಈ ಕಾರ್ಯಕ್ರಮದ ಯಶಸ್ಸಿಗೆ 'ಅಧ್ಯಾಪಕರು ಮತ್ತು ಹಣದ' ಕೊರತೆ ಎದುರಾಗುತ್ತದೆ ಎಂಬ ಮುನ್ನೆಚ್ಚರಿಕೆಯ ಮಾತುಗಳನ್ನು ಹೇಳುತ್ತಲೇ ಎನ್.ಸಿ.ಇ.ಆರ್.ಟಿ.ಯಲ್ಲಿ

ಅಂಗವಿಕಲರ ಶಿಕ್ಷಣ ಮತ್ತು ಅಧ್ಯಾಪಕರ ತರಬೇತಿ ಕುರಿತ ಅಧ್ಯಯನ ಮತ್ತು ಸಾಹಿತ್ಯ ರಚನೆಗಾಗಿ ವಿಶೇಷ ವಿಭಾಗವನ್ನು ನಿರ್ಮಿಸುವ ಸಲಹೆ ನೀಡಿತ್ತು.

ಇಷ್ಟೆಲ್ಲಾ ಇದ್ದೂ, ಸಾರ್ವತ್ರಿಕ ಶಿಕ್ಷಣದಂತೆ ಸಮನ್ವಯ ಶಿಕ್ಷಣದ ಅನುಷ್ಠಾನವೂ ಒಂದು ಸವಾಲಾಗಿಯೇ ಉಳಿದಿದೆ. ೧೯೯೫ರಲ್ಲಿ ಅಂಗವಿಕಲರ ಹಕ್ಕುಗಳ ರಕ್ಷಣೆ, ಸಮಾನಾವಕಾಶಗಳ ವ್ಯವಸ್ಥೆ ಹಾಗೂ ಅವರೂ ಸಾಮಾಜಿಕ ಪ್ರಕ್ರಿಯೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುವ ಕುರಿತ ವಿಧೇಯಕವು ಅಂಗವಿಕಲತೆಯನ್ನು 'ಆಯಾ ಮಗುವಿನ ವೈದ್ಯಕೀಯ ಸ್ಥಿತಿ' ಎಂದು ಮಾತ್ರ ಪರಿಗಣಿಸಿತು. ತನ್ಮೂಲಕ ಅಂಗವೈಕಲ್ಯ ಉಳ್ಳವರ ಅಗತ್ಯಗಳನ್ನು ಕುರಿತಂತೆ ಸಮಾಜದ-ಸರಕಾರದ ಜವಾಬ್ದಾರಿಯನ್ನು ನಿಖರವಾಗಿ ಪ್ರಸ್ತುತಪಡಿಸುವಲ್ಲಿ ವಿಫಲವಾದರೂ, ನಮ್ಮ ಪಾರ್ಲಿಮೆಂಟಿನಲ್ಲಿ ಅಂಗೀಕಾರವಾಯಿತು. ಸಮಾನತೆಯನ್ನು ಸಾಧಿಸುವ ಆಶೋತ್ತರಗಳನ್ನು ಹೊತ್ತ ನಮ್ಮ ಸಂವಿಧಾನದ ಬದ್ಧತೆಗೆ ಇಂತಹ ವಿಧೇಯಕಗಳು ಧಕ್ಕೆಯನ್ನುಂಟುಮಾಡುತ್ತವೆಯೆ ? ಯಾರ್ಯಾರು ಏನನ್ನು ಮಾಡಲು ಶಕ್ತರು ಅಥವಾ ಅಶಕ್ತರು ಎಂಬ ಜ್ಞಾನದಿಂದ ಮಾತ್ರವೇ ಬದಲಾವಣೆ ಸಾಧ್ಯವಿಲ್ಲ. ಪ್ರತಿಯೊಬ್ಬರೂ ಸಕ್ರಿಯವಾಗಿ ಭಾಗವಹಿಸುವಂತಹ ವಾತಾವರಣವನ್ನು ರೂಪಿಸುವುದರಿಂದ ನಿರೀಕ್ಷಿತ ಫಲಗಳನ್ನು ದೊರಕಿಸಿಕೊಡಬಲ್ಲ ರಾಜಕೀಯ ಪ್ರಕ್ರಿಯೆಗಳು ರೂಪುಗೊಳ್ಳಬಲ್ಲವು, ಅಲ್ಲವೆ ?

ಅಂಗವಿಕಲತೆಯ ಸಮಸ್ಯೆಗೆ ಎರಡು ಮಾದರಿಗಳ ಅಡಿಯಲ್ಲಿ ಪರಿಹಾರ ಕಂಡುಕೊಳ್ಳುವ ಯತ್ನಗಳು ಸಾಗಿವೆ. (ಅ) ಆಯಾ ವೈಕಲ್ಯತೆಯನ್ನು ಸರಿಪಡಿಸಲು - ಸರಿದೂಗಿಸಲು ಅಗತ್ಯವಾದ ಚಿಕಿತ್ಸೆಯ ಆಧಾರದಲ್ಲಿ ನೋಡುವ 'ಚಿಕಿತ್ಸಾ ಮಾದರಿ'; (ಆ) ಇದಕ್ಕೆ ಪ್ರತಿಯಾಗಿ ಅಂಗವಿಕಲರ ಸಮಸ್ಯೆಗಳನ್ನು ಸಾಮಾಜಿಕ ಜವಾಬ್ದಾರಿಯಾಗಿ ಸ್ವೀಕರಿಸಿ, ಅವರೂ ಸಮಾನ ಜೀವನವನ್ನು ನಿರ್ವಹಿಸಲು ಅಗತ್ಯವಾದ ಸಾಮಾಜಿಕಪ್ರಜ್ಞೆ - ವಾತಾವರಣವನ್ನು ನಿರ್ಮಿಸಬೇಕು ಎನ್ನುವ 'ಸಾಮಾಜಿಕ ಮಾದರಿ.'

'ಚಿಕಿತ್ಸಾ ಮಾದರಿ' ಬರಿದೆ ಆರೋಗ್ಯಶಾಸ್ತ್ರದ ನೆರವು ಪಡೆದರೆ, ಜೀವನದ ಹಲವಾರು ಪ್ರಕ್ರಿಯೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಲು ಮಿತಿಗಳನ್ನು ವಿಧಿಸುವ ಅಂಗವಿಕಲತೆಯ ಜೊತೆಗೆ ಸಾಮಾಜಿಕ ವಾತಾವರಣವೂ ಪ್ರತಿಕೂಲವಾಗಿದ್ದರೆ ಉಂಟಾಗುವ ದುಸ್ತರತೆಯನ್ನು ಗುರುತಿಸಿ ಆರೋಗ್ಯಕರ ಸಮಾಜದ ನಿರ್ಮಾಣದತ್ತ ಸಾಮಾಜಿಕ ಮಾದರಿ ಒತ್ತು ನೀಡುತ್ತದೆ.

ಮೇಲಾಗಿ, ನಾನಾ ರೀತಿಗಳಲ್ಲಿ ಅಪಕ್ವವಾದ್ದು ಎಂದು ಪರಿಗಣಿಸಲಾಗುವ ನಮ್ಮ ಶಿಕ್ಷಣ ವ್ಯವಸ್ಥೆ ಎಲ್ಲ ಅಂಗಗಳು ಸರಿಯಾಗಿ ಇರುವವರನ್ನೇ ಅಲುಗಾಡಿಸಿಬಿಡುವಾಗ ನ್ಯೂನತೆಗಳಿಗೆ ತುತ್ತಾದವರ ಮಾನಸಿಕ ಮತ್ತು ದೈಹಿಕ ದೌರ್ಬಲ್ಯವನ್ನು ಇಮ್ಮಡಿ-ಮುಮ್ಮಡಿಗೊಳಿಸದೆ ? ಬೇರೆ ಮಕ್ಕಳಿಗೆ ಹೋಲಿಸಿದರೆ ಅಂಗವಿಕಲ ಮಕ್ಕಳ ಶಿಕ್ಷಣ ಮಧ್ಯದಲ್ಲಿ ನಿಂತುಹೋಗುವ ಸಾಧ್ಯತೆಯೇ ಹೆಚ್ಚು. ಅಂಗವಿಕಲ ಮಕ್ಕಳು ಪ್ರಾಥಮಿಕ ಶಾಲೆಯನ್ನು ಮೀರಿ ಮುಂದುವರಿಯುವ ನಿದರ್ಶನಗಳು ಅತಿ ಅಪರೂಪ. ದೈಹಿಕ-ಮಾನಸಿಕ ಅಂಗವಿಕಲರನ್ನು ಸಾಧಾರಣವಾಗಿ ದಾನ-ಧರ್ಮ



ಗಳಿಗೆ ಪರಮ ಯೋಗ್ಯ ವಸ್ತುಗಳಂತೆ ಪರಿಗಣಿಸಿ ಉಪಚರಿಸುವ ವಾಡಿಕೆ ನಮ್ಮ ನಡುವಿದೆ. ಸರಕಾರದ ರಕ್ಷಣೆಯಲ್ಲಿ ಸುರಕ್ಷಿತವಾಗಿರಬೇಕಾದ ಭಿಕ್ಷುಕರ ವಸತಿಗಳನ್ನೂ ರಿಯಲ್ ಎಸ್ಟೇಟ್ ದಂಧೆಗಳಿಗೆ ಬಳಸಿಕೊಳ್ಳುವ ಪ್ರಯತ್ನ; ಬಡತನದ ಬೇಗೆಗೆ ಸಿಲುಕಿರುವವರನ್ನು ಅಂಗಹೀನರನ್ನಾಗಿ ಪರಿವರ್ತಿಸುವ ಸರಕಾರಿ-ಖಾಸಗಿ ಚಿಕಿತ್ಸಾಲಯಗಳ ಹಿನ್ನೆಲೆಯಲ್ಲಿ ವ್ಯಕ್ತವಾಗುವ ವ್ಯಾಪಾರಿ ಮನೋಭಾವ ನಮಗೆಲ್ಲ ತಿಳಿದದ್ದೇ. ನಮ್ಮಲ್ಲಿರುವ ಎಲ್ಲ ಕಠಿಣ, ಮೃದು ಧೋರಣೆ-ನಿಯಮಗಳು, ದಾನ-ಧರ್ಮ, ಸಾಮಾಜಿಕ ಕಳಕಳಿಯ ಒಟ್ಟಾರೆ ಪ್ರಭಾವ ಇದು !

ಸಮನ್ವಯ ಶಿಕ್ಷಣದ ಉಪಯೋಗ ಸದೃಢ ಮಕ್ಕಳಿಗೂ ಉಂಟಾಗುತ್ತದೆಂದು ಪ್ರತಿಪಾದಿಸುವ ರಾಷ್ಟ್ರೀಯ-ಅಂತರರಾಷ್ಟ್ರೀಯ ನಿದರ್ಶನಗಳು ನಮ್ಮ ಮುಂದಿವೆ. ಸಹಜವಾಗಿಯೇ ಸಮಾಜದ ಎಲ್ಲ ವರ್ಗಗಳ - ಜನತೆಯ ಭಾಗವಹಿಸುವಿಕೆ, ಶೈಕ್ಷಣಿಕ ಪ್ರಗತಿಗಾಗಿ ಎಲ್ಲೆಲ್ಲೂ ಹಂಚಿಹೋಗಿರುವ - ಚದುರಿರುವ ಪ್ರಯತ್ನಗಳ ಒಗ್ಗಟ್ಟು, ವಿಶೇಷ ಮುತುವರ್ಜಿ - ಸಹಯೋಗ ಬಯಸುವ ಅಂಗವಿಕಲರು ತಮ್ಮ ಕುಟುಂಬ ಸಮೇತ ತಮ್ಮ ಅನುಭವಗಳನ್ನು, ಅಗತ್ಯಗಳನ್ನು, ನಿರೀಕ್ಷೆಗಳನ್ನು ಯಾವುದೇ ಅಂಜಿಕೆ-ಸಂಕೋಚಗಳಿಲ್ಲದೆ ವ್ಯಕ್ತಪಡಿಸುವ ಮತ್ತವುಗಳ ಪೂರೈಕೆಗೆ ಒತ್ತಾಯವನ್ನು ಒಡ್ಡಬಹುದಾದ ಒಂದು ವೇದಿಕೆಯ ರಚನೆ ಮುಖ್ಯವಾಗುತ್ತದೆ. ೧೪ ವರ್ಷದೊಳಗಿನ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ ಸ್ವಾಗತಾರ್ಹವೇ. ಕಲಿಯುವುದರಲ್ಲಿ ಹಿಂದೆ ಬಿದ್ದಿದ್ದಾರೆಂದೊ, ಅಥವಾ ಕಲಿಯುವಲ್ಲಿ ಕೆಲವು ಮಕ್ಕಳಿಗೆ ಸಹಜ ಎನಿಸಬಹುದಾದ ತೊಂದರೆಗಳಿವೆ ಎಂಬ ಕಾರಣಕ್ಕೋ ಮಕ್ಕಳಲ್ಲಿ ಭೇದ ಎಣಿಸುವುದು ಅಥವಾ ಅವರಲ್ಲೇ ಭೇದದ ಬೀಜವನ್ನು ಬಿತ್ತುವುದು ೨೧ನೇ ಶತಮಾನಕ್ಕೆ ಒಗ್ಗುವ ಮಾತಲ್ಲ. ಒಂದು ಮಗುವನ್ನು ಮತ್ತೊಂದು ಮಗುವಿನಿಂದ ರಕ್ಷಿಸುವಂತಹ ವಾತಾವರಣ ಆರೋಗ್ಯಕರ ಸಮಾಜದ ಲಕ್ಷಣವಂತೂ ಅಲ್ಲ. ಈ ಶತಕದ ಅಭಿವೃದ್ಧಿಯ ಗುರಿಗಳನ್ನು ಮುಟ್ಟುವ ಹಾದಿಯಲ್ಲಿ ವಿಕಲಾಂಗರನ್ನು ಸುರಕ್ಷಿತ ಶಾಲೆಗಳಿಗೆ ತಲುಪಿಸುವ ಕಾರ್ಯವೂ ಅತಿ ಮಹತ್ವದ್ದು. ಶಾಲೆ ಮತ್ತು ಕಾಲೇಜುಗಳಲ್ಲಿ ಒಟ್ಟಿಗೆ ಅಭ್ಯಾಸ ಮಾಡುವಂತಹ ವ್ಯವಸ್ಥೆ ಹಾಗೂ ಪರಿಣಾಮಕಾರಿ ಕಲಿಕೆಗೆ ಆಧುನಿಕ ತಂತ್ರಜ್ಞಾನಗಳ ವ್ಯಾಪಕ ಅಳವಡಿಕೆ ಈ ದಿಸೆಯಲ್ಲಿ ಪ್ರಾಮುಖ್ಯತೆಯನ್ನು ಪಡೆಯಬೇಕು.

**ಜಿ. ನಾಗಕುಮಾರ್, ಜಿ. ರವಿ**
ನಂ. ೮, ೧ನೇ ಮಹಡಿ, ಮುನಿಸ್ವಾಮಿ ಬಿಲ್ಡಿಂಗ್
ಸರಸ್ವತಿ ವಿದ್ಯಾಮಂದಿರದ ಎದುರು,
೧೫ನೇ ಅಡ್ಡರಸ್ತೆ, ಕಗ್ಗದಾಸಪುರ, ಸಿ. ವಿ. ರಾಮನ್ ನಗರ,
ಬೆಂಗಳೂರು - ೫೬೦ ೦೯೩



## ಅಭಿನಂದನೆ

**ಹಿರಿಯ ಪತ್ರಕರ್ತ ಶ್ರೀ ಸನತ್‌ಕುಮಾರ ಬೆಳಗಲಿ ಅವರಿಗೆ ನಗಡಕೇರಿ ಕಿಟ್ಟಪ್ಪಗೌಡ - ರುಕ್ಮಿಣಿ ದತ್ತಿ ಪ್ರಶಸ್ತಿ ನೀಡಿ ಗೌರವಿಸಲಾಗಿದೆ. 'ಹೊಸತು' ಲೇಖಕರೂ ಆದ ಅವರಿಗೆ ಪತ್ರಿಕೆಯು ಹಾರ್ದಿಕ ಅಭಿನಂದನೆಗಳನ್ನು ತಿಳಿಸಲು ಹರ್ಷಿಸುತ್ತದೆ.**

**— ಸಂ.**




# ಅಧಿಕ ಮಾಸದ ಪ್ರಾತ್ಯಕ್ಷಿಕೆ

**ಕ**ಳೆದ ತಿಂಗಳು ಸಂಜೆಯಲ್ಲೊಂದು ಮುಂಜಾವಿನಲ್ಲಿ ಒಂದು ಜೋಡಿ ಕಂಡೆವು. ಈಗ ಈ ಗ್ರಹಗಳು ದೂರ ಸರಿಯತೊಡಗಿರುವುದನ್ನು ನೋಡಬಹುದು. ಸಂಜೆಯ ಆಕಾಶದಲ್ಲಿ ಶನಿ ಮತ್ತು ಅದರ ಪಕ್ಕದ ಚಿತ್ರಾ ನಕ್ಷತ್ರ ಎರಡೂ ದಿಗಂತದ ಅಂಚಿಗೆ ಸರಿಯುವಂತೆ ಕಾಣುತ್ತವೆ. ಅವುಗಳ ಜೊತೆ ಇದ್ದ ಮಂಗಳ ಮುಂದೆ ಸರಿದು ತುಲಾ ರಾಶಿಯಲ್ಲಿ ಕಾಣುತ್ತಿದೆ. ಮುಂದಿನ ತಿಂಗಳು ಅದು ವೃಶ್ಚಿಕವನ್ನು ಪ್ರವೇಶಿಸಿ ಬಣ್ಣದಲ್ಲಿ ತನ್ನ ಪ್ರತಿಸ್ಪರ್ಧಿಯಾದ ಜ್ಯೇಷ್ಠಾ ನಕ್ಷತ್ರದ ಸಮೀಪ ಹಾದುಹೋಗಲಿದೆ. (ಜ್ಯೇಷ್ಠಾ ಎಂಬುದರ ಪಾಶ್ಚಾತ್ಯ ಹೆಸರು ಅಂಟಾರೆಸ್ - ಅಂದರೆ ಆರೆಸ್‌ನ ಪ್ರತಿಸ್ಪರ್ಧಿ - ಆರೆಸ್ ಎಂಬುದು ಯುದ್ಧ ದೇವತೆ ಮಂಗಳದ ಹೆಸರು)

ಮುಂಜಾವಿನಲ್ಲಿ ಜೋಡಿಯಾಗಿದ್ದ ಶುಕ್ರ ಮತ್ತು ಗುರು ಈಗ ಬೇರೆ ಬೇರೆ ಆಗಿವೆ. ರೋಹಿಣಿ ಮತ್ತು ಕೃತ್ತಿಕಾ ನಕ್ಷತ್ರಗಳ ಜೊತೆಗೆ ಗುರು ಗ್ರಹ ದಿನೇ ದಿನೇ ದಿಗಂತದಿಂದ ಮೇಲೆ ಏರುತ್ತಿದೆ. ೮ರ ಮುಂಜಾವು ಚಂದ್ರನೂ ಈ ಗುಂಪಿಗೆ ಸೇರುತ್ತದೆ. ಈ ಬಾರಿ ಎರಡು ಸಲ ಜನ್ಮಾಷ್ಟಮಿಯನ್ನು ಆಚರಿಸುತ್ತಿರುವುದು ನೆನಪಿರಬೇಕಲ್ಲವೇ ? ಕೃಷ್ಣ ಹುಟ್ಟಿದ ದಿನ ಚಂದ್ರ ರೋಹಿಣಿ ನಕ್ಷತ್ರದ ಪಕ್ಕದಲ್ಲಿ ಇತ್ತೆಂದು ಆ ಆಚರಣೆ. ಪ್ರತಿ ತಿಂಗಳೂ ಚಂದ್ರ ರೋಹಿಣಿಯ ಪಕ್ಕ ಕಾಣುತ್ತದೆಯಲ್ಲವೇ ? ಇನ್ನೊಂದು ಅಂಶವೂ ಇದೆ. ಅರ್ಧರಾತ್ರಿಯಲ್ಲಿ ಚಂದ್ರೋದಯವಾಗಬೇಕು; ಆಗ ರೋಹಿಣಿಯ ಪಕ್ಕ ಚಂದ್ರ ಇರಬೇಕು. (ವಸುದೇವ ನಡುರಾತ್ರಿಯಲ್ಲಿ ಕೂಸನ್ನು ಒಯ್ದ ಕತೆ ನೆನಪಿದೆಯಲ್ಲವೇ ?) ಇದೇ ಶ್ರಾವಣ ಮಾಸದ ವಿಶೇಷ. ಕಳೆದ ತಿಂಗಳು ಅರ್ಧ ಚಂದ್ರ ನಡುರಾತ್ರಿಯಲ್ಲಿ ಚಂದ್ರನ ಪಕ್ಕವೇ ಇತ್ತು. ಮತ್ತು ಈ ತಿಂಗಳು ಸ್ವಲ್ಪ ಪಕ್ಕಕ್ಕೆ ಸರಿದಿದೆ. ಇದನ್ನು ಸರಿಯಾಗಿ ಗಮನಿಸಿದಲ್ಲಿ ಚಂದ್ರ ಸೂರ್ಯನಿಗಿಂತ ಹಿಂದೆ ಬೀಳುತ್ತಿದೆ ಎಂಬ ಅಂಶ ತಿಳಿಯುತ್ತದೆ. ಮತ್ತೆ ಸೂರ್ಯ ಚಂದ್ರರನ್ನು ಸೇರಿಸಿ ಲೆಕ್ಕ ಸರಿಪಡಿಸಲು ಅಧಿಕ ಮಾಸ ಎಂಬ ಪರಿಕಲ್ಪನೆ ಅವಶ್ಯವಾಗುತ್ತದೆ. ಇದನ್ನು ತಿಳಿಯಲು ಈ ತಿಂಗಳ ಅಷ್ಟಮಿ ಸೂಕ್ತವಾಗಿದೆ. ನಡುರಾತ್ರಿಗೆ ಚಂದ್ರ ಉದಯಿಸುವುದನ್ನೇ ನಾವು ಚಾಂದ್ರಮಾಸದ ಕೊನೆಯ ಪಾದ ಎಂದೂ ಕರೆಯುತ್ತೇವೆ.



ಸೆಪ್ಟೆಂಬರ್ ೮ರಂದು ಚಂದ್ರ ಮತ್ತು ಗುರು ವೃಷಭರಾಶಿಯಲ್ಲಿ ಗೋಚರವಾಗುತ್ತದೆ

ಬರಿಗಣ್ಣಿಗೆ ಕಾಣುವ ಐದನೆಯ ಗ್ರಹ ಬುಧ ತಿಂಗಳ ಕೊನೆಗೆ ಸಂಜೆ ಚಿತ್ರಾ ನಕ್ಷತ್ರದ ಪಕ್ಕ ಕಾಣುವುದು. ಆದರೆ ಹುಡುಕುವುದು ಕಷ್ಟವೇ. ತಿಂಗಳ ಆರಂಭದಲ್ಲಿ ಮುಂಜಾವಿನಲ್ಲಿ ಕಾಣುವ ಬುಧ ತಿಂಗಳ ಕೊನೆಗೆ ಸಂಜೆಗೆ ಬರುವ ಕಾರಣ ೧೦ರಂದು ಸೂರ್ಯನ ಆಚೆ ಬದಿಯಿಂದ ಹಾದುಹೋಗುತ್ತದೆ. ಇದಕ್ಕೆ ಉಚ್ಚ ಯುತಿ ಎಂದು ಹೆಸರು. (ಅದು ಸೂರ್ಯ - ಭೂಮಿಗಳ ನಡುವೆ ಹಾದು ಹೋಗುವುದನ್ನು ನೀಚ ಯುತಿ ಎಂದು ಕರೆಯಲಾಗುತ್ತದೆ.)

ಮೋಡಗಳು ಬಿಡುವು ಕೊಟ್ಟರೆ ಆಕಾಶಗಂಗೆಯ ಸೌಂದರ್ಯವನ್ನು ಕಾಣಬಹುದು. ಧನು, ವೃಶ್ಚಿಕ ರಾಶಿಗಳನ್ನು ಗುರುತಿಸಲು ಪ್ರಯತ್ನಿಸಿ. ೨೦-೨೨ರ ಅವಧಿಯಲ್ಲಿ ಚಂದ್ರ ವೃಶ್ಚಿಕ ರಾಶಿಯ ಮೂಲಕ ಹಾದುಹೋಗುವುದನ್ನು ಕಾಣಬಹುದು. ಆಕಾಶಗಂಗೆಯ ಒಂದು ಭಾಗ ನೆತ್ತಿಯ ಮೇಲೆ ವೀಣಾ (ಲೈರಾ) ಪುಂಜದಲ್ಲಿ ಅಭಿಜಿತ್ (ವೇಗಾ) ನಕ್ಷತ್ರ ಮತ್ತು ಗರುಡ (ಅಕ್ವಿಲಾ)ದಲ್ಲಿ ಶ್ರವಣ (ಆಲ್ಟೇರ್), ರಾಜಹಂಸ (ಸಿಗ್ನಸ್)ನಲ್ಲಿ ದೆನೆಬ್ - ಈ ಮೂರು ನಕ್ಷತ್ರಗಳ ತ್ರಿಕೋಣದ ಮೂಲಕ ಹಾದು ಈಶಾನ್ಯದ ಕುಂತಿ (ಕೆಸಿಯೋಪಿಯಾ)ಯವರೆಗೂ ವಿಸ್ತರಿಸಿರುವುದನ್ನು ಕಾಣಬಹುದು. ವಾಯುವ್ಯದಲ್ಲಿ ಸಪ್ತರ್ಷಿಮಂಡಲ ಕಾಣುವುದು. ನೈರುತ್ಯದಲ್ಲಿ ಕಿನ್ನರ (ಸೆಂಟಾರಸ್) ಪುಂಜದ ಎರಡು ಪ್ರಕಾಶಮಾನ ನಕ್ಷತ್ರಗಳಾದ (ಆಲ್ಫಾ ಮತ್ತು ಬೀಟಾ) ಇವು ಮಾತ್ರ ಕಾಣುವುವು.

೨೨ರಂದು ವಿಷುವ - ಹಗಲು ರಾತ್ರಿಗಳ ಅವಧಿ ಸಮನಾಗುವ ದಿನ. ಅದಾದ ನಂತರ ಹಗಲಿನ ಅವಧಿ ಕಡಿಮೆಯಾಗುತ್ತಾ ಹೋಗುವುದು.

ಈ ತಿಂಗಳಲ್ಲಿ ಗುರು ಮತ್ತು ಮಂಗಳ ಗ್ರಹಗಳ ಆಚ್ಛಾದನೆಗಳು ಇವೆ - ಅಂದರೆ ಚಂದ್ರ ಅವುಗಳನ್ನು ಮರೆಮಾಡುತ್ತದೆ. ಆದರೆ ಈ ನೋಟ ನಮಗೆ ಸಿಗುವುದಿಲ್ಲ.

**ಖಗೋಳ ದಿನಚರಿ**

| | |
|---|---|
| ೧ | ಶುಕ್ರದ ಸಮೀಪ ಪುನರ್ವಸು ನಕ್ಷತ್ರ |
| ೭ | ಚಂದ್ರ - ಭೂಮಿ ನಡುವೆ ಗರಿಷ್ಠ ಅಂತರ |
| ೮ | ರೋಹಿಣಿ, ಚಂದ್ರ, ಗುರು - ಪುಟ್ಟಗುಂಪು* |
| | ಚಾಂದ್ರಮಾಸದ ಕೊನೆಯ ಪಾದ |
| ೧೦ | ಬುಧ ಗ್ರಹದ ಉಚ್ಚ ಯುತಿ |
| | (ಇದನ್ನು ಸೋಹೋ ವೆಬ್ ಸೈಟ್‌ನಲ್ಲಿ ನೋಡಬಹುದು) |
| ೧೨ | ಶುಕ್ರ - ಚಂದ್ರ ಜೋಡಿ* |
| ೧೬ | ಅಮಾವಾಸ್ಯೆ ೦೭:೪೧ಕ್ಕೆ |
| ೧೮ | ಶನಿ - ಚಂದ್ರ - ಚಿತ್ರಾ- ಇವುಗಳ ಪುಟ್ಟಗುಂಪು* |
| ೧೯ | ಚಂದ್ರ - ಭೂಮಿ ನಡುವೆ ಕನಿಷ್ಠ ಅಂತರ. ಮಂಗಳ ಚಂದ್ರ ಜೋಡಿ* |
| ೨೨ | ಶರದ್ ವಿಷುವ ೨೦:೧೯ಕ್ಕೆ (ಹಗಲು-ರಾತ್ರಿಗಳ ಅವಧಿ ಸಮ) |
| | ಚಾಂದ್ರಮಾಸದ ಮೊದಲ ಪಾದ |
| ೩೦ | ಹುಣ್ಣಿಮೆ ೦೯:೪೯ಕ್ಕೆ |

(* ಛಾಯಾಗ್ರಹಣಕ್ಕೆ ಸದವಕಾಶ)

**ಡಾ॥ ಬಿ. ಎಸ್. ಶೈಲಜಾ**
ಜವಾಹರ್‌ಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು - ೫೬೦ ೦೦೧




# ಪರಿಣಾಮಗಳು, ಪರಿಹಾರ ಮತ್ತು ನೀತಿ ನಿರೂಪಣೆ

ಡಾ|| ರಾಜೇಂದ್ರ ಪೋದ್ದಾರ

ಬರ, ಒಂದು ನಿರ್ದಿಷ್ಟ ಭೌಗೋಳಿಕ ಪ್ರದೇಶದಲ್ಲಿ ಹವಾಮಾನ ವೈಪರೀತ್ಯದಿಂದುಂಟಾಗುವ ಮಳೆಯ ಅಭಾವ, ಅಸಮರ್ಪಕ ಹಂಚಿಕೆ, ಅನಿಶ್ಚಿತತೆ ಅಥವಾ ಅಧಿಕ ನೀರಿನ ಬೇಡಿಕೆ ಅಥವಾ ಈ ಎಲ್ಲ ಕಾರಣಗಳಿಂದಾಗಿ ನಿರ್ಮಾಣವಾಗುವ ಒಂದು ಸಂಕೀರ್ಣ ನೈಸರ್ಗಿಕ ಪರಿಸ್ಥಿತಿ. ಅನೇಕ ಭೌತಿಕ, ಆರ್ಥಿಕ, ಸಾಮಾಜಿಕ ಹಾಗೂ ಮಾನವೀಯ ಅಂಶಗಳನ್ನೊಳಗೊಂಡಿರುವುದರಿಂದ ಬರದ ನಿಖರ ವ್ಯಾಖ್ಯಾನ ಕಠಿಣವಾಗಿದೆ. ಈ ಕೊರತೆ ಬರ ಪರಿಸ್ಥಿತಿಯನ್ನು ಪೂರ್ಣ ಪ್ರಮಾಣದಲ್ಲಿ ಅರ್ಥಮಾಡಿಕೊಳ್ಳುವುದಾಗಲೀ ಅಥವಾ ಸಮರ್ಪಕವಾಗಿ ನಿರ್ವಹಿಸುವಲ್ಲಿ ಅಡೆತಡೆಯಾಗಿದೆ. ಆದಾಗ್ಯೂ, ಭಾರತೀಯ ರಾಷ್ಟ್ರೀಯ ಕೃಷಿ ಆಯೋಗ (ಎನ್‌ಸಿಎ) ಹವಾಮಾನ ಬರ, ಕೃಷಿ ಬರ ಹಾಗೂ ಜಲ ಬರ ಎಂಬ ಮೂರು ವಿಧದ ಬರ ಪರಿಸ್ಥಿತಿಗಳನ್ನು ವಿವರಿಸುತ್ತದೆ. ಒಂದು ಭೂಪ್ರದೇಶದಲ್ಲಿ ಬಿದ್ದ ಮಳೆ ವಾಡಿಕೆಯ ಮಳೆಗಿಂತ ಪ್ರತಿಶತ ೨೫ಕ್ಕಿಂತಲೂ ಕಡಿಮೆಯಾಗಿರುವುದರಿಂದ ಹವಾಮಾನ ಬರದ ನಿರ್ಮಾಣವಾಗುತ್ತದೆ. ಕೃಷಿ ಕ್ಷೇತ್ರದಲ್ಲಿ ಬೆಳವಣಿಗೆ ಮತ್ತು ಮಾಗುವ ಹಂತದಲ್ಲಿ ಇದ್ದಾಗ ಸಮರ್ಪಕವಾದ ಮಳೆ ಅಥವಾ ತೇವಾಂಶದ ಕೊರತೆಯಿಂದಾಗಿ ಬೆಳೆಗಳು ಬಾಡಿ ಒಣಗಿದರೆ ಅದಕ್ಕೆ ಕೃಷಿ ಬರ ಎನ್ನಬಹುದು. ಅದೇರೀತಿ ಮಳೆಯಾಗದೆ, ದೀರ್ಘಕಾಲಿಕ ಹವಾಮಾನ ಬರದಿಂದ ನೀರಿನ ಮೂಲಗಳಾದ ಕೆರೆ, ತೊರೆ, ಹಳ್ಳ, ಕೊಳ್ಳಗಳು ಬತ್ತಿ ಗಂಭೀರ ನೀರಿನ ಅಭಾವದೊಂದಿಗೆ ಆ ಪ್ರದೇಶದಲ್ಲಿ ಅಂತರ್ಜಲ ಮಟ್ಟವೂ ಕುಸಿದಾಗ ಜಲಕ್ಷಾಮ ಉಂಟಾಗುತ್ತದೆ.

ಜಗತ್ತಿನ ಅನೇಕ ರಾಷ್ಟ್ರಗಳು ಕೃಷಿ ಪ್ರಧಾನವಾಗಿದ್ದು, ಪ್ರತಿ ಐದು ವರ್ಷಕ್ಕೊಮ್ಮೆ ಬರ ಎದುರಿಸುತ್ತವೆ. ಕೆಲವೊಮ್ಮೆ ಪ್ರತಿ ವರ್ಷವೂ ಬರದಿಂದ ಕೃಷಿ ಮತ್ತು ಕೃಷಿಯೇತರ ಕ್ಷೇತ್ರಗಳಲ್ಲಿ ಗಂಭೀರ ಪರಿಣಾಮಗಳನ್ನು ಅನುಭವಿಸುತ್ತವೆ. ಸುಮಾರು ೫೦ ಕೋಟಿಗಿಂತಲೂ ಅಧಿಕ ಸಂಖ್ಯೆಯ ಜನ ಜಗತ್ತಿನ ಬರ ಪೀಡಿತ ಪ್ರದೇಶಗಳಲ್ಲಿ ವಾಸವಾಗಿದ್ದರೆ, ಪ್ರತಿಶತ ೩೦ರಷ್ಟು ಭೂಪ್ರದೇಶ ನಿರಂತರ ಬರಕ್ಕೆ ತುತ್ತಾಗುತ್ತ ಮರಳುಗಾಡಾಗಿ ಮಾರ್ಪಡುತ್ತಿದೆ ಎಂಬುದೂ ಕೂಡಾ ಭಯಾನಕ ಸತ್ಯ. ಭಾರತದ ೩೨೮ ಮಿ. ಹೆಕ್ಟೇರ್ ಪ್ರದೇಶದ ಸುಮಾರು ಮೂರನೇ ಎರಡು ಭಾಗ ೧೦೦೦ ಮಿ.ಮಿ.ಗಿಂತಲೂ ಕಡಿಮೆ ಮಳೆಯನ್ನು ಪಡೆಯುತ್ತಿದ್ದು, ಅದು ಅಸಮರ್ಪಕವಾಗಿ ಹಂಚಿಕೆಯಾಗುತ್ತಿದ್ದು ಅಕಾಲಿಕವೂ ಮತ್ತು ಅನಿಶ್ಚಿತವೂ ಆಗಿದೆ. ದೇಶದ ಒಟ್ಟು ೧೪೦ ಮಿ. ಹೆಕ್ಟೇರ್ ಕೃಷಿ ಸಾಗುವಳಿ ಪ್ರದೇಶದ ಪ್ರತಿಶತ ೬೮ರಷ್ಟು ಪ್ರದೇಶ ಬರಗಾಲಕ್ಕೆ ಗುರಿಯಾಗುತ್ತಿದ್ದು, ಅದರ ಸುಮಾರು ಅರ್ಧದಷ್ಟು ಭಾಗ ನಿರಂತರವಾಗಿ ಗಂಭೀರ ಬರಗಾಲವನ್ನು ಎದುರಿಸುತ್ತಿದೆ.

ಕರ್ನಾಟಕವೂ ಕೂಡಾ ೨೦೦೧ರಿಂದೀಚೆಗೆ ನಿರಂತರವಾದ ಬರಗಾಲವನ್ನು ಎದುರಿಸುತ್ತಿದೆ. ಪ್ರಸ್ತುತ ೨೦೧೨-೧೩ರ ವರ್ಷದಲ್ಲಿ ೨೦೧೧ರ ಬರ ಮುಂದುವರಿದು ರಾಜ್ಯವು ಗಂಭೀರ ಕೃಷಿ, ಆರ್ಥಿಕ ಹಾಗೂ ಸಾಮಾಜಿಕ ಬವಣೆಗಳನ್ನು ಅನುಭವಿಸುವಂತಾಗಿದೆ. ೨೦೧೧ ಸೆಪ್ಟೆಂಬರ್‌ನಿಂದ ಜುಲೈ ೨೦೧೨ರವರೆಗಿನ ಮಳೆ ಅಭಾವ ೧೯೭೧ ರಿಂದ ಇಲ್ಲಿಯವರೆಗಿನ ಅವಧಿಯ ಅತ್ಯಂತ ಹೆಚ್ಚಿನ ಪ್ರಮಾಣದ ಅಭಾವವೆಂದು ಅಂದಾಜು ಮಾಡಲಾಗಿದೆ. ಅದೇರೀತಿ ಜೂನ್ ೧, ೨೦೧೨ರಿಂದ ಜುಲೈ ೩೧, ೨೦೧೨ರವರೆಗಿನ ಮಳೆ ಅಭಾವ ಕೂಡಾ ೧೯೭೧ರಿಂದ ಇಲ್ಲಿಯವರೆಗಿನ ಅವಧಿಯ ಅತ್ಯಂತ ಹೆಚ್ಚಿನ ಅಭಾವ ಎಂದು ಪರಿಗಣಿಸಲಾಗಿದೆ. ೨೦೧೧ರ ಒಟ್ಟು ಮಳೆ ಅಭಾವ ವಾಡಿಕೆ ಮಳೆಗಿಂತಲೂ ಪ್ರತಿಶತ ೨೦ಕ್ಕಿಂತಲೂ ಹೆಚ್ಚಾಗಿದ್ದುದರಿಂದ ರಾಜ್ಯ ಸರಕಾರವು ೨೦೧೧ನೇ ಇಸ್ವಿಯಲ್ಲಿ ೨೪ ಜಿಲ್ಲೆಗಳ ೧೨೩ ತಾಲೂಕುಗಳನ್ನು ಬರಪೀಡಿತ ಪ್ರದೇಶವೆಂದು ಘೋಷಿಸಿತ್ತು. ಈ ವರ್ಷ (೨೦೧೨-೧೩) ೨೬ ಜಿಲ್ಲೆಗಳಲ್ಲಿನ ೧೪೨ ತಾಲೂಕುಗಳ ಪ್ರದೇಶವನ್ನು ಬರಗಾಲಪೀಡಿತ ಪ್ರದೇಶವೆಂದು ಘೋಷಿಸಲಾಗಿದೆ. ೨೦೧೨ರ ಮುಂಗಾರು ಪೂರ್ವ ಮಳೆ ಪ್ರತಿಶತ ೨೦ರಷ್ಟು ಮತ್ತು ಜೂನ್ ೧ರಿಂದ ಜುಲೈ ೩೧ರವರೆಗಿನ ಮಳೆ ವಾಡಿಕೆಗಿಂತ ಪ್ರತಿಶತ ೪೯ರಷ್ಟು ಕಡಿಮೆಯಾಗಿದೆ. ೨೦೧೨ರ ಜುಲೈ ಅಂತ್ಯದವರೆಗಿನ ಗುರಿಗೆ ಹೋಲಿಸಿದಾಗ ಕೇವಲ ಪ್ರತಿಶತ ೪೭ರಷ್ಟು ಭೂಮಿಯಲ್ಲಿ ಮಾತ್ರ ಬಿತ್ತನೆಯನ್ನು ಕೈಗೊಳ್ಳಲಾಗಿದೆ. ಮುಂಗಾರು ಪ್ರಾರಂಭವಾದ ನಂತರ ತಡವಾಗಿ ಬಿತ್ತನೆ ಮಾಡಿದ ಸುಮಾರು ೧೩.೨೦ ಲಕ್ಷ ಹೆ. ಬೆಳೆ ತೀವ್ರ ತೇವಾಂಶ ಕೊರತೆಯನ್ನು ಅನುಭವಿಸುತ್ತಿದ್ದು, ಕೇವಲ ಪ್ರತಿಶತ ೫೦ರಷ್ಟು ಮಾತ್ರ ಇಳುವರಿಯನ್ನು ಪಡೆಯುವ ಸಾಧ್ಯತೆ ಇದೆ. ಈ ವರ್ಷದ ಬರ ಪರಿಹಾರಕ್ಕಾಗಿ ಈಗಾಗಲೇ ರಾಜ್ಯ ಸರಕಾರವು ರೂ. ೧೧,೪೯೯/- ಕೋಟಿ ಬೇಡಿಕೆಯನ್ನು ಕೇಂದ್ರ ಸರಕಾರಕ್ಕೆ ಸಲ್ಲಿಸಿದೆ.

**ಬರದ ಪರಿಣಾಮಗಳು**

ನೈಸರ್ಗಿಕ, ಭೌತಿಕ ಹಾಗೂ ಮಾನವೀಯ ಅಂಶಗಳ ಪರಸ್ಪರ ಅಂತರ್‌ಸಂಬಂಧಗಳಿಂದಾಗಿ ಬರದ ಪರಿಣಾಮಗಳು ಸಂಕೀರ್ಣವಾಗಿ ಇರುತ್ತವೆ. ಬರದಿಂದಾಗಿ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಕೃಷಿ ಕ್ಷೇತ್ರದ ಉತ್ಪಾದನೆ ಮೇಲೆ ಅವಲಂಬಿತವಾಗಿರುವ ಉದ್ದಿಮೆಗಳು ಕಚ್ಚಾವಸ್ತುಗಳ ಕೊರತೆಯಿಂದ ನಷ್ಟವನ್ನು ಅನುಭವಿಸಬೇಕಾಗುತ್ತದೆ. ಬರದಿಂದಾದ ಬೆಳೆ ಹಾನಿ ಆಹಾರ ಅಭದ್ರತೆಯನ್ನು ಉಂಟುಮಾಡುತ್ತದೆ ಮತ್ತು ಹಣದುಬ್ಬರ ಕೂಡಾ ಉಲ್ಬಣಿಸುತ್ತದೆ. ಇವು ಸಮಾಜದ ನಿಮ್ನ ಹಾಗೂ ಅಸಹಾಯಕ ಜನತೆಯ ಮೇಲೆ ದುಷ್ಪರಿಣಾಮಗಳನ್ನು ಬೀರುತ್ತವೆ. ಬರ ಪರಿಸ್ಥಿತಿಯಲ್ಲಿ ಜನರಿಗಿಂತಲೂ ಜಾನುವಾರುಗಳು ಅತ್ಯಂತ ಕಷ್ಟ ಅನುಭವಿಸುತ್ತವೆ. ಕುಡಿಯುವ ನೀರು ಮತ್ತು ಮೇವಿನ ಕೊರತೆಯಿಂದ ಮೂಕ ಪ್ರಾಣಿಗಳ ಕಷ್ಟ ನೋಡಲು ವೇದನಾಮಯವಾಗಿರುತ್ತದೆ. ಈ ಹಿಂದೆ ಬರ ಪರಿಸ್ಥಿತಿಯಿಂದ ದೇಶ ಸಾಕಷ್ಟು ಆರ್ಥಿಕ ನಷ್ಟವನ್ನು ಅನುಭವಿಸಿದೆ. ಉದಾಹರಣೆ ೧೯೭೯ರಲ್ಲಿ ಉಂಟಾದ ಬರಗಾಲದಲ್ಲಿ ಪ್ರತಿಶತ ೨೦ರಷ್ಟು ಆಹಾರ ಉತ್ಪಾದನೆ ಕಡಿತವಾಗಿತ್ತು. ನೀರಿನ ಅಭಾವ ಮತ್ತು ಕುಂಠಿತ ಕೃಷಿ ಚಟುವಟಿಕೆಗಳಿಂದಾಗಿ ಗ್ರಾಮೀಣ ಪ್ರದೇಶಗಳಲ್ಲಿ ನಿರುದ್ಯೋಗ ಸಮಸ್ಯೆ ಸೃಷ್ಟಿಯಾಗುತ್ತದೆ. ನಿರುದ್ಯೋಗ ವಲಸೆಗೆ ದಾರಿ ಮಾಡಿಕೊಡುತ್ತ ಕೌಟುಂಬಿಕ ಕಲಹ ಹಾಗೂ ವಿಘಟನೆಯಂತಹ ಸಮಸ್ಯೆಗಳಿಗೆ ಎಡೆಮಾಡಿಕೊಡುತ್ತದೆ. ಅಂತೂ, ಭೌತಿಕ ಜಗತ್ತಿನ ಬರ ಅಂತಿಮವಾಗಿ ಸಾಮಾಜಿಕ ಸಮಸ್ಯೆಗಳಲ್ಲಿ ಪರ್ಯಾವಸಾನಗೊಳ್ಳುತ್ತದೆ.

೨೦೧೨-೧೩ರ ಬರ ಪರಿಸ್ಥಿತಿಯನ್ನು ಅವಲೋಕಿಸಿದ ಯೋಜನಾ ಆಯೋಗವು ರಾಷ್ಟ್ರೀಯ ಒಟ್ಟು ಆದಾಯ ಬೆಳವಣಿಗೆ ಗತಿಯನ್ನು ಕೇವಲ ವಾರ್ಷಿಕ ಪ್ರತಿಶತ ೬ಕ್ಕೆ ಕಡಿಮೆಗೊಳಿಸಿರುವುದು ಕಳವಳಕಾರಿಯಾಗಿದೆ. ಅದೇ ರೀತಿ ಕೇಂದ್ರ ಬ್ಯಾಂಕ್ ಕೂಡಾ ಬೆಳವಣಿಗೆ ಗತಿಯನ್ನು ವಾರ್ಷಿಕ ಪ್ರತಿಶತ ೭.೩ರಿಂದ ಪ್ರತಿಶತ ೬.೫ಕ್ಕೆ ಕಡಿಮೆಗೊಳಿಸಿದೆ. ಈ ರೀತಿಯ ಕುಂಠಿತ ರಾಷ್ಟ್ರೀಯ ಆದಾಯ ಬೆಳವಣಿಗೆಯು ದೇಶದ ದೀರ್ಘಕಾಲೀನ ಅಭಿವೃದ್ಧಿ, ವಿಶೇಷವಾಗಿ ೧೨ನೇ ಪಂಚವಾರ್ಷಿಕ ಯೋಜನೆ (೨೦೧೨-೧೭)ಯ ಫಲಿತಾಂಶಗಳ ಮೇಲೆ ಋಣಾತ್ಮಕ ಪರಿಣಾಮಗಳನ್ನು ಬೀರಲಿದೆ. ಬರದ ಅತ್ಯಂತ ನಿಕೃಷ್ಟ ಪರಿಣಾಮಗಳನ್ನು ರೈತರ ಆತ್ಮಹತ್ಯೆಗಳಲ್ಲಿ ಕಾಣಬಹುದಾಗಿದೆ. ಇತ್ತೀಚೆಗೆ ಕೇಂದ್ರ ಸರಕಾರವೇ ಒಪ್ಪಿಕೊಂಡಂತೆ ಬರ ಮತ್ತು ಸಂಬಂಧಿತ ಕಾರಣಗಳಿಂದಾಗಿ ದೇಶದಲ್ಲಿ ೨೦೧೧-೧೨ರಲ್ಲಿ ಒಟ್ಟು ೧೩೨ ರೈತರು ಅಸುನೀಗಿದ್ದಾರೆ. ಇದು ಅಸಹಜ ಎನಿಸಿದರೂ ಸತ್ಯವಾಗಿದೆ. ಈಗಾಗಲೇ ರೈತರ ಆತ್ಮಹತ್ಯೆ ವಿಷಯ ಶಾಸನ ಸಭೆಗಳ ಒಳಗೂ ಹೊರಗೂ ಸಾಕಷ್ಟು ಚರ್ಚೆಗೊಳಗಾಗಿದ್ದು, ಸರಕಾರಗಳು ಈ ಕಟುಸತ್ಯವನ್ನು ಸವಾಲಾಗಿ ಸ್ವೀಕರಿಸಿ ಕೃಷಿ ದುಃಸ್ಥಿತಿಯನ್ನು ನಿವಾರಿಸಲು ಮುಂದಾಗಬೇಕಾಗಿದೆ.

**ಬರ ನಿರ್ವಹಣೆಗೊಂದು ರಾಷ್ಟ್ರೀಯ ನೀತಿ ಬೇಕು**

ಜಗತ್ತಿನ ಬಹುತೇಕ ರಾಷ್ಟ್ರಗಳಲ್ಲಿ ರಾಷ್ಟ್ರೀಯ ಬರ ನೀತಿ ಇಲ್ಲದಿರುವುದು ವಿಷಾದನೀಯ ವಾಗಿದೆ. ಯಾವುದೇ ನೈಸರ್ಗಿಕ ವಿಕೋಪಕ್ಕೆ ಸ್ಪಂದಿಸಿದಂತೆ ಬರ ಪರಿಸ್ಥಿತಿಗೂ ಕೂಡಾ ತಾತ್ಕಾಲಿಕ ಪರಿಹಾರ ಕಾರ್ಯಕ್ರಮಗಳ ರೂಪದಲ್ಲಿ ಸ್ಪಂದಿಸುವುದು ಸರ್ವೇಸಾಮಾನ್ಯ ವಾಗಿದೆ. ಭಾರತ ಅಥವಾ ಕರ್ನಾಟಕ ಇಂತಹ ತಾತ್ಕಾಲಿಕ ಧೋರಣೆಗೆ ಹೊರತಾಗಿಲ್ಲ. ಒಂದು ಸ್ಪಷ್ಟವಾದ ರಾಷ್ಟ್ರೀಯ ಬರ ಪರಿಹಾರ ನೀತಿಯ ಅನುಪಸ್ಥಿತಿಯಲ್ಲಿ ಸರಕಾರಗಳು ಜನಪ್ರಿಯ ಕಾರ್ಯಕ್ರಮಗಳಿಗೆ ಶರಣಾಗುತ್ತವೆ. ಮತ ಬ್ಯಾಂಕಿನ ಆಧಾರದ ಮೇಲೆ ನಡೆಯುವ ಜನತಾಂತ್ರಿಕ ವ್ಯವಸ್ಥೆಯಡಿಯಲ್ಲಿ ಮತ ಪೈಪೋಟಿ ನಡೆಯುವುದು ಸಹಜ, ಆದರೆ ಮಾನವೀಯ ಬಿಕ್ಕಟ್ಟುಗಳೊಂದಿಗೆ ಚೆಲ್ಲಾಟ ಅಕ್ಷಮ್ಯ. ಆದಾಗ್ಯೂ ಅನೇಕ ಸಲ ನಮ್ಮ ದೇಶದಲ್ಲಿ ಹೀಗಾಗುವುದು ನಿಜ. ಕೇಂದ್ರದಲ್ಲಿ ಒಂದು ಪಕ್ಷ ಅಧಿಕಾರ ಹಿಡಿದುಕೊಂಡಿದ್ದರೆ, ರಾಜ್ಯಗಳಲ್ಲಿ ವಿವಿಧ ಸಿದ್ದಾಂತ,



ರಾಜಸ್ತಾನಕ್ಕೆ ಕರ್ನಾಟಕದಿಂದ ಹೋದ ನಿಯೋಗ ಡಾ|| ರಾಜೇಂದ್ರ ಸಿಂಗ್ ಅವರ ಜೊತೆ

ಧೋರಣೆಗಳ ಪಕ್ಷಗಳ ಸರಕಾರಗಳು ಭಿನ್ನ ಉದ್ದೇಶಗಳಿಂದ ಅಧಿಕಾರ ನಡೆಸುತ್ತಿರುವುದರಿಂದ ಪೈಪೋಟಿ ಹಾಗೂ ಸಂಘರ್ಷ ಉಂಟಾಗುವುದು ಸಹಜ. ಇವುಗಳಿಗೆ ಅವಕಾಶ ಮಾಡಿಕೊಡದಂತಹ ವಸ್ತುನಿಷ್ಠವಾದ ಒಂದು ರಾಷ್ಟ್ರೀಯ ಬರ ಪರಿಹಾರ ನೀತಿ ನಮಗಿಂದು ಬೇಕಾಗಿದೆ. ಸ್ವಾತಂತ್ರ್ಯಾನಂತರ ದೇಶದಲ್ಲಿ ಬರ ಪರಿಹಾರಕ್ಕಾಗಿ ಅನೇಕ ಸಂಸ್ಥೆಗಳು ಸಾವಿರಾರು ಕೋಟಿ ಮೊತ್ತದ ಸಾರ್ವಜನಿಕ ಅನುದಾನದ ಆಶ್ರಯದಲ್ಲಿ ಕಾರ್ಯನಿರ್ವಹಿಸುತ್ತಿವೆ. ಬರ ನಿರ್ವಹಣೆಯ ಹೆಸರಿನಲ್ಲಿ ನೂರಾರು ಕಾರ್ಯಕ್ರಮಗಳನ್ನು ಕೂಡಾ ಹಮ್ಮಿಕೊಳ್ಳಲಾಗಿದೆ. ಹಾಗೆಯೇ, ಅನೇಕ ಪರಿಣಿತರು ಕೂಡಾ ಈ ಸಂಸ್ಥೆಗಳು ಹಾಗೂ ಕಾರ್ಯಕ್ರಮಗಳೊಂದಿಗೆ ಗುರುತಿಸಿಕೊಂಡಿದ್ದಾರೆ. ಆದಾಗ್ಯೂ, ಈ ಎಲ್ಲ ತುಂಡು ಪ್ರಯತ್ನಗಳಿಂದ ಸಾಧಿಸಬೇಕಾಗಿದ್ದನ್ನು ಸಾಧಿಸಲಾಗಿಲ್ಲ ಅಲ್ಲದೇ ಬರದಂತಹ ವಿಪತ್ತಿನ ಹೊಡೆತದಿಂದ ತಪ್ಪಿಸಿಕೊಳ್ಳಲಾಗಿಲ್ಲ ಎಂದು ಹೇಳಬಹುದು.

ಈ ಕಾರಣಗಳಿಗಾಗಿ, ಕ್ಷಣಿಕ ಪ್ರಯತ್ನಗಳನ್ನು ಬದಿಗಿರಿಸಿ ಶಾಶ್ವತ ಪರಿಹಾರಕ್ಕಾಗಿ ರಾಷ್ಟ್ರೀಯ ಮಟ್ಟದ ಬರ ಪರಿಹಾರ ನೀತಿ ನಿರೂಪಣೆಯ ಅವಶ್ಯಕತೆ ಎದ್ದು ಕಾಣುತ್ತಿದೆ, ಮಾಹಿತಿ ಕ್ರಾಂತಿಯ ಸಂದರ್ಭದಲ್ಲಿ ಪ್ರತಿ ಸಲ ನೈಸರ್ಗಿಕ ವಿಕೋಪಗಳು ಬಂದೊದಗಿದಾಗ ಉಂಟಾಗುವ ಅಪಾರ ಕಷ್ಟನಷ್ಟಗಳ ಮಾಹಿತಿ ಪ್ರತಿ ಮನೆಗೆ ಮತ್ತು ಮನಗಳಿಗೆ ಮುಟ್ಟುತ್ತಿದ್ದು, ಇಂತಹ ಸಂದಿಗ್ಧ ಮಾನವೀಯ ದುಃಸ್ಥಿತಿಯ ಪರಿಹಾರಕ್ಕಾಗಿ ಕಲ್ಯಾಣ ಸರಕಾರಗಳು ಮಾಡುತ್ತಿರುವುದೇನು ಎಂಬ ಪ್ರಶ್ನೆ ನಮ್ಮೆದುರಾಗುತ್ತದೆ. ನೂತನ ಧೋರಣೆಯ ಸಮಗ್ರ ರಾಷ್ಟ್ರೀಯ ಬರ ಪರಿಹಾರ ನೀತಿಯು ಬರದಂತಹ ನೈಸರ್ಗಿಕ ವಿಕೋಪಗಳಿಗೆ ಸಮರ್ಪಕವಾದ ಉತ್ತರ ನೀಡಬಹುದಾಗಿದೆ.

ಅಮೇರಿಕಾ ಮತ್ತು ಆಸ್ಟ್ರೇಲಿಯಾ ದೇಶಗಳು ತಮ್ಮ ರಾಷ್ಟ್ರೀಯ ಬರ ನಿರ್ವಹಣೆ ನೀತಿಗಳಲ್ಲಿ ಅಳವಡಿಸಿಕೊಂಡಂತೆ ಬರ ಒಂದು ಭಯಂಕರ ಅನಾಹುತವೆಂದು ಪರಿಗಣಿಸದೆ ಅದೊಂದು ಸಾಮಾಜಿಕ ಆರ್ಥಿಕ ಅಭಿವೃದ್ಧಿಗೆ ಆಪತ್ತು ಮೂಡಿಸುವಂತಹ ಹವಾಮಾನ ವೈಪರೀತ್ಯ ಎಂದು ಪರಿಗಣಿಸಿದರೆ ಪರಿಹಾರಕ್ಕೆ ಸಮರ್ಪಕ ಸೂತ್ರಗಳು ದೊರೆಯುತ್ತವೆ. ಅಲ್ಲಿರುವ ಪೂರ್ವ ಸಿದ್ಧತೆ, ಸ್ವಾವಲಂಬನೆ ಹಾಗೂ ಆಪತ್ತು ನಿರ್ವಹಣೆ ಎಂಬ ವಸ್ತುನಿಷ್ಠ ಅಂಶಗಳು ನಮಗೆ ಮಾದರಿಯಾಗಬಹುದು. ಶತಮಾನಗಳಿಂದ ಎದುರಿಸಿದ ಮತ್ತು ಪ್ರಸ್ತುತ ಎದುರಿಸುತ್ತಿರುವ ಸವಾಲುಗಳು ಮತ್ತು ಅವುಗಳಿಂದ ಕಲಿತ ಪಾಠಗಳು ಬರ ನೀತಿಗೆ ಮಾರ್ಗದರ್ಶಿಯಾಗಬೇಕು. ಈ ನೀತಿಯಲ್ಲಿ ರಾಷ್ಟ್ರೀಯ ನೈಸರ್ಗಿಕ ಸಂಪನ್ಮೂಲಗಳ ಬಳಕೆ ಸಾಮಾನ್ಯ ಅಭಿವೃದ್ಧಿ ಮತ್ತು ವಿಕೋಪಗಳ ನಿರ್ವಹಣೆಗೆ ಪೂರಕವಾಗಿರುವಂತಿರಬೇಕು. ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಕೆಲವೇ ಜನರ ದುರಾಶೆಗಳಿಗೆ ರಾಷ್ಟ್ರೀಯ ನೈಸರ್ಗಿಕ ಸಂಪನ್ಮೂಲಗಳು ಬಳಕೆಯಾಗುತ್ತಿದ್ದು, ಬರದ ಬವಣೆಗಳು ಉಲ್ಬಣವಾಗಲು ದಾರಿಮಾಡಿ ಕೊಡುತ್ತವೆ. ರಾಷ್ಟ್ರಮಟ್ಟದಲ್ಲಿ ಭೂಮಿ, ನೀರು, ಅರಣ್ಯ ಮತ್ತಿತರ ಸಂಪತ್ತಿನ ಸುಸ್ಥಿರ ಬಳಕೆಗೆ ಅವಕಾಶ ಕಲ್ಪಿಸಬೇಕು.

ರಾಷ್ಟ್ರೀಯ ನೀತಿಗೆ ಪೂರಕವಾಗುವಂತೆ ಕಾನೂನಿನ, ಆಡಳಿತಾತ್ಮಕ ಹಾಗೂ ಸಾಂಸ್ಥಿಕ ರಚನೆಯಾಗಬೇಕು. ಸಾಂಸ್ಥಿಕ ರಚನೆಯು ಪರಿಹಾರ ಅನುಷ್ಠಾನದಲ್ಲಿ ಬೇಕಾದ ಅತ್ಯವಶ್ಯಕ ಸಂಯೋಜನೆ ಮತ್ತು ಸಮನ್ವಯಗಳನ್ನು ಸಾಧಿಸುವಂತಿರಬೇಕು. ಇಂತಹ ಯೋಜನೆಗಳ ತಯಾರಿಕೆಯಲ್ಲಿ ಸಂಬಂಧಿತ ಎಲ್ಲ ಹಿತಾಸಕ್ತಿಗಳನ್ನು - ಬಾಧಿತರು, ಸರಕಾರಿ ಸಂಸ್ಥೆಗಳು, ಸರಕಾರೇತರ ಸಂಘ ಸಂಸ್ಥೆಗಳನ್ನು, ಜನಪ್ರತಿನಿಧಿಗಳನ್ನು ತೊಡಗಿಸಿಕೊಳ್ಳುವುದರಿಂದ ಮುಂಬರುವ ಸವಾಲುಗಳಿಗೆ ಪರಿಹಾರ ಕಂಡುಕೊಳ್ಳಬಹುದು. ಬರ ನಿರ್ವಹಣೆಗೆ ಸೂಕ್ತ ಯೋಜನೆಗಳೇ ಮೂಲಸ್ತಂಭ. ಪರಿಹಾರ ಮತ್ತು ಪುನರ್ವಸತಿ ಅನುಷ್ಠಾನದಲ್ಲಿ ಎದುರಾಗಬಹುದಾದ ಎಡರು-ತೊಡರುಗಳಿಗೆ ಯೋಜನಾ ಹಂತದಲ್ಲಿಯೇ ಪರಿಹಾರ ಕಂಡುಕೊಳ್ಳುವಂತಿರಬೇಕು. ಬರ ನಿರ್ವಹಣೆ ಯೋಜನೆಗಳು, ಬರ ತಡೆ ಉಪಾಯಗಳು, ಅನುಷ್ಠಾನ ವಿವರಗಳು ರಾಷ್ಟ್ರೀಯ ಮಟ್ಟದಲ್ಲಿದ್ದು ಸ್ಥಳೀಯ ಸಂಸ್ಥೆಗಳು ಅನುಷ್ಠಾನ ಮತ್ತು ಸಮನ್ವಯವನ್ನು ಸಾಧಿಸಬಹುದು.

ಈ ಬರ ನೀತಿಯಲ್ಲಿ ಕ್ಷಿಪ್ರ ಮುನ್ಸೂಚನೆಗಳಿಗೆ ಅನುಸಾರವಾಗಿ ಬರ ತಡೆಗಟ್ಟುವ ಕಾರ್ಯಕ್ರಮಗಳ ಸಿದ್ಧತೆ ಮಾಡಿಕೊಳ್ಳಬಹುದು. ಬರ ತಡೆಗಟ್ಟುವ ಅನೇಕ ಭೌತಿಕ, ಸಾಂಸ್ಥಿಕ ಹಾಗೂ ಕೃಷಿ ಹಾಗೂ ನೀರಿನ ಸಮಸ್ಯೆಗಳಿಗೆ ಪರಿಹಾರ ಮಾರ್ಗೋಪಾಯಗಳನ್ನು ಅಳವಡಿಸಿಕೊಳ್ಳಬೇಕಾಗುತ್ತದೆ. ಕೃಷಿಗೆ ಸಂಬಂಧಿಸಿದಂತೆ, ಮಣ್ಣು ನೀರು, ಬೆಳೆ ಪದ್ಧತಿ, ಸಮಗ್ರ ಕೃಷಿ ಪದ್ಧತಿ ಹಾಗೂ ಇನ್ನೂ ಅನೇಕ ಬರ ಪರಿಹಾರ ತಂತ್ರಜ್ಞಾನಗಳ ಅಳವಡಿಕೆಗೆ ಆಸ್ಪದವಿರಬೇಕು. ಶಾಶ್ವತ ಪರಿಹಾರದ ದೃಷ್ಟಿಯಿಂದ ಬರ ತಡೆಗಟ್ಟುವ ನಿಟ್ಟಿನಲ್ಲಿ ಜಲ ಸಂಪನ್ಮೂಲದ ಸಂರಕ್ಷಣೆ ಮತ್ತು ಸೂಕ್ತ ಬಳಕೆ ಪ್ರಮುಖ ಪಾತ್ರ ವಹಿಸುತ್ತದೆ. ಈ ನಿಟ್ಟಿನಲ್ಲಿ ರಾಷ್ಟ್ರೀಯ ಜಲನೀತಿಯಲ್ಲಿ ಸುಸ್ಥಿರ ಹಾಗೂ ಶಾಶ್ವತ ಪರಿಹಾರ ಅಂಶಗಳನ್ನು ಅಳವಡಿಸಿಕೊಂಡರೆ ರಾಷ್ಟ್ರಮಟ್ಟದ ವಿವಿಧ ಜನಪರ ನೀತಿಗಳು ಒಂದಕ್ಕೊಂದು ಪೂರಕವಾಗಿರಲು ಸಾಧ್ಯವಾಗುತ್ತದೆ.

ಭಾರತದಲ್ಲಿ ಶತಮಾನಗಳಿಂದ ನೈಸರ್ಗಿಕ ವಿಕೋಪ, ಹವಾಮಾನ ವೈಪರೀತ್ಯ ಹಾಗೂ ಬರಗಳನ್ನು ಜನತೆ ತಮ್ಮ ಪಾರಂಪರಿಕ ಜ್ಞಾನ ಹಾಗೂ ಸಾಮೂಹಿಕ ಪ್ರಯತ್ನಗಳ ಮೂಲಕ ನಿಭಾಯಿಸಿರುವುದು ಐತಿಹಾಸಿಕ ಸತ್ಯ. ಜೊತೆಗೆ ಇತ್ತೀಚಿನ ದಿನಗಳಲ್ಲಿ ಭಾರತ ಬಾಹ್ಯಾಕಾಶ ವಿಜ್ಞಾನ ಹಾಗೂ ತಂತ್ರಜ್ಞಾನಗಳಲ್ಲಿ ಅಪಾರವಾದ ಜ್ಞಾನ ಸಂಪಾದಿಸಿಕೊಂಡಿದೆ. ನೂತನ ಬರ ನೀತಿಯು ದೇಶದ ಪಾರಂಪರಿಕ ಬುದ್ಧಿ, ಕೌಶಲ್ಯ ಹಾಗೂ ಆಧುನಿಕ ತಂತ್ರಜ್ಞಾನಗಳ ಸಮನ್ವಯ ಸಾಧಿಸುವ ಅವಶ್ಯಕತೆ ಇದೆ.

ಪಾರಂಪರಿಕ ಜ್ಞಾನ, ಕೌಶಲ್ಯ ಹಾಗೂ ಸಮುದಾಯದ ಸಾಂಘಿಕ ಶಕ್ತಿಯನ್ನು ಬಳಸಿಕೊಂಡು ರಾಜಸ್ಥಾನದಲ್ಲಿ ಡಾ|| ರಾಜೇಂದ್ರ ಸಿಂಗ್ ಹಾಗೂ ಮಹಾರಾಷ್ಟ್ರದ ರಾಲೆಗಾಂವ್ ಸಿದ್ದಿಯಲ್ಲಿ ಅಣ್ಣಾ ಹಜಾರೆಯವರು ಬರ ನಿರ್ವಹಣೆಗೆ ಶಾಶ್ವತ ಪರಿಹಾರ ತೋರಿಸಿಕೊಟ್ಟು ಜಗತ್ತಿಗೆ ಮಾದರಿಯಾಗಿದ್ದಾರೆ. ರಾಜೇಂದ್ರ ಸಿಂಗ್ ಅವರು ಜಲ ಸಂಪನ್ಮೂಲ ಸಂರಕ್ಷಣೆ ಹಾಗೂ ಸರಳ ಜಲಾನಯನ ವಿಧಾನಗಳನ್ನು ಬಳಸಿಕೊಂಡು ಜನರ ಸಹಭಾಗಿತ್ವದಲ್ಲಿ ದಶಕಗಳಿಂದ ಬತ್ತಿಹೋದ ನದಿಗಳನ್ನು ಪುನರುಜ್ಜೀವನಗೊಳಿಸಿದ್ದಾರೆ. ಅಂತರ್ಜಲಮಟ್ಟ ದಿನದಿಂದ ದಿನಕ್ಕೆ ಹೆಚ್ಚುತ್ತಿದ್ದು, ಕೃಷಿ ಅಭಿವೃದ್ಧಿ ಪುನಶ್ಚೇತನಗೊಂಡಿದೆ. ಹಳ್ಳಿಗಳಿಂದ ವಲಸೆ ಕಡಿಮೆಯಾಗಿ ಗ್ರಾಮೀಣ ಬದುಕು ಪುನರುಜ್ಜೀವನಗೊಂಡಿದೆ. ಆಧುನಿಕ ಭಗೀರಥ ಡಾ|| ರಾಜೇಂದ್ರ ಸಿಂಗ್ ಅವರ ಮಾದರಿ ಕಾರ್ಯ ಸಾಧನೆಗಳನ್ನೂ, ರಾಜಸ್ಥಾನದ ಮರಳುಗಾಡಿನಲ್ಲಾದ ಹಸಿರು ಕ್ರಾಂತಿಯನ್ನೂ ಲೇಖಕರು ಕಣ್ಣಾರೆ ಕಂಡು ಅಧ್ಯಯನ ಮಾಡಿರುತ್ತಾರೆ. ಅದೇ ರೀತಿ, ರಾಲೆಗಾಂವ್ ಸಿದ್ದಿಯಲ್ಲಿ ಅಣ್ಣಾ ಹಜಾರೆಯವರು ಸಮುದಾಯದ ಸಂಕಲ್ಪ ಹಾಗೂ ಮಣ್ಣು, ನೀರು, ಅರಣ್ಯಗಳಂತಹ ನೈಸರ್ಗಿಕ ಸಂಪನ್ಮೂಲಗಳ ಸದ್ಬಳಕೆ ಮೂಲಕ ಬರದ ಬವಣೆಗೆ ಉತ್ತರ ನೀಡಿದ್ದಾರೆ. ಈ ಸಾಧಕರ ಉಪಾಯಗಳು ಹಾಗೂ ಸಾಧನೆಗಳು ನಮ್ಮ ಬರ ನೀತಿಗೆ ದಾರಿದೀಪವಾಗಬೇಕಾಗಿದೆ.

ದೇಶದ ಅನೇಕ ನೀತಿ, ಕಾರ್ಯ ಯೋಜನೆಗಳು ಹಾಗೂ ಪರಿಹಾರ ಮಾರ್ಗಗಳು ವಸಾಹತುಶಾಹಿ ಧೋರಣೆಯ ಆಡಳಿತಶಾಹಿಯ ಬಿಗಿ ಮುಷ್ಟಿಯಲ್ಲಿ ತೊಳಲಾಡುತ್ತಿವೆ. ಈ ಪ್ರಯತ್ನಗಳು ಅಧಿಕಾರಶಾಹಿಯ ಹಿಡಿತದಿಂದ ಹೊರಬರುವಂತಾಗಬೇಕು. ಸಮುದಾಯಗಳು ತಮ್ಮ ಸವಾಲುಗಳನ್ನು ತಾವೇ ಎದುರಿಸಲು ಸ್ವಾವಲಂಬಿಯಾಗಬೇಕು. ಮಾನವ ಸಮಾಜ ವಿಶೇಷವಾಗಿ ಅಸಹಾಯಕ ಸಮುದಾಯಗಳ ಮೇಲೆ ಮೇಲಿಂದ ಮೇಲೆ ಬಂದೊದಗುವ ಬರದ ಬವಣೆ ರಾಜಕೀಯ ದಾಳಗಳಿಗೆ ಬಲಿಯಾಗದಂತೆ ಪ್ರಜ್ಞಾವಂತರು ಹಾಗೂ ಪ್ರಗತಿಪರ ಸಂಘಟನೆಗಳು ಜಾಗೃತಿ ಮೂಡಿಸಬೇಕಾಗಿದೆ. ಖ್ಯಾತ ಲೇಖಕ ಪಿ. ಸಾಯಿನಾಥ್ ಅವರು ಹೇಳಿರುವಂತೆ ಪ್ರತಿಯೊಬ್ಬರೂ ಒಂದು ಉತ್ತಮ ಬರವನ್ನು ಪ್ರೀತಿಸುತ್ತಾರೆ. ಮಾನವೀಯ ಕಷ್ಟಕಾರ್ಪಣ್ಯಗಳನ್ನು ತಮಗಾಗುವ ಸಾಧ್ಯವಾದಷ್ಟು ಲಾಭವನ್ನು ಮಾಡಿಕೊಳ್ಳಲು ಹವಣಿಸುವ ದುಷ್ಟರ ಬಗ್ಗೆ ಸಮಾಜ ಜಾಗೃತವಾಗಬೇಕಾಗಿದೆ. ಕೊನೆಯದಾಗಿ, ನೊಬೆಲ್ ವಿಜೇತ ಅರ್ಥಶಾಸ್ತ್ರಜ್ಞ ಡಾ|| ಅಮರ್ತ್ಯ ಸೇನ್ ಸೂಚಿಸಿರುವಂತೆ, ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿ ಜವಾಬ್ದಾರಿ ಸಮೂಹ ಮಾಧ್ಯಮಗಳ ನೆರವಿನಿಂದ ಬರದಂತಹ ನೈಸರ್ಗಿಕ ವಿಪತ್ತುಗಳನ್ನು ಸುಲಭವಾಗಿ ನಿಭಾಯಿಸಬಹುದು. ಒಟ್ಟಾರೆ, ಮೇಲೆ ಚರ್ಚಿಸಿದ ಎಲ್ಲ ಅಂಶಗಳನ್ನೊಳಗೊಂಡ ಒಂದು ಸಮಗ್ರ ರಾಷ್ಟ್ರೀಯ ಬರ ನೀತಿ ನಮಗಿಂದು ಬೇಕಾಗಿದೆ.

**ಡಾ|| ರಾಜೇಂದ್ರ ಪೋದ್ದಾರ**

ಸಂಚಾಲಕರು, ರೈತ ಜಾಗೃತಿ ವೇದಿಕೆ ಹಾಗೂ ಸಹ ಪ್ರಾಧ್ಯಾಪಕರು, ಕೃಷಿ ಮಹಾವಿದ್ಯಾಲಯ, ವಿಜಾಪೂರ

# ಸರ್ವಜ್ಞಾಂಕಿತ ತ್ರಿಪದಿಗಳು

**ಡಾ|| ರಾಮಲಿಂಗಪ್ಪ ಟಿ. ಬೇಗೂರು**

ಸರ್ವಜ್ಞ ಎನ್ನುವವನು ಒಬ್ಬ ವ್ಯಕ್ತಿ ಅಲ್ಲ. ಸರ್ವಜ್ಞ ಎನ್ನುವುದು ಒಂದು ಪ್ರಜ್ಞೆ. ನೈತಿಕ ಪ್ರಜ್ಞೆ. ದಾರ್ಶನಿಕ ತತ್ವಜ್ಞಾನೀಯ ಪ್ರಜ್ಞೆ. ಇದು ಎಲ್ಲ ಜನಸಮುದಾಯಗಳಲ್ಲೂ ಇರಬಹುದಾದ ಪ್ರಜ್ಞೆ. ಸರ್ವಜ್ಞ ಎಂಬುದು ಒಂದು ಕಾವ್ಯನಾಮ ಮತ್ತು ತ್ರಿಪದಿ/ತ್ರಿವಿಧಿ ಎಂಬುದು ಒಂದು ಅಭಿವ್ಯಕ್ತಿ ಕ್ರಮ. ಈ ಅಭಿವ್ಯಕ್ತಿ ಕ್ರಮವನ್ನು ನಾವು ತ್ರಿಪದಿ ಛಂದಸ್ಸು ಎಂದೂ ಕರೆಯುತ್ತ ಬಂದಿದ್ದೇವೆ. ಆದರೆ ತ್ರಿಪದಿಗೆ ಮೊದಮೊದಲು ಒಂದು ಅಜಮಾಸು ಆಕೃತಿ ಇತ್ತೇ ವಿನಾ ನಿರ್ದಿಷ್ಟ ನಿಯಮಗಳು ಇರಲಿಲ್ಲ. ಇದ್ದರೂ ಅವು ಕಡ್ಡಾಯ ಆಗಿರಲಿಲ್ಲ. ಇದೊಂದು ಜನಪದರ ಕಾವ್ಯ ಕಟ್ಟುವ ಮಟ್ಟು ಅಥವಾ ಚೌಕಟ್ಟು ಆಗಿ ಬಹುಕಾಲದಿಂದ ಕನ್ನಡ ಜನಮಾನಸದಲ್ಲಿ ಬಳಕೆ ಆಗುತ್ತ ಬಂದಿದೆ. ಈ ಚೌಕಟ್ಟಿನಲ್ಲಿ ಯಾರು ಬೇಕಾದರೂ ಸರ್ವಜ್ಞ ಎಂಬ ಅಂಕಿತದಲ್ಲಿ ಕಾವ್ಯ ಕಟ್ಟಿ ಹೇಳುವ ಅವಕಾಶ ಇತ್ತು ಮತ್ತು ಇದೆ. ಇದು ಎಷ್ಟು ಪ್ರಾಚೀನವಾದುದು ? ಕನ್ನಡ ಭಾಷೆಯಲ್ಲಿ ಮೌಖಿಕವಾಗಿ ಕಾವ್ಯ ಕುಳಕ (ಚುಟುಕ ಕಾವ್ಯ) ಅಭಿವ್ಯಕ್ತಿಸಲು ಎಂದಿನಿಂದ ಜನ ತೊಡಗಿರಬಹುದೊ ಅಷ್ಟು ಹಳೆಯದು. ತ್ರಿಪದಿಯ ಮೊದಲ ದಾಖಲೆ ನಮಗೆ ಸಿಗುವುದು ಕ್ರಿ.ಶ. ೭೦೦ರ ಕಪ್ಪೆ ಅರಭಟ್ಟನ ಶಾಸನದಲ್ಲಿ. ಇದೊಂದು ಪ್ರಸಿದ್ಧ ಜನಪದ ಕಾವ್ಯಚೌಕಟ್ಟು ಎಂಬುದಕ್ಕೆ ಇದೇ ಸಾಕ್ಷಿ. ಇಂತಹ ಒಂದು ಜಾನಪದ ಅಭಿವ್ಯಕ್ತಿ ಚೌಕಟ್ಟನ್ನು ಅನೇಕರು ಅನೇಕ ಕಡೆ ಬಹುಕಾಲ ಬಳಸಿರಬಹುದು. ಇಂತಹ ಜನಜನಿತ ಮೌಖಿಕ ಅಭಿವ್ಯಕ್ತಿಯನ್ನು ಲಿಖಿತ ರೂಪದಲ್ಲಿ ಕಾಪಿಡುವ ಅಗತ್ಯ ನಮ್ಮವರಿಗೆ ಬಹಳ ಹಿಂದೆಯೇ ಕಂಡಿದೆ. ಹಾಗಾಗಿ ಸರ್ವಜ್ಞ ಅಂಕಿತದಲ್ಲಿ ಇರುವ ಎಲ್ಲ ಮೌಖಿಕ ತ್ರಿಪದಿಗಳನ್ನು ನಮ್ಮವರು ಸಂಕಲಿಸುತ್ತ ಬಂದಿದ್ದಾರೆ. ಹಾಗೆ ಕಾಲಕಾಲಕ್ಕೆ ಮತ್ತೆ ಮತ್ತೆ ಸಂಕಲಿಸುವಾಗ ಸಂಕಲನಕಾರರು ತಮ್ಮದೇ ಹಲವಾರು ತ್ರಿಪದಿಗಳನ್ನು ಸರ್ವಜ್ಞನ ಹೆಸರಿನಲ್ಲಿ ಬರೆದು ಸೇರಿಸಿದ್ದಾರೆ ಕೂಡ.

ಸರ್ವಜ್ಞ ಎಂಬ ಅಂಕಿತದಲ್ಲಿ ಬಂದಿರುವ ಎಲ್ಲ ತ್ರಿಪದಿಗಳನ್ನು ಸರ್ವಜ್ಞ ಎಂಬ ಒಬ್ಬ ಬರೆದಿದ್ದಾನೆ ಎಂದು ನಂಬುವುದು ತಪ್ಪು. ಸರ್ವಜ್ಞ ಎಂಬ ಒಬ್ಬ ಕವಿ ಇದ್ದನೋ ಇಲ್ಲವೋ ಎಂಬುದಕ್ಕಿಂತ ಈಗ ಇರುವ ಸರ್ವಜ್ಞ ಅಂಕಿತದ ಎಲ್ಲ ವಚನಗಳನ್ನು ಒಬ್ಬನೇ ಬರೆದಿಲ್ಲ ಎಂಬುದಂತೂ ಸತ್ಯ. ಇವನ್ನು ಕಾಲಕಾಲಕ್ಕೆ ಹಲವರು ಬರೆದಿದ್ದಾರೆ ಎಂಬುದಕ್ಕೆ ಹಲವು ಸಾಕ್ಷಿ ಪುರಾವೆಗಳು ಇವೆ.

ಮೊದಲಿಗೆ, ಸರ್ವಜ್ಞ ಅಂಕಿತದ ತ್ರಿಪದಿಗಳನ್ನು ಹೋಲುವ ರಚನೆಗಳನ್ನು ೧೫೭೫ರ ಸುಮಾರಿನಲ್ಲಿ ಪ್ರಭುದೇಶಿಕ ತನ್ನ 'ಮೋಕ್ಷದರ್ಶನ ಸಂಗ್ರಹ'ದಲ್ಲಿ ಸಂಕಲಿಸಿದ್ದಾನೆ. ಇಲ್ಲಿ ಇರುವ ತ್ರಿಪದಿಗಳಿಗೂ ಮತ್ತು ಆನಂತರ ೧೬೦೦ರಲ್ಲಿ 'ಸರ್ವಜ್ಞಮೂರ್ತಿ ನಿರೂಪಿಸಿದ ತ್ರಿವಿಧಿ' ಎಂಬ ಹೆಸರಿನಲ್ಲಿ ತ್ರಿಪದಿಗಳನ್ನು ಸಂಪಾದಿಸಿರುವ ಸಂಪಾದನೆಯ ಸಿದ್ಧವೀರಣ್ಣೊಡೆಯನ ಗ್ರಂಥದಲ್ಲಿ ಇರುವ ತ್ರಿಪದಿಗಳಿಗೂ ಸಾಕಷ್ಟು ವ್ಯತ್ಯಾಸ ಇದೆ. ಹಾಗೆಯೇ ಆನಂತರ ೧೬೩೬ರ ತೇದಿ ನಮೂದಾಗಿರುವ ವೆಂಕನ ಸಂಪಾದನೆಯಲ್ಲಿ ಸರ್ವಜ್ಞ ಅಂಕಿತದ ಬದಲಾಗಿ ಪರಮಾರ್ಥ ಅಂಕಿತ ಇದೆ. ಇಲ್ಲಿನ ತ್ರಿಪದಿಗಳಿಗೂ ಈ ಹಿಂದಿನೆರಡು ಸಂಕಲನದ ತ್ರಿಪದಿಗಳಿಗೂ ಸಾಕಷ್ಟು ಪದಪ್ರಯೋಗ ಮತ್ತು ದೃಷ್ಟಿಕೋನಗಳಲ್ಲಿ ವ್ಯತ್ಯಾಸಗಳಿವೆ. ಇನ್ನು ಉತ್ತಂಗಿ ಚೆನ್ನಪ್ಪನವರು ಸಂಪಾದಿಸಿರುವ ಸರ್ವಜ್ಞನ ವಚನಗಳಲ್ಲಿ ಬಹುಪಾಲು ವಚನಗಳು ಆಧುನಿಕವಾದುವು. ಇವರ ಸಂಪಾದನೆಯಲ್ಲಿ ಬೇಂದ್ರೆ, ಮಧುರಚೆನ್ನ ಬರೆದಿರುವ ಸರ್ವಜ್ಞಾಂಕಿತ ವಚನಗಳನ್ನೆಲ್ಲ ಸಂಪಾದಿಸಲಾಗಿದೆ. ಇದನ್ನೆಲ್ಲ ನೋಡಿದರೆ ಇವು ಸಾಮುದಾಯಿಕ ರಚನೆಗಳು ಎಂಬುದರಲ್ಲಿ ಎರಡು ಮಾತಿಲ್ಲ.

ಎರಡನೆಯದಾಗಿ, ಸಂಪಾದನೆಯ ಸಿದ್ಧವೀರಣ್ಣನ ಸರ್ವಜ್ಞ ಮೂರ್ತಿಯ ವಚನಗಳು ಎಂಬ ಸಂಪಾದನೆಯಲ್ಲಿ ಕಾಲಜ್ಞಾನ ವಚನಗಳು ಇಲ್ಲ. ಆನಂತರ ಅವು ರಚನೆಯಾಗಿ ಸೇರಿಕೊಂಡಿವೆ. ಅದರಲ್ಲೂ ಇಲ್ಲಿ ೧೫೬೫ರ ಕಾಲದ ವಿಜಯನಗರ ಸಾಮ್ರಾಜ್ಯವು ಮಹಮದೀಯರಿಂದ ನಾಶಹೊಂದಿದ ಉಲ್ಲೇಖವಿದೆ. ಕ್ರಿ.ಶ. ೧೭೬೩ರ ಕಾಲದ ಇಕ್ಕೇರಿ ಸಂಸ್ಥಾನವು ಪತನ ಹೊಂದಿದ ಉಲ್ಲೇಖವಿದೆ. ೧೭೯೯ರ ಕಾಲದ ಶ್ರೀರಂಗಪಟ್ಟಣವು ಇಂಗ್ಲಿಷರ ವಶವಾದ ಉಲ್ಲೇಖವಿದೆ. ಅಲ್ಲದೆ ಎತ್ತು ಇಲ್ಲದ ಬಂಡಿಯಲ್ಲಿ ಒಂದರ ಹಿಂದೆ ಒಂದು ಕೋಣೆ ಸಾಗುವ (ರೈಲಿನ) ಉಲ್ಲೇಖವೂ ಇದೆ. ಅಲ್ಲಿಗಲ್ಲಿಗೆ ಕಲ್ಲು; ಆ ಕಲ್ಲಿಗೆ ಜೋಡಿಸಿದ ತಂತಿಯಲ್ಲಿ ಹರಿಯುವ ವಿದ್ಯುತ್ತಿನ ಉಲ್ಲೇಖವೂ ಇದೆ. ಬಿಸ್ಮಿಲ್ಲಾ, ದುಶ್ಮನ್ ಇತ್ಯಾದಿ ಉರ್ದು ಪದಗಳ ಬಳಕೆಯೂ ಇದೆ. ಇವೆಲ್ಲವನ್ನೂ ಒಬ್ಬ ಸರ್ವಜ್ಞನು ಒಂದು ಕಾಲದಲ್ಲಿ ಬರೆಯಲು ಸಾಧ್ಯವೇ ?

ಮೂರನೆಯದಾಗಿ, ಸರ್ವಜ್ಞನ ಅಂಕಿತವಿರುವ ತ್ರಿಪದಿಗಳನ್ನು ಸಂಕಲಿಸಿ ವರ್ಗೀಕರಣ ಮಾಡಿರುವವರು ಹಲವಾರು ಪದ್ಧತಿ, ಗುಣ, ವರ್ಗಗಳನ್ನಾಗಿ ಅವನ್ನು ವಿಂಗಡಿಸಿದ್ದಾರೆ. ಅವುಗಳಲ್ಲಿ ಜೈನಪದ್ಧತಿ, ಬ್ರಾಹ್ಮಣ ಪದ್ಧತಿ, ಇಷ್ಟಲಿಂಗ ಪದ್ಧತಿ, ಯೋಗ ಪದ್ಧತಿಗಳೆಲ್ಲ ಇವೆ. ಅಷ್ಟೆ ಅಲ್ಲ ತಿಗಳರನ್ನು,

ಸರ್ವಜ್ಞ ಎಂಬ ಒಬ್ಬ ಕವಿ ಇದ್ದ, ಅವನು ಸರ್ವರೊಳು ಒಂದೊಂದು ನುಡಿ ಕಲಿತು ಸರ್ವಜ್ಞನೆ ಆಗಿದ್ದ, ಅವನು ತಪ್ಪು ಬರೆಯಲು ಸಾಧ್ಯವಿಲ್ಲ, ಅವನೊಬ್ಬ ಮಹಾನ್ ಕವಿ ಎಂದೆಲ್ಲ ಭಾವಿಸಿದಾಗ ಅವನು ಬರೆದಿರುವ ಅನೇಕ ಜಾತಿ ನಿಂದಕ, ನೀತಿ ನಿಂದಕ ವಚನಗಳನ್ನು ನೋಡಿದರೆ ಸರ್ವಜ್ಞ ಎಂಬ ವ್ಯಕ್ತಿ /ಕವಿಯ ಬಗ್ಗೆ ಜಿಗುಪ್ಸೆ ಹುಟ್ಟುತ್ತದೆ. ಆದರೆ ತ್ರಿಪದಿಗಳನ್ನೆಲ್ಲ ಸಾಮುದಾಯಿಕ ಪಠ್ಯಗಳೆಂದು ಬಗೆದಾದ ಆ ಸಮಸ್ಯೆ ಬಗೆಹರಿಯುತ್ತದೆ. ಅಲ್ಲದೆ ನಮ್ಮ ಸಾಹಿತ್ಯದಲ್ಲಿ ಒಬ್ಬನ ರಚನೆಗಳಲ್ಲೇ ವೈರುಧ್ಯಗಳನ್ನು ಕಂಡು ದ್ವಂದ್ವ ಎಂದು ನಮ್ಮ ವಿಮರ್ಶೆ ಎಷ್ಟೋ ಸಾರಿ ಸಾಹಿತಿ/ಸಾಹಿತ್ಯವನ್ನು ಟೀಕಿಸಿರುವುದುಂಟು. ಆಧುನಿಕ ಸಂದರ್ಭದಲ್ಲಿ ಕುವೆಂಪು ಮತ್ತು ಅನಂತಮೂರ್ತಿ ಅವರ ಸಾಹಿತ್ಯದ ವಿಮರ್ಶೆಯಲ್ಲಿ ಈ ಸಮಸ್ಯೆ ಇದೆ. ಪಠ್ಯಗಳನ್ನು ವ್ಯಕ್ತಿಸೃಷ್ಟಿ ಎನ್ನುವುದಕ್ಕಿಂತ ಸಾಂಸ್ಕೃತಿಕ ಉತ್ಪನ್ನ ಎಂದು ಭಾವಿಸಿದಾಗ; ವೈರುಧ್ಯಗಳು ಸಾಮಾಜಿಕ ಎಂದು ಭಾವಿಸಿದಾಗ ಈ ಸಮಸ್ಯೆ ಸಮಸ್ಯೆಯ ಹಾಗೆ ಕಾಣುವುದೇ ಇಲ್ಲ.

ತೆಲುಗರನ್ನು, ಬೇಡರನ್ನು, ವಡ್ಡರನ್ನು, ಪಂಚಾಳರನ್ನು ಮೊದಲಾಗಿ ಹತ್ತಾರು ಕೆಳಜಾತಿಯವರನ್ನು ನಿಂದಿಸುವ, ಮೂದಲಿಸುವ ತ್ರಿಪದಿಗಳಿವೆ. ಸರ್ವಜ್ಞ ಎಂಬ ಒಬ್ಬ ಸರ್ವಜ್ಞ ಇವೆಲ್ಲವನ್ನು ಖಂಡಿತಾ ಬರೆದಿರಲಾರ. ಇವನ್ನು ಹಲವು ಸರ್ವಜ್ಞರು ಅಂದರೆ ಹಲವು ಸಮಾಜದ ಜನರು ಹಲವು ಕಾಲದಲ್ಲಿ ಸರ್ವಜ್ಞನ ಅಂಕಿತದಲ್ಲಿ ಬರೆದಿದ್ದಾರೆ ಎಂಬುದೇ ಸರಿ. ಸರ್ವಜ್ಞ ಎಂಬ ಒಬ್ಬ ಬರೆದಿರುವ ವಚನಗಳಿಗೆ ಕೆಲವರು ಕಿಡಿಗೇಡಿಗಳು ಕಾಲಕಾಲಕ್ಕೆ ಪ್ರಕ್ಷಿಪ್ತಗಳನ್ನು ಬರೆದು ಸೇರಿಸಿದ್ದಾರೆ ಎಂದು ಸುಲಭವಾಗಿ ಇಂಥವನ್ನು ತಳ್ಳಿಹಾಕಲು ಬರುವುದಿಲ್ಲ. ಎಲ್ಲೆಲ್ಲಿ ಸಾಂಸ್ಕೃತಿಕ ಮಧ್ಯಪ್ರವೇಶ ಬೇಕೋ ಅಲ್ಲೆಲ್ಲ ಜನಸಮುದಾಯ ಸಾಹಿತ್ಯದಲ್ಲಿ ತಾನು ಮಧ್ಯಪ್ರವೇಶ ಮಾಡುತ್ತ ಬಂದಿದೆ. ಇದನ್ನು ಪ್ರಕ್ಷಿಪ್ತದ ಹೆಸರಿನಲ್ಲಿ ದೂಷಿಸಿ 'ಅಧಿಕೃತ' ಸಾಹಿತ್ಯದ ಹೊರಗೆ ಇಡಲು ಬಾರದು.

ನಮ್ಮ ಆಧುನಿಕ ಸಾಹಿತ್ಯ ವಿಮರ್ಶೆ ಕವಿಯ ಬಗೆಗಿನ ಉದಾರವಾದಿ ಧೋರಣೆಯಿಂದ ಕವಿಕೃತ ಮತ್ತು ಪ್ರಕ್ಷಿಪ್ತ ಎಂದು ಸಾಹಿತ್ಯವನ್ನು ವರ್ಗೀಕರಿಸುವ ಕೆಲಸವನ್ನು ಸಂಪಾದನಾ ಚರಿತ್ರೆಯ ಉದ್ದಕ್ಕೂ ಮಾಡುತ್ತ ಬಂದಿದೆ. ಆದರೆ ನಮ್ಮ ಸಾಹಿತ್ಯ ಹಾಗಿಲ್ಲ. ನಮ್ಮ ಪ್ರಾಚೀನರು ಬಹುತೇಕರು ಯಾರೂ ಕೂಡ ತಮ್ಮ ನಿಜನಾಮದಲ್ಲಿ ಸಾಹಿತ್ಯವನ್ನು ರಚಿಸಿಲ್ಲ. ಪಂಪ, ರನ್ನ, ಪೊನ್ನ, ಜನ್ನ, ಕುಮಾರವ್ಯಾಸ, ಆಂಡಯ್ಯ, ಮುದ್ದಣ ಈ ಯಾವುವೂ ಅವರ ನಿಜನಾಮಗಳಲ್ಲ. ಅಷ್ಟೇ ಯಾಕೆ ಬಸವ, ಅಕ್ಕ, ಅಲ್ಲಮ, ಸಿದ್ಧರಾಮ, ಕನಕ, ಪುರಂದರರು ಕೂಡ ಅಂಕಿತದಲ್ಲೆ ತಮ್ಮ ರಚನೆಗಳನ್ನು ಮಾಡಿದ್ದಾರೆ. ಹಾಗೆ ನೋಡಿದರೆ ನಮ್ಮ ಸಾಹಿತ್ಯ ಬಹುಪಾಲು ಪಠ್ಯಬದ್ಧವಾದದ್ದು. ವ್ಯಕ್ತಿಬದ್ಧವಾದದ್ದಲ್ಲ. ಆದರೆ ಆಧುನಿಕ ವಿಮರ್ಶೆ ಅದನ್ನು ವ್ಯಕ್ತಿಕೇಂದ್ರಿತ ಆಗಿ ಕಾಣುತ್ತ ಸಾಹಿತ್ಯ ಪಠ್ಯಕ್ಕಿಂತ ವ್ಯಕ್ತಿಗೆ ಮನ್ನಣೆ ನೀಡುತ್ತ ಬಂದಿದೆ. ಇದರಿಂದ ಪಠ್ಯವನ್ನು ಕವಿಕೃತ ಮತ್ತು ಪ್ರಕ್ಷಿಪ್ತ ಎಂದು ನೋಡುವ ಒಡಕು ಉಂಟಾಗಿದೆ. ಸಾಹಿತ್ಯವನ್ನು ಸಮುದಾಯದ ಪಠ್ಯವನ್ನಾಗಿ ನೋಡಿದರೆ ಈ ಸಮಸ್ಯೆ ಇರುವುದಿಲ್ಲ.

ಸರ್ವಜ್ಞ ಎಂಬ ಒಬ್ಬ ಕವಿ ಇದ್ದ. ಅವನು ಸರ್ವರೊಳು ಒಂದೊಂದು ನುಡಿ ಕಲಿತು ಸರ್ವಜ್ಞನೆ ಆಗಿದ್ದ. ಅವನು ತಪ್ಪು ಬರೆಯಲು ಸಾಧ್ಯವಿಲ್ಲ. ಅವನೊಬ್ಬ ಮಹಾನ್ ಕವಿ ಎಂದೆಲ್ಲ ಭಾವಿಸಿದಾಗ ಅವನು ಬರೆದಿರುವ ಅನೇಕ ಜಾತಿ ನಿಂದಕ, ನೀತಿ ನಿಂದಕ ವಚನಗಳನ್ನು ನೋಡಿದರೆ ಸರ್ವಜ್ಞ ಎಂಬ ವ್ಯಕ್ತಿ/ಕವಿಯ ಬಗ್ಗೆ ಜಿಗುಪ್ಸೆ ಹುಟ್ಟುತ್ತದೆ. ಆದರೆ ತ್ರಿಪದಿಗಳನ್ನೆಲ್ಲ ಸಾಮುದಾಯಿಕ ಪಠ್ಯಗಳೆಂದು ಬಗೆದಾದ ಆ ಸಮಸ್ಯೆ ಬಗೆಹರಿಯುತ್ತದೆ. ಅಲ್ಲದೆ ನಮ್ಮ ಸಾಹಿತ್ಯದಲ್ಲಿ ಒಬ್ಬನ ರಚನೆಗಳಲ್ಲೇ ವೈರುಧ್ಯಗಳನ್ನು ಕಂಡು ದ್ವಂದ್ವ ಎಂದು ನಮ್ಮ ವಿಮರ್ಶೆ ಎಷ್ಟೋ ಸಾರಿ ಸಾಹಿತಿ/ಸಾಹಿತ್ಯವನ್ನು ಟೀಕಿಸಿರುವುದುಂಟು. ಆಧುನಿಕ ಸಂದರ್ಭದಲ್ಲಿ ಕುವೆಂಪು ಮತ್ತು ಅನಂತಮೂರ್ತಿ ಅವರ ಸಾಹಿತ್ಯದ ವಿಮರ್ಶೆಯಲ್ಲಿ ಈ ಸಮಸ್ಯೆ ಇದೆ. ಪಠ್ಯಗಳನ್ನು ವ್ಯಕ್ತಿಸೃಷ್ಟಿ ಎನ್ನುವುದಕ್ಕಿಂತ ಸಾಂಸ್ಕೃತಿಕ ಉತ್ಪನ್ನ ಎಂದು ಭಾವಿಸಿದಾಗ; ವೈರುಧ್ಯಗಳು ಸಾಮಾಜಿಕ ಎಂದು ಭಾವಿಸಿದಾಗ ಈ ಸಮಸ್ಯೆ ಸಮಸ್ಯೆಯ ಹಾಗೆ ಕಾಣುವುದೇ ಇಲ್ಲ. ಇರಲಿ :

ನಾಲ್ಕನೆಯದಾಗಿ, ಸರ್ವಜ್ಞ ಅಂಕಿತ ಇರುವ ತ್ರಿಪದಿಗಳಲ್ಲಿ ಸಾಕಷ್ಟು ವೈರುಧ್ಯಗಳು ಇರುವುದಂತೂ ನಿಜ.

*ಅತ್ತಿ ಮರ ತಾ ಕಾಯ ಹೊತ್ತಿರ್ದ ತೆರನಂತೆ*
*ತತ್ವ ಭೇದವನ್ನು ಅರಿಯದಲೆ ರುದ್ರಾಕ್ಷಿ*
*ಹೊತ್ತಿರ್ದು ಫಲವೇನು ಸರ್ವಜ್ಞ*

– ಎಂಬ ವಚನ ಇರುವಂತೆಯೇ ಇಲ್ಲಿ

*ರುದ್ರಾಕ್ಷಿ ಭಸಿತವನು ಹೊದ್ದಿರಲು ದೇಹದೊಳ*
*ಗಿದ್ದ ಪಾಪಗಳು ಶಿವನು ತಾ*
*ನಿದ್ದಲ್ಲಿ ಬರುವ ಸರ್ವಜ್ಞ*

– ಎಂಬ ವಚನವೂ ಇದೆ. ಹೀಗೆ ಲಾಂಛನವನ್ನು ಪುರಸ್ಕರಿಸುವ ಮತ್ತು ತಿರಸ್ಕರಿಸುವ ಎರಡೂ ವಚನಗಳನ್ನು ಒಬ್ಬನೆ ಬರೆಯಲು ಹೇಗೆ ಸಾಧ್ಯ? ಇವನ್ನು ಪ್ರತಿಕ್ರಿಯಾತ್ಮಕವಾಗಿ ಬೇರೆ ಬೇರೆಯವರೆ ಬರೆದಿರಬೇಕು.

*ಉತ್ಪತ್ತಿಗೆ ಬೊಮ್ಮ ಗಡ ಸ್ಥಿತಿಗೆ ತಾ ವಿಷ್ಣು ಗಡ*
*ಹತವ ಗೈವುದಕೆ ರುದ್ರ ಗಡ ಇವುರುಗಳ*
*ಸ್ಥಿತಿಯನರಿಯೆಂದ ಸರ್ವಜ್ಞ*

– ಎಂಬ ವಚನದೊಂದಿಗೆ,

*ಬೊಮ್ಮ ನಿರ್ಮಿಪನೆಂಬ ದುರ್ಮತಿಯೆ ನೀ ಕೇಳು*
*ಬೊಮ್ಮನ ಸತಿಗೆ ಮೂಗಿಲ್ಲವಾ ಮೂಗ*
*ನಿರ್ಮಿಸನದೇಕೆ ಸರ್ವಜ್ಞ*

– ಈ ವಚನವನ್ನು ಇಟ್ಟು ಓದಿ. ಹಾಗೆಯೇ,

*ಅರಸ ರಕ್ಕಸನಂತೆ ವರಮಂತ್ರಿ ಹುಲಿಯಂತೆ*
*ಬರೆವಾತ ನಾಡ ನರಿಯಂತೆ ಪರಿವಾರ*
*ಗರಗಸದಂತೆ ಸರ್ವಜ್ಞ*

– ಎಂಬ ವಚನದೊಂದಿಗೆ,

*ಅಡಿಯ ಮುಂದಿಡೆ ಸ್ವರ್ಗ ಅಡಿಯ ಹಿಂದಿಡೆ ನರಕ*
*ಅಡಿಗಶ್ವಮೇಧ ಫಲ ಸ್ವಾಮಿಕಾರ್ಯಕ್ಕೆ*
*ಮಡಿಯಲೇಬೇಕು ಸರ್ವಜ್ಞ*

– ಎಂಬ ವಚನವನ್ನು ಇಟ್ಟು ಓದಿ. ಹೀಗೆ ಓದಿದಾಗ ಇವೆಲ್ಲ ಅಕ್ಷರರೂಪದಲ್ಲಿ ನಡೆದಿರುವ ವಾದ ಪ್ರತಿವಾದದಂತೆ ಕಾಣುತ್ತವೆ. ಇಂತಹ ವಚನಗಳನ್ನು ವೈರುಧ್ಯಗಳು ಎನ್ನುವುದಕ್ಕಿಂತ ವಾಗ್ವಾದಗಳು ಎನ್ನುವುದೇ ಸೂಕ್ತ. ಇಂತಹ ವಾಗ್ವಾದಗಳು ಇರುವ ನೂರಾರು




ವಚನಗಳನ್ನು ಎದುರು ಬದುರು ಇಡಬಹುದು. ಅಂದರೆ ಇವನ್ನೆಲ್ಲ ಒಬ್ಬನೇ ಬರೆಯಲು ಸಾಧ್ಯವಿಲ್ಲ. ಬೇರೆ ಬೇರೆ ಮನೋಧರ್ಮ ಇರುವ ಜನರೇ ಇವನ್ನು ಬರೆದಿರಬೇಕು. ಹಾಗಾಗಿ ಸರ್ವಜ್ಞ ಎಂಬ ಅಂಕಿತ ಇರುವ ವಚನಗಳನ್ನು ಸರ್ವಜ್ಞನ ವಚನಗಳು ಎಂದು ಕರೆಯುವುದಕ್ಕಿಂತ ಅವನ್ನೆಲ್ಲ ಸರ್ವಜ್ಞಂಕಿತ (ಸರ್ವಜ್ಞಾಂಕಿತ) ತ್ರಿಪದಿಗಳು ಎಂದು ಕರೆಯುವುದೇ ಸೂಕ್ತ.

೨

ಮೌಖಿಕ ಅಭಿವ್ಯಕ್ತಿಗಳೇ ಆಗಿದ್ದ ಅಥವಾ ಹಲವಾರು ಕಡೆ ಬಿಡಿ ಕಟ್ಟುಗಳಲ್ಲಿ ಚದುರಿಹೋಗಿದ್ದ ಬಸವಾದಿ ಶರಣರ ವಚನಗಳನ್ನು ಸಂಕಲಿಸಿದ ವೀರಶೈವರೇ ಈ ಸರ್ವಜ್ಞಾಂಕಿತ ತ್ರಿಪದಿಗಳನ್ನೂ ಮೊದಲಿಗೆ ಸಂಪಾದಿಸಿದ್ದಾರೆ. ಅವರು ಸಂಪಾದಿಸಿ ಅವನ್ನು ವಚನಗಳೆಂದು ಕರೆದುದರಿಂದಲೇ ಸರ್ವಜ್ಞನ ತ್ರಿಪದಿಗಳು ವಚನಗಳೆಂದೇ ಪ್ರಸಿದ್ಧವಾಗಿವೆ. ಹೀಗೆ ಸಂಪಾದಿಸುವಾಗ ಸರ್ವಜ್ಞ ಎಂಬುದು ಕೂಡಲಸಂಗಮ ಎಂಬಂತೆ ಒಂದು ಅಂಕಿತ ಎಂದು ತಿಳಿಯದೆ; ವ್ಯಕ್ತಿನಾಮ ಎಂದು ತಿಳಿದು ಸರ್ವಜ್ಞಮೂರ್ತಿಯ ಬರಹ ಎಂದು ವ್ಯಕ್ತಿಗೆ ಕ್ರೆಡಿಟ್ಟು ಕೊಡುವ ಕೆಲಸ ಮಾಡಿದ್ದಾರೆ. ಸಂಪಾದನೆಯ ಸಮಯವೇ ನಮ್ಮ ವೀರಶೈವ ಪರಂಪರೆಯಲ್ಲಿ ಇದ್ದುದರಿಂದ ಆ ಪರಂಪರೆಯಲ್ಲಿ ಸಂಪಾದಿತವಾದ ಪಠ್ಯಗಳು ಸಹಜವಾಗಿಯೆ ವೀರಶೈವೀಕರಣಕ್ಕೂ ಗುರಿಯಾಗಿವೆ. ಸರ್ವಜ್ಞಾಂಕಿತ ವಚನಗಳಲ್ಲಿ ಬಹುಪಾಲು ವಚನಗಳು ಸಂಕಲನಕಾರರ (ಲಿಪಿಕಾರರ) ಕೈವಾಡದಿಂದಾಗಿ ವೀರಶೈವೀಕರಣ ಆಗಿರುವ ಜೊತೆಗೆ ಹಲವು ಅಪ್ಪಟ ವೀರಶೈವವಾದಿ ತ್ರಿಪದಿಗಳು ಸಂಕಲನಕಾರರಿಂದ ರಚನೆಯೂ ಆಗಿರಬಹುದು. ಅಲ್ಲದೆ ಎಲ್ಲ ತ್ರಿಪದಿಗಳನ್ನು ಸಂಕಲಿಸುವ ಬದಲಿಗೆ ವೀರಶೈವ ತತ್ವ, ಪದ್ಧತಿಗಳಿಗೆ ಹೊಂದುವ ಮತ್ತು ಹೊಂದಿಸಬಹುದಾದ ರಚನೆಗಳನ್ನು ಮಾತ್ರವೆ ಸಂಪಾದಿಸಿರುವ ಸಾಧ್ಯತೆಯೂ ಉಂಟು.

ಸರ್ವಜ್ಞ ಅಂಕಿತದ ತ್ರಿಪದಿಗಳು ಬಹುಸಾಮುದಾಯಿಕ ರಚನೆಗಳೇ ಆಗಿರುವುದರಿಂದ ಅವು ಬಹು ಜಾತೀಯ ಮತ್ತು ಬಹು ದಾರ್ಶನಿಕ ತಾತ್ವಿಕತೆಗಳನ್ನು ಪ್ರತಿಪಾದಿಸುತ್ತವೆ. ಒಂದು ಜಾತಿಯ, ಒಂದು ಧರ್ಮದ, ಒಂದು ದರ್ಶನದ ಪಠ್ಯಗಳು ಇವಲ್ಲ. ಹಾಗೆ ಜಾತ್ಯತೀತ ಎನ್ನಬಹುದಾದ ಪಠ್ಯಗಳೂ ಇವಲ್ಲ. ಆದರೆ ಈ ತ್ರಿಪದಿಗಳ ಸಂಪಾದನಾ ಪ್ರಕ್ರಿಯೆಯಲ್ಲಿ ಈ ಬಹುದಾರ್ಶನಿಕ ವಚನಗಳನ್ನು ವೀರಶೈವೀಕರಣ ಮಾಡಿರುವುದು ಬಹು ಸ್ಪಷ್ಟವಾಗಿ ಕಾಣುತ್ತದೆ. ಹಾಗಾಗಿ ಈ ಸಂಕಲನಾನುಸಂಧಾನದ ಚರಿತ್ರೆ ವೀರಶೈವೀಕರಣದ ರಾಜಕಾರಣದಿಂದ ಬಾಧಿತವಾಗಿದೆ. ಸರ್ವಜ್ಞಾಂಕಿತದ ಸಾಕಷ್ಟು ವಚನಗಳು ಬ್ರಾಹ್ಮಣ ಪದ್ಧತಿ ಮತ್ತು ಜೈನಪದ್ಧತಿಯಲ್ಲಿ ಬ್ರಾಹ್ಮಣ ಆಚಾರ ಮತ್ತು ಜೈನ ಆಚಾರಗಳನ್ನು ವಿಡಂಬಿಸುತ್ತವೆ. ಆದರೆ ವೀರಶೈವ ಆಚಾರಗಳನ್ನು ವಿಡಂಬಿಸುವ ವಚನಗಳು ತೀರಾ ಇಲ್ಲವೆನ್ನುವಷ್ಟು ಕಡಿಮೆ! ಹಾಗೆಯೇ ವೈದಿಕ ಪುರಾಣ ಮತ್ತು ವೀರಶೈವೇತರ ಪುರಾಣ ಪ್ರತೀಕಗಳನ್ನು ವಿಡಂಬಿಸುವ ವಚನಗಳೂ ಸಾಕಷ್ಟಿವೆ. ಆದರೆ ವೀರಶೈವ ಪುರಾಣ ಪ್ರತೀಕಗಳನ್ನು ವಿಡಂಬಿಸುವ ವಚನಗಳು ಇಲ್ಲವೆನ್ನುವಷ್ಟು

(ಓಲನೇ ಪುಟಕ್ಕೆ)

# ಕೃತಕ ಹರಳುಗಳು



ಮೂಲ : ಗೀ. ದ. ಮೊಪಾಸಾ

ಕನ್ನಡಕ್ಕೆ : ಬಿ. ಆರ್. ಭೀಮಾಚಾರ್

**ಮಾ**ನ್‌ಷಿಯರ್ ಲ್ಯಾಂಟನ್ ತನ್ನ ಬ್ಯೂರೋ ಸಹಾಯಕ ಮುಖ್ಯಾಧಿಕಾರಿಯ ಗೃಹದಲ್ಲಿ ಒಬ್ಬ ಯುವತಿಯನ್ನು ಸಂಧಿಸಿದ. ಪ್ರಥಮ ಮಿಲನದಲ್ಲೇ ಪ್ರೀತಿಯ ಬಲೆಗೆ ಬಿದ್ದ. ಅವನಿಗೆ ಅವಳಲ್ಲಿ ಹುಚ್ಚು ಪ್ರೇಮ. ಅವಳು ಅದೇ ಪ್ರದೇಶದ ಒಬ್ಬ ಡಾಕ್ಟರ್ ಮಗಳು. ತನ್ನ ತಾಯಿಯೊಂದಿಗೆ ಪ್ಯಾರಿಸಿನಲ್ಲಿ ವಾಸಿಸಲು ಬಂದಿದ್ದಳು. ತಾಯಿ ಮಗಳಿಗೆ ಸೂಕ್ತ ವರ ಹುಡುಕಲು ಬಂಧುಗಳ ಮನೆಗೆ ಭೇಟಿ ಕೊಡುತ್ತಿದ್ದಳು. ಅವರು ಬಡವರು, ಪ್ರಾಮಾಣಿಕರು, ಶಾಂತಿಪ್ರಿಯರು ಹಾಗೂ ನಿರಾಡಂಬರ ವ್ಯಕ್ತಿಗಳು.

ಪ್ರತಿಯೊಬ್ಬ ವಿವೇಕಯುತ ಯುವಕನೂ ತನ್ನ ಹೃದಯರಾಣಿಯನ್ನಾಗಿ ಪಡೆಯಲು ಬಯಸುವಂತಹ ಪರಿಪೂರ್ಣ ಸದ್ಗುಣಶೀಲ ಯುವತಿ. ಅವಳ ಸರಳ ಸೌಂದರ್ಯ ದಿವ್ಯ ಆಕರ್ಷಣೆ ಹೊಂದಿತ್ತು. ತುಟಿಗಳಿಂದ ತಪ್ಪಿಸಿಕೊಳ್ಳುತ್ತಿದ್ದ ತುಂಟು ನಗೆ ಅವಳ ಸ್ವಚ್ಛ ಸುಂದರ ಆತ್ಮದ ಪ್ರತಿಫಲನದಂತೆ ಶೋಭಿಸುತ್ತಿತ್ತು. ಅವಳ ಹೆಗ್ಗಳಿಕೆ ಎಲ್ಲೆಲ್ಲೂ ವ್ಯಾಪಿಸಿತ್ತು. ''ಅವಳ ಪ್ರೀತಿಯನ್ನು ಗೆಲ್ಲುವವನೇ ಧನ್ಯ. ಅವಳಿಗಿಂತ ಉತ್ತಮ ಬಾಳಸಂಗಾತಿ ಲಭಿಸುವುದು ದುರ್ಲಭ'' ಎಂದು ಅವಳನ್ನು ನೋಡಿದವರೆಲ್ಲಾ ನುಡಿಯುತ್ತಿದ್ದರು.

ಈಗ ಲ್ಯಾಂಟನ್‌ಗೆ ಏಳುನೂರ ಐವತ್ತು ಡಾಲರ್ ಸಂಬಳ. ದಾಂಪತ್ಯ ಜೀವನವನ್ನು ಸುಗಮವಾಗಿ ಸಾಗಿಸಲು ಏನೂ ಕಷ್ಟವಿಲ್ಲ, ಅವಳೊಂದಿಗೆ ಅವನ ಆನಂದ ಅವರ್ಣನೀಯ. ಮಿತವ್ಯಯದಿಂದ ಸಂಸಾರ ತೂಗಿಸುತ್ತಿದ್ದಳು. ಇನ್ನೇನು ಸಿರಿತನ ಬೇಕು ! ತನ್ನ ಪತಿಯ ಬಗ್ಗೆ ಸೂಕ್ಷ್ಮಗಮನ ಹರಿಸಿ ಪ್ರೀತಿಯ ಮಳೆ ಸುರಿಸುತ್ತಿದ್ದಳು. ಮದುವೆಯಾಗಿ ಆರು ವರ್ಷ ಕಳೆದರೂ ಮದುವೆಯ ಪ್ರಾಥಮಿಕ ದಿನಗಳ ಮಧುಚಂದ್ರದ ಸವಿಜೀವನ ಮುಂದುವರೆಯಿತು. ಅವಳ ಬಗ್ಗೆ ಅವನದು ಎರಡೇ ದೂರು. ಒಂದು, ಥಿಯೇಟರ್ ಬಗ್ಗೆ ಅವಳಿಗಿರುವ ಅತಿಯಾದ ಆಸಕ್ತಿ. ಎರಡನೆಯದು ಕೃತಕ ಹರಳುಗಳ ಬಗ್ಗೆ ಇದ್ದ ವ್ಯಾಮೋಹ. ಅವಳಿಗೆ ಉನ್ನತ ಅಧಿಕಾರಿಗಳ ಪತ್ನಿಯರ ಸ್ನೇಹವಿತ್ತು. ಪ್ರತಿಯೊಂದು ಪ್ರಥಮ ಷೋಗೂ ಅವಳಿಗೆ ವಿಶೇಷ ಸ್ಥಾನ ಕಾದಿರಿಸುತ್ತಿದ್ದರು. ಇಷ್ಟವಿರಲಿ, ಬಿಡಲಿ, ತಪ್ಪದೆ ಪತಿಯನ್ನು ಕರೆದುಕೊಂಡು ಹೋಗುತ್ತಿದ್ದಳು. ಅವನಿಗೋ ಆಫೀಸಿನಲ್ಲಿ ಬಿಡುವಿಲ್ಲದ ಕೆಲಸದ ನಂತರ ಥಿಯೇಟರಿನಲ್ಲಿ ಕೂಡುವುದು ತುಂಬ ಬೇಸರ ತರುತ್ತಿತ್ತು.

ಸ್ವಲ್ಪ ಕಾಲದ ನಂತರ ಲ್ಯಾಂಟನ್, ಇನ್ನುಮೇಲೆ ಥಿಯೇಟರಿಗೆ ಹೋಗುವಾಗ ಮಹಿಳಾ ಸಂಗಾತಿಯೊಬ್ಬರನ್ನು ಕರೆದುಕೊಂಡು ಹೋಗಬೇಕೆಂದು ಅವಳನ್ನು ಬೇಡಿಕೊಂಡ. ಮೊದಲು ಒಪ್ಪದಿದ್ದರೂ ಅಂತಿಮವಾಗಿ ಪತಿಯ ಇಷ್ಟಕ್ಕೆ ಶರಣಾದಳು. ಥಿಯೇಟರಿನ ಪ್ರೀತಿಯೊಂದಿಗೆ ಆಭರಣದ ಆಸೆಯೂ ಬೆಳೆಯಿತು. ವಸ್ತ್ರಗಳು ಮೊದಲಿನಂತೆಯೇ ಸರಳವಾಗಿ ಇದ್ದವು. ಅವಳಿಗೆ ತಕ್ಕಂತೆ ಇದ್ದವು. ಈಗ ಕಿವಿಗಳನ್ನೂ ಆಕರ್ಷಣೀಯ ವೈವಿಧ್ಯಮಯ ವರ್ಣ ಚೆಲ್ಲುವ ವಜ್ರದ ಹರಳುಗಳ ಓಲೆಗಳಿಂದ ಅಲಂಕರಿಸಿದಳು. ಅವು ನಿಜವಾದ ವಜ್ರವನ್ನು ನಾಚಿಸುವಂತಿದ್ದವು. ಕತ್ತಿಗೆ ಮುತ್ತಿನ ಸರ ಹಾಗೂ ಕೈಗಳಿಗೆ ಕೃತಕ ಬಂಗಾರದ ಬಳೆಗಳನ್ನು ತೊಟ್ಟಳು.

ಅನೇಕ ಬಾರಿ ಅವಳ ಪತಿ ''ಪ್ರಿಯೆ, ನಿಜವಾದ ವಜ್ರದ ಆಭರಣಗಳನ್ನು ಕೊಳ್ಳಲು ಸಾಧ್ಯವಿಲ್ಲದಿದ್ದರೂ, ನಿನ್ನ ಸಹಜ ಸೌಂದರ್ಯ, ಶೀಲಸಂಪನ್ನತೆಗಳೇ ಅಮೂಲ್ಯ ಆಭರಣಗಳು'' ಎಂದು ಪ್ರಶಂಸಿಸಿದ.

ಆದರೆ ಅವಳು ಸಿಹಿ ನಗೆ ಬೀರುತ್ತಾ, ''ನಾನೇನು ಮಾಡಲಿ. ನನಗೆ ಒಡವೆ ಇಷ್ಟ. ಅದೊಂದು ದೌರ್ಬಲ್ಯ. ಹುಟ್ಟು ಸ್ವಭಾವವನ್ನು ಬದಲಾಯಿಸಲು ಸಾಧ್ಯವಿಲ್ಲ ಅಲ್ಲವೇ ?'' ಎಂದು ನುಡಿದಳು.

ನಂತರ ವೈವಿಧ್ಯಮಯ ಆಭರಣಗಳನ್ನು ಒಂದೊಂದಾಗಿ ಕೈಯಲ್ಲಿ ತೆಗೆದುಕೊಂಡು ಪತಿಯ ಮೆಚ್ಚುಗೆಗಾಗಿ ಪ್ರದರ್ಶಿಸುತ್ತಾ, ''ನೋಡಿ, ಎಷ್ಟು ಚೆನ್ನಾಗಿವೆ. ಯಾರು ನೋಡಿದರೂ ಈ ಆಭರಣಗಳು ನಿಜವಾದುವು, ಕೃತಕವಲ್ಲವೆಂದೇ ಹೇಳುತ್ತಾರೆ'' ಎಂದು ಅಭಿಮಾನದಿಂದ ಹೇಳಿದಳು.

ಲ್ಯಾಂಟನ್ ನಗುತ್ತಾ, ''ನಿನಗೆ ಬೊಹಿಮಿಯನ್ ರುಚಿಗಳಿವೆ'' ಎಂದು ತಮಾಷೆಯ ಚಟಾಕಿ ಹಾರಿಸಿದ. ಅನೇಕ ಬಾರಿ ಸಂಜೆ ಬೆಚ್ಚಗೆ ಹರಟೆ ಹೊಡೆಯುತ್ತಿದ್ದಾಗ ಅವಳು ಟೀ ಮೇಜಿನ ಮೇಲೆ ಆಭರಣಗಳಿದ್ದ ಚರ್ಮದ ಚೀಲವನ್ನಿಡುತ್ತಿದ್ದಳು. (ಲ್ಯಾಂಟನ್ ಅದನ್ನು ಕಸ ಎಂದು ಕರೆಯುತ್ತಿದ್ದ). ಕೃತಕ ಹರಳುಗಳನ್ನು ನೋಡಿ ಹಿಗ್ಗುತ್ತಿದ್ದಳು. ಅವು ಅವಳ ಆಳವಾದ ಅವ್ಯಕ್ತ ಆನಂದದ ಸಂಕೇತವಾಗಿದ್ದವು. ಪತಿಯ ಕೊರಳಿಗೂ ಹಾಕಿ ಸಂತಸಪಟ್ಟು ಹೆಮ್ಮೆಯಿಂದ ನಗುತ್ತಾ, ''ಇದು ನಿಮಗೆ ಒಪ್ಪುವುದಿಲ್ಲ'' ಎನ್ನುತ್ತ ಚುಡಾಯಿಸುತ್ತಿದ್ದಳು. ನಂತರ ಅವನ ತೋಳಬಂದಿಯಾಗಿ ಪ್ರೀತಿಯಿಂದ ಚುಂಬಿಸುತ್ತಿದ್ದಳು.

ಮರುದಿನ ಅವಳಿಗೆ ಕೆಮ್ಮು ಶುರುವಾಯಿತು. ಎಂಟು ದಿನಗಳ ನಂತರ ಶ್ವಾಸಕೋಶದ ರೋಗದಿಂದ ಕಣ್ಣು ಮುಚ್ಚಿದಳು. ಲ್ಯಾಂಟನ್ ಶೋಕಸಾಗರದಲ್ಲಿ ಮುಳುಗಿದ. ತಿಂಗಳಲ್ಲೇ ಕೂದಲು ಬೆಳ್ಳಗಾಯಿತು. ಹೃದಯ ಹತಾಶೆಯಿಂದ ಹರಿದುಹೋಯಿತು. ಅವಳ ನಗು, ಧ್ವನಿ, ಬೆಡಗು ಎಲ್ಲವೂ ಸ್ಮೃತಿಪಥದಲ್ಲಿ ಪದೇ ಪದೇ ಕಾಡಿದವು.

ಕಾಲವೇ ಎಲ್ಲಾ ಆಘಾತಗಳಿಗೂ ಸಂಜೀವಿನಿ. ಆದರೆ ಅವನ ದುಃಖ ಅಡಗಲಿಲ್ಲ. ಆಫೀಸಿನಲ್ಲಿ ದೈನಂದಿನ ಸುದ್ದಿಯ ಬಗ್ಗೆ ಚರ್ಚಿಸುತ್ತಿದ್ದಾಗ ಅವನ ಕಣ್ಣಲ್ಲಿ ಹಠಾತ್ತಾಗಿ ಕಣ್ಣೀರು ತುಂಬುತ್ತಿತ್ತು. ನಿರಂತರ ಅಳುತ್ತಿದ್ದ. ಶೋಕತಪ್ತ ಹೃದಯ ಚೂರು ಚೂರಾಗಿತ್ತು. ಅವನ ಕೊಠಡಿಯಲ್ಲಿದ್ದವೆಲ್ಲವೂ ಅವಳು ಸಾಯುವುದಕ್ಕೆ ಮೊದಲು ಹೇಗಿದ್ದವೋ ಹಾಗೇ ಅಸ್ತವ್ಯಸ್ತವಾಗಿ ಬಿದ್ದಿದ್ದವು. ಅಲ್ಲಿ ನೆನಪಿನ ಕಣ್ಣೀರಿನ ಕೋಡಿ ಹರಿಯುತ್ತಿತ್ತು. ಅವಳೇ ಅವನ ಆಭರಣ ! ಆನಂದದ ಆಗರ !

ನಂತರ ಅವನ ಬದುಕು ಜಿಗುಪ್ಸೆಯಲ್ಲಿ ಮುಳುಗಿತು. ನಿರಂತರ ಹೋರಾಟದಂತಾಗಿ ಕಾಡಲು ತೊಡಗಿತು. ಅವಳ ಹಣಕಾಸಿನ ನಿರ್ವಹಣೆಯ ಜಾಣತನದಿಂದ ಅವನ ಸಂಬಳ ಬತ್ತದ ಬುಗ್ಗೆಯಾಗಿತ್ತು. ಆದರೆ ಅವನ ಬದುಕೀಗ ಕೀಲು ಕಳಚಿದ ಬಂಡಿ. ಅವಳು ಹೇಗೆ ಆರ್ಥಿಕ ಸ್ಥಿತಿಯನ್ನು ಸುಧಾರಿಸುತ್ತಿದ್ದಳೋ ! ಈಗ ಅವನಿಗೆ ಕನಿಷ್ಠ ಅವಶ್ಯಕತೆಗಳಿಗೇ ಕೊರತೆ. ಅವಳಿದ್ದಾಗ ಅತ್ಯುತ್ತಮ ಮದ್ಯಗಳನ್ನು ಒದಗಿಸುತ್ತಿದ್ದಳು. ರುಚಿ ರುಚಿಯಾದ ಖಾದ್ಯ ಸಾಮಗ್ರಿಗಳು ಸಮೃದ್ಧಿಯಾಗಿದ್ದವು. ಈಗ ಸಾಲ ಬೆಳೆದು ಅವನು ಗರಿಷ್ಠ ಬಡತನದ ಬಲಿಪಶುವಾದ.

ಒಂದು ದಿನ ಬೆಳಿಗ್ಗೆ ಪರ್ಸ್‌ನಲ್ಲಿ ಒಂದು ಪೈಸೆ ಕೂಡ ಇರಲಿಲ್ಲ. ತನ್ನಲ್ಲಿರುವ ಯಾವುದಾದರೂ ಅಮೂಲ್ಯ ವಸ್ತುವನ್ನು ಮಾರುವ ಅನಿವಾರ್ಯತೆಯ ಸುಳಿಗೆ ಸಿಕ್ಕ. ಅವಳ ನಕಲಿ ಆಭರಣಗಳ ವಿಸರ್ಜನೆಯೇ ಅವನಿಗುಳಿದ ದಾರಿ. ನಕಲಿ ವಸ್ತುವೆಂದರೆ ಏನೋ ಮುಜುಗರ. ಅವು ಅವನನ್ನು ಅಣಕಿಸುತ್ತಿದ್ದವು. ಅವಳ ನೆನಪನ್ನು ಕೆಣಕುವ ಕಾರಣವಾಗಿದ್ದುವು. ಅವು ಇಲ್ಲದಿರುವುದೇ ಉತ್ತಮ ಎನಿಸಿತು.

ತನ್ನ ಜೀವನದ ಕಡೆಯ ಘಳಿಗೆಯವರೆಗೂ ಅವಳು ಕೊಳ್ಳುವುದನ್ನು ಬಿಟ್ಟಿದ್ದಿಲ್ಲ. ಪ್ರತಿ ಸಂಜೆ ಹೊಸ ಆಭರಣದ ಆಗಮನ. ಅವಳು ಆಸೆಯಿಂದ ಉಪಯೋಗಿಸುತ್ತಿದ್ದ ಕೊರಳ ಹಾರ ತೆಗೆದ. ಗರಿಷ್ಠ ಏಳು ಫ್ರಾಂಕುಗಳು ದೊರೆಯಬಹುದು ಎಂದೆನಿಸಿತು. ಅದೇನೋ ಕೃತಕ ಆದರೂ ಕಲಾತ್ಮಕ ಆಭರಣ. ಜೇಬಿನಲ್ಲಿ ತುರುಕಿಕೊಂಡ. ಆಭರಣದ ಅಂಗಡಿಗೆ ಹೊರಟ. ಕಂಡ ಮೊದಲನೇ ಅಂಗಡಿಗೇ ನುಗ್ಗಿದ. ತನ್ನ ಬಡತನದ ಪ್ರದರ್ಶನದ ಬಗ್ಗೆ ತಾನೇ ನಾಚಿಕೊಂಡ. ಅಂತಹ ಅಗ್ಗದ ಆಭರಣ ಮಾರುವ ಅನಿವಾರ್ಯತೆ ಬಂತಲ್ಲಾ ಎಂಬ ಅವಮಾನ ಪ್ರತಿಕ್ಷಣವೂ ಅವನನ್ನು ಅಣಕಿಸುತ್ತಿತ್ತು.

ಅಂಗಡಿಯವನಿಗೆ, ''ಸ್ವಾಮಿ, ಇದರ ಬೆಲೆ ಎಷ್ಟು?'' ಎಂದು ಲ್ಯಾಂಟನ್ ವಿಚಾರಿಸಿದ. ಅಂಗಡಿಯವನು ಪರೀಕ್ಷಿಸಿದ. ಗುಮಾಸ್ತನನ್ನು ಕರೆದು ಒಳಗಿಂದೊಳಗೇ ಲೆಕ್ಕಾಚಾರ ಹಾಕಿ ಗಣಕಯಂತ್ರದಲ್ಲಿಟ್ಟು ಪುನಃ ಪರೀಕ್ಷಿಸಿದ. ಲ್ಯಾಂಟನ್‌ಗೆ ಕೋಪ ಬಂತು. ''ನನಗೆ ಗೊತ್ತು ಅದಕ್ಕೆ ಏನೂ ಬೆಲೆಯಿಲ್ಲ'' ಎಂದು ಗೊಣಗುವುದರಲ್ಲಿದ್ದ. ಅಷ್ಟರಲ್ಲೇ ಅಂಗಡಿಯವ, ''ಸರ್, ಈ ಸರದ ಬೆಲೆ ಹನ್ನೆರಡರಿಂದ ಹದಿನೈದು ಸಾವಿರ ಫ್ರಾಂಕ್'' ಎಂದ.

ವಿಧುರ ಕಣ್ಣನ್ನು ಅರಳಿಸಿ, ಅಂಗಡಿಯವನು ಆಡಿದ ಮಾತಿನ ಅರ್ಥ ತಿಳಿಯದೆ ಕಣ್ಣು ಕಣ್ಣು ಬಿಟ್ಟ. ಕೊನೆಗೆ, ''ನೀನು ಹೇಳುವುದು ಖಂಡಿತವೋ?'' ಎಂದುಸಿರಿದ. ಅಂಗಡಿಯವ, ''ನೀನು ಬೇರೆ ಯಾರನ್ನಾದರೂ ವಿಚಾರಿಸಬಹುದು. ಕೊನೆಗೆ, ನನ್ನ ಬೆಲೆ ಹದಿನೈದು ಸಾವಿರ ಫ್ರಾಂಕುಗಳು'' ಎಂದ.

ಮಾನ್‌ಷಿಯರ್ ಲ್ಯಾಂಟನ್‌ಗೆ ಆಶ್ಚರ್ಯವೋ ಆಶ್ಚರ್ಯ. ಆಭರಣವನ್ನು ತೆಗೆದುಕೊಂಡು ಹೊರಟ. ಯೋಚಿಸಲು ಕಾಲಾವಕಾಶ ಬೇಕಲ್ಲವೇ? ಹೊರಗೆ ಹೋಗಿ ನಕ್ಕ. ತನಗೆ ತಾನೇ ಹೇಳಿಕೊಂಡ, ''ಎಂತಹ ಮೂರ್ಖ! ನೈಜ ಮತ್ತು ಕೃತಕ ಹರಳುಗಳ ನಡುವಿನ ವ್ಯತ್ಯಾಸವೇ ಗೊತ್ತಿಲ್ಲ.''

ಕೆಲವು ನಿಮಿಷಗಳ ನಂತರ, ಇನ್ನೊಂದು ಅಂಗಡಿಗೆ ಪ್ರವೇಶಿಸಿದ. ಅಂಗಡಿಯ ಯಜಮಾನ ಕೊರಳ ಸರವನ್ನು ನೋಡಿದ ತಕ್ಷಣವೇ, ''ಓ! ನನಗೆ ಗೊತ್ತು, ಇಲ್ಲೇ ಅದನ್ನು ಕೊಂಡಿದ್ದು'' ಎಂದ. ಮಾನ್‌ಷಿಯರ್ ಲ್ಯಾಂಟನ್‌ಗೆ ಗಲಿಬಿಲಿಯಾಯಿತು. ಕೇಳಿದ, ''ಇದರ ಬೆಲೆ ಎಷ್ಟು?''

''ಸರಿ ನಾನು ಇದನ್ನು ಇಪ್ಪತ್ತು ಸಾವಿರ ಫ್ರಾಂಕುಗಳಿಗೆ ಮಾರಿದ್ದೆ. ಇದರ ಮೂಲ ಹಕ್ಕನ್ನು ಸಾಬೀತುಪಡಿಸಿದರೆ, ಇದನ್ನು ಹದಿನೆಂಟು ಸಾವಿರ ಫ್ರಾಂಕುಗಳಿಗೆ ಕೊಳ್ಳಲು ಸಿದ್ಧನಿದ್ದೇನೆ.''

ಈಗ ಲ್ಯಾಂಟನ್ ಮೂಕವಿಸ್ಮಿತನಾಗಿ ಉತ್ತರಿಸಿದ, ''ಆದರೆ... ಆದರೆ... ಅದನ್ನು ಒಮ್ಮೆ ಪರೀಕ್ಷಿಸಿ ಇಲ್ಲಿಯವರೆಗೆ ನಾನು ಅದನ್ನು ಕೃತಕ ಹರಳೆಂದು ಭಾವಿಸಿದ್ದೆ.''

ಜ್ಯುಯೆಲರ್, ''ನಿಮ್ಮ ಹೆಸರೇನು? ಸರ್'' ಎಂದು ಕೇಳಿದ.

''ನನ್ನ ಹೆಸರು ಲ್ಯಾಂಟನ್, ಅಂತರ್ ವಿಭಾಗದ ಮಂತ್ರಿಯ ಕಛೇರಿಯಲ್ಲಿ ಒಬ್ಬ ನೌಕರ. ನನ್ನ ವಿಳಾಸ ನಂ. ೧೬, ರೂ.ಡಿ. ಮಾರ್ಟಿಯರ್ಸ್.''

ಜ್ಯುಯೆಲರ್ ದಾಖಲೆಗಳನ್ನು ಸಂಶೋಧಿಸಿದ. ದಾಖಲೆ ಸಿಕ್ಕಿತು. ''ಕೊರಳ ಸರವನ್ನು ಮ್ಯಾಡಮ್ ಲ್ಯಾಂಟನ್ ಅಡ್ರೆಸ್ ನಂ. ೧೬, ರೂ.ಡಿ. ಮಾರ್ಟಿಯರ್ಸ್‌ಗೆ ಕಳುಹಿಸಲಾಗಿತ್ತು'' ಎಂದ.

ಇಬ್ಬರೂ ಒಬ್ಬರನ್ನೊಬ್ಬರು ಪರಸ್ಪರ ನೋಡಿಕೊಂಡರು. ಜ್ಯುಯೆಲರಿ ಅಂಗಡಿಯ ಯಜಮಾನನಿಗೆ ಅವನು ಕಳ್ಳನಿರಬಹುದೆಂಬ ಅನುಮಾನ ಬಂತು. ''ಇದು ಇಪ್ಪತ್ತನಾಲ್ಕು ಗಂಟೆ ನನ್ನಲ್ಲೇ ಇರಲಿ. ರಶೀದಿ ಕೊಡುತ್ತೇನೆ'' ಎಂದ.

''ಖಂಡಿತವಾಗಿ ಆಗಲಿ'' ಎಂದು ಹೇಳಿ ಲ್ಯಾಂಟನ್ ರಶೀದಿ ಪಡೆದು ಹೊರಟುಹೋದ. ಬೀದಿಯಲ್ಲಿ ಯಾವುದೇ ಗುರಿ ಇಲ್ಲದೆ ಅಲೆದ. ಮನಸ್ಸಿನಲ್ಲಿ ಭೀತಿಯ ಗಡಿಬಿಡಿ. ತರ್ಕಿಸಿದ. ಅಂತಹ ಬೆಲೆ ಬಾಳುವ ಆಭರಣವನ್ನು ಕೊಳ್ಳಲು ತನ್ನಿಂದಲಂತೂ ಸಾಧ್ಯವಿಲ್ಲ. ಅಂದರೆ ಅದು ಅವಳಿಗೆ ಯಾರೊ ಕೊಟ್ಟ ಉಡುಗೊರೆ ಇರಬಹುದು. ಯಾರಿಂದ? ಏತಕ್ಕೆ?? ಮಧ್ಯ ರಸ್ತೆಯಲ್ಲಿ ನಿಂತೇ ಇದ್ದ. ಭಯಾನಕ ಶಂಕೆಯೊಂದು ಮನಸ್ಸಿನಲ್ಲಿ ಉದ್ಭವಿಸಿತು. ಅವಳು? ಅಂದರೆ ಉಳಿದ ಎಲ್ಲಾ ಹರಳುಗಳೂ ಉಡುಗೊರೆಯೇ ಇರಬೇಕು! ಭೂಮಿಯೇ ತನ್ನ ಪಾದದಡಿ ಕಂಪಿಸಿದಂತಾಯಿತು. ಎದುರಿಗಿದ್ದ ಮರ ಕುಸಿದು ಬೀಳು ವಂತಿತ್ತು. ಕೈಗಳನ್ನು ಮೇಲಕ್ಕೆತ್ತಿ ಎಚ್ಚರ ತಪ್ಪಿ ನೆಲಕ್ಕೆ ಬಿದ್ದ. ಕಣ್ಣು ಬಿಟ್ಟಾಗ ಯಾವುದೋ ಆಸ್ಪತ್ರೆಯಲ್ಲಿದ್ದ. ನಂತರ ಮನೆ ಸೇರಿದ. ಕೊಠಡಿಯಲ್ಲಿ ಬಾಗಿಲು ಹಾಕಿಕೊಂಡು ಹಾಸಿಗೆಯ ಮೇಲೆ ಹೊರಳಾಡಿದ. ನಿದ್ರೆಯಿಲ್ಲದೆ ಸಂಕಟದಲ್ಲಿ ಇಡೀ ರಾತ್ರಿ ಕಳೆದ.

ಮಾರನೇ ದಿನ ಎದ್ದು ಆಫೀಸಿಗೆ ಹೊರಡಲು ಸಿದ್ಧನಾದ. ಅಂತಹ ಮಾನಸಿಕ ಆಘಾತದ ನಂತರ ಕೆಲಸ ಮಾಡುವುದು ಕಷ್ಟ. ಕ್ಷಮೆಯಾಚಿಸಿ ಅಧಿಕಾರಿಗೆ ಪತ್ರ ಕಳುಹಿಸಿದ. ಜ್ಯುಯೆಲರ್ ಬಳಿಗೆ ಹೋಗುವುದನ್ನು ಜ್ಞಾಪಿಸಿಕೊಂಡ. ಅಪೇಕ್ಷಿಸದಿದ್ದರೂ ಸರವನ್ನು ಪಡೆಯಲಾದರೂ ಹೋಗಲೇಬೇಕು. ವಸ್ತ್ರಧರಿಸಿ ಹೊರಗೆ ಹೊರಟ.

ಅದೊಂದು ಸುಂದರ ದಿನ. ಸ್ವಚ್ಛ ನೀಲಿ ಆಗಸ ಕೆಳಗಿನ ಜನಭರಿತ ಪಟ್ಟಣದ ಮೇಲೆ ನಗೆ ಚೆಲ್ಲಿತು. ವಿಶ್ರಾಂತಿ ಪ್ರಿಯ ಜನರು ಜೇಬಿನಲ್ಲಿ ಕೈತೂರಿ ಅಲೆಯುತ್ತಿದ್ದರು. ಮಾನ್‌ಷಿಯರ್ ಲ್ಯಾಂಟನ್ ತನ್ನಲ್ಲೇ ಹೇಳಿಕೊಂಡ, ''ಸಿರಿವಂತರು ಸುಖಿಗಳು. ಹಣದ ಪ್ರಭಾವದಿಂದ ಆಳವಾದ ದುಃಖವನ್ನು ಮರೆಯಲು ಸಾಧ್ಯ. ದೇಶವಿದೇಶ ಪರ್ಯಟನೆ ದುಃಖ ಮರೆಯಲು ಉತ್ತಮ ಉಪಾಯ. ನಾನು ಸಿರಿವಂತನಾಗಿದ್ದಿದ್ದರೆ!''

ಹಸಿವು ಕಾಡಿತು. ಜೇಬಿನಲ್ಲಿ ಪುಡಿ ಕಾಸೂ ಇಲ್ಲ. ಕಂಠಸರ ನೆನಪಿಗೆ ಬಂತು. ಹದಿನೆಂಟು ಸಾವಿರ ಫ್ರಾಂಕುಗಳು! ಹದಿನೆಂಟು ಸಾವಿರ ಫ್ರಾಂಕುಗಳು!

ಜ್ಯುಯೆಲರಿ ಅಂಗಡಿ ಬಳಿ ಬಂದು ನಿಂತ, ಇಪ್ಪತ್ತು ಬಾರಿ ಒಳಗೆ ಪ್ರವೇಶಿಸಲು ಪ್ರಯತ್ನಿಸಿದ. ಯಜಮಾನ ಕೂಡಲೇ ಹೊರಗೆ ಬಂದ. ದೈನ್ಯತೆಯಿಂದ ಆಸನದಲ್ಲಿ ಕೂರಿಸಿದ. ಅಂಗಡಿಯ ಕಾರಕೂನರು ಪರಿಚಯದ ದೃಷ್ಟಿ ಬೀರಿದರು.

''ಮಾನ್‌ಷಿಯರ್ ಲ್ಯಾಂಟನ್. ವಿಷಯವನ್ನು ಪರಿಶೀಲಿಸಿದೆವು. ತಾವು ಹರಳುಗಳನ್ನು ಮಾರಲು ಸಿದ್ಧವಿದ್ದರೆ, ತಾವು ತಿಳಿಸಿದ ಬೆಲೆಗೆ ಕೊಳ್ಳಲು ಸಿದ್ಧ'' ಎಂದು ಅಂಗಡಿ ಮಾಲೀಕ ಹೇಳಿದ. ''ನಿಜವಾಗಲೂ ಸ್ವಾಮಿ!'' ಎಂದು ತೊದಲಿದ ಲ್ಯಾಂಟನ್. (ಲ್ಯಾಟಿನ್ ಭಾಷೆಯಲ್ಲಿ).

ಅಂಗಡಿಯವ ಸಾವಿರ ಫ್ರಾಂಕುಗಳ ಹದಿನೆಂಟು ನೋಟುಗಳನ್ನು ಕೊಟ್ಟ. ಲ್ಯಾಂಟನ್ ಕಂಪಿಸುತ್ತಿರುವ ಕೈಯಲ್ಲಿ ಸಹಿ ಹಾಕಿ ಹಣವನ್ನು ಜೇಬಿಗೆ ತೂರಿಸಿದ.

ಹೋಗುವುದಕ್ಕೆ ಮೊದಲು ತಿಳಿನಗು ತೇಲುತ್ತಿರುವ ಮುಖದ ಯಜಮಾನನನ್ನು, ''ನನ್ನಲ್ಲಿ ಇನ್ನೂ ತುಂಬ ಹರಳುಗಳಿವೆ. ಅದೇ ಮೂಲದಿಂದ ಬಂದವು. ಅವುಗಳನ್ನೂ ಕೊಳ್ಳುವೆಯಾ?'' ಎಂದು ಹೇಳಿದ. ಯಜಮಾನ ತಲೆಬಾಗಿಸಿ ''ಖಂಡಿತ ಸರ್'' ಎಂದ. ಲ್ಯಾಂಟನ್ ಗಂಭೀರವಾಗಿ ''ಅವುಗಳನ್ನು ನಿಮಗೆ ತಂದು ಕೊಡುತ್ತೇನೆ'' ಎಂದ.

ಒಂದು ಘಂಟೆಯ ನಂತರ ಮತ್ತೆ ಹರಳುಗಳೊಂದಿಗೆ ಬಂದ. ದೊಡ್ಡ ಕಿವಿಯೋಲೆಯ ಹರಳುಗಳಿಗೆ ಇಪ್ಪತ್ತು ಸಾವಿರ ಫ್ರಾಂಕುಗಳು, ಬ್ರೇಸ್‌ಲೆಟ್‌ಗಳಿಗೆ ಮೂವತ್ತೈದು ಸಾವಿರ ಫ್ರಾಂಕುಗಳು, ಉಂಗುರಗಳಿಗೆ ಹದಿನಾರು ಸಾವಿರ, ಹರಳು ಜೋಡಿಸಿದ ಬಂಗಾರದ ಚೈನಿಗೆ ನಲವತ್ತು ಸಾವಿರ ಫ್ರಾಂಕುಗಳು. ಒಟ್ಟಿನಲ್ಲಿ ನೂರ ನಲವತ್ತ ಮೂರು ಸಾವಿರ ಫ್ರಾಂಕುಗಳು. ಜ್ಯುಯೆಲರ್ ತಮಾಷೆಯಿಂದ, ''ಯಾವನೋ ಪುಣ್ಯಾತ್ಮ ಅವಳ ಸಂಪಾದನೆಯನ್ನು ಎಲ್ಲಾ ಅಮೂಲ್ಯ ಹರಳುಗಳಲ್ಲಿ ತೊಡಗಿಸಿದ್ದಾನೆ'' ಎಂದ. ಮಾನ್‌ಷಿಯರ್ ಲ್ಯಾಂಟನ್, ''ತನ್ನ ಹಣವನ್ನು ತೊಡಗಿಸುವ ಇನ್ನೊಂದು ದಾರಿ, ಅದು'' ಎಂದು ಉತ್ತರಿಸಿದ.

ಅಂದೇ ವಾಯ್‌ನಿನ್ಸ್‌ಗೆ ಭೇಟಿಕೊಟ್ಟು, ಬಾಟಲಿಗೆ ಇಪ್ಪತ್ತು ಫ್ರಾಂಕ್ ಬೆಲೆಯ ಒಂದು ಬಾಟಲ್ ಮದ್ಯ ಸೇವಿಸಿದ. ನಂತರ ಒಂದು ಗಾಡಿಯನ್ನು ಬಾಡಿಗೆಗೆ ತೆಗೆದುಕೊಂಡು 'ಬಾಯಿನಿ' ಊರಿನ ಪ್ರಯಾಣ ಪೂರೈಸಿದ, ಎಲ್ಲರನ್ನೂ ತಿರಸ್ಕಾರದ ದೃಷ್ಟಿಯಿಂದ ನೋಡುತ್ತಾ ಅಲೆದ.

''ನಾನೂ ಸಿರಿವಂತ. ಇನ್ನೂರು ಸಾವಿರ ಫ್ರಾಂಕುಗಳ ಸರದಾರ!''

ಕೂಡಲೇ ತನ್ನ ಆಫೀಸ್‌ಅನ್ನು ಜ್ಞಾಪಿಸಿಕೊಂಡ. ಆಫೀಸಿನೊಳಗೆ ಪ್ರವೇಶಿಸಿ, ''ನಾನು ನನ್ನ ಕೆಲಸಕ್ಕೆ ರಾಜಿನಾಮೆ ಕೊಡಲಿಕ್ಕೆ ಬಂದಿದ್ದೇನೆ. ನನಗೆ ಮುನ್ನೂರು ಸಾವಿರ ಫ್ರಾಂಕುಗಳ ಮೊಬಲಗಿನ ಪಿತ್ರಾರ್ಜಿತ ಹಕ್ಕು ಬಂದಿದೆ'' ಎಂದು ಹೆಮ್ಮೆಯಿಂದ ನುಡಿದ. ತನ್ನ ಸಹೋದ್ಯೋಗಿಗಳ ಕೈ ಕುಲುಕಿ ಭವಿಷ್ಯ ಯೋಜನೆಗಳನ್ನು ನಿರೂಪಿಸಿದ.

ನಂತರ 'ಆಂಗ್ ಲಾಯಿಸ್' ಹೋಟೇಲಿಗೆ ಊಟಕ್ಕೆ ತೆರಳಿದ. ಸಿರಿವಂತರ ಸಾಲಿನಲ್ಲಿ ಕುಳಿತ. ಪಕ್ಕದಲ್ಲಿದ್ದ ಒಬ್ಬ ಸಿರಿವಂತನಿಗೆ ಗುಟ್ಟಾಗಿ, ''ನನಗೆ ಪಿತ್ರಾರ್ಜಿತ ನಾಲ್ಕು ನೂರು ಸಾವಿರ ಫ್ರಾಂಕುಗಳ ಮೊಬಲಗಿನ ಹಕ್ಕು ಬಂದಿದೆ'' ಎಂದು ಕೊಚ್ಚಿಕೊಂಡ.

ಜೀವನದಲ್ಲಿ ಪ್ರಪ್ರಥಮವಾಗಿ ಥಿಯೇಟರಿನಲ್ಲಿ ಬೇಸರವಾಗಲಿಲ್ಲ. ರಾತ್ರಿಯ ಉಳಿದ ಭಾಗವನ್ನು ಆನಂದೋದ್ರೇಕದಲ್ಲಿ ಕಳೆದ.

ಆರು ತಿಂಗಳ ನಂತರ ಪುನಃ ಮದುವೆಯಾದ. ಎರಡನೇ ಹೆಂಡತಿ ತುಂಬಾ ಸಭ್ಯ ಗೃಹಿಣಿ. ಆದರೆ ತುಂಬಾ ಕೋಪಿಷ್ಠೆ. ತುಂಬಾ ದುಃಖ ಕೊಟ್ಟಳು.

ಕನ್ನಡದಲ್ಲಿ ನಿರೂಪಣೆ : **ಬಿ. ಆರ್. ಭೀಮಾಚಾರ್** ಆಶ್ರಯ : **ಬಿ. ಆರ್. ಆನಂದ**
'ಅನುಗ್ರಹ', ೨ನೇ ಮುಖ್ಯರಸ್ತೆ, ೨ನೇ ಅಡ್ಡರಸ್ತೆ, ಎಸ್. ಬಿ. ಬಡಾವಣೆ
ವಿದ್ಯಾನಗರ, ಚಿತ್ರದುರ್ಗ ಜಿಲ್ಲೆ

# ಗಣಿತಶಾಸ್ತ್ರ ಎಂದರೇನು?

ಗಣಿತಶಾಸ್ತ್ರ ಎಂದರೇನು ? – ಈ ಪ್ರಶ್ನೆ ಪ್ಲೇಟೋ ಕಾಲದಿಂದಲೂ ಗಣಿತಶಾಸ್ತ್ರಜ್ಞರಾದಿಯಾಗಿ ಅನೇಕ ತತ್ವಜ್ಞಾನಿಗಳು ಮತ್ತು ವಿಜ್ಞಾನಿಗಳೆಲ್ಲರ ತಲೆ ಕೆಡಿಸಿದೆ. ಈವರೆಗೂ ಸರಿಯಾಗಿ ಉತ್ತರ ಸಿಕ್ಕಿಲ್ಲ. ೨೦೦೦ ವರ್ಷಗಳಿಂದ ಅನೇಕ ಉತ್ತರಗಳನ್ನು ನೀಡಿದ್ದಾರೆ. ಯಾವುದೂ ಕಾಲಪರೀಕ್ಷೆಯಲ್ಲಿ ಅಥವಾ ವಿಮರ್ಶೆಯಲ್ಲಿ ಸ್ಥಿರಪಟ್ಟಿಲ್ಲ. ಕ್ರಿಸ್ತಪೂರ್ವ ೫೫೦ರ ಸುಮಾರಿಗೆ ಹುಟ್ಟಿಕೊಂಡ ಪೈಥಾಗೊರಸನ ಪಂಥದ ಕಾಲದಿಂದಲೂ ಈ ಪ್ರಶ್ನೆಯ ಬಗ್ಗೆ ವಿಶ್ಲೇಷಣೆ ಮತ್ತು ಚರ್ಚೆ ನಡೆಯುತ್ತಲೇ ಇದೆ. ಗಣಿತ ಶಾಸ್ತ್ರದ ಸ್ವರೂಪವೇ ಗೂಢ ಹಾಗೂ ವಿಸ್ತೃತ.

ಒಂದು ಕಥೆ ನೆನಪಾಗುತ್ತೆ. ಹಲವಾರು ಕುರುಡರು ಒಂದು ಆನೆಯನ್ನು ವಿವರಿಸಿದ ಕಥೆ. ಪ್ರತಿಯೊಬ್ಬರೂ ಆನೆಯನ್ನು ಮುಟ್ಟಿ ತಾವು ಮುಟ್ಟಿದ ಆನೆಯ ದೇಹದ ಭಾಗವಷ್ಟೇ ಆನೆಯೆಂದು ವಿವರಿಸಿದ ಕಥೆಯದು. ಅಂತೆಯೇ ಗಣಿತವೂ ಕೂಡ. ಅವರವರ ಅನುಭವಕ್ಕೆ ಸೀಮಿತವಾಗಿ ಅದರ ವ್ಯಾಖ್ಯಾನವಿತ್ತಿದ್ದಾರೆ. ಯಾವುದೂ ಸುಳ್ಳಲ್ಲ, ಆದರೆ ಎಲ್ಲವೂ ಅಪೂರ್ಣ.

ಪ್ರಾಯಶಃ ನಮ್ಮದೇ ಅನುಭವಗಳನ್ನು ನೆನಪು ಮಾಡಿಕೊಂಡರೆ ಇದು ಸ್ಪಷ್ಟವಾಗುವುದು. ವಸ್ತುಗಳನ್ನು ಎಣಿಸುವುದರ ಮೂಲಕ ನಮ್ಮ ಗಣಿತಾನುಭವ ಆರಂಭವಾದದ್ದು. ಅದಕ್ಕೂ ಮುಂಚೆ ನಮ್ಮರಿವಿಲ್ಲದೆ ಪರಿಮಾಣಗಳನ್ನು ಹೋಲಿಸುವುದರ ಮೂಲಕ ಆರಂಭವಾಗಿದೆ. ಆನಂತರ ಅಂಕಗಣಿತದ ಮೂಲಕ್ರಿಯೆಗಳನ್ನು ಕಲಿತೆವು. ಆ ಘಟ್ಟದಲ್ಲಿ ನಮಗೆ ಗಣಿತ ಅಂದರೆ ಅಷ್ಟೇ ಅನ್ನಿಸಿತ್ತು. ಸ್ವಲ್ಪ ಬೆಳೆದಂತೆ ನಮ್ಮ ಕೆಲವು ದೈನಂದಿನ ಸಮಸ್ಯೆಗಳನ್ನು ಅವ್ಯಕ್ತ ಪದಗಳಿಂದ ಸಾಮಾನ್ಯೀಕರಣಗೊಳಿಸಲು ಆರಂಭಿಸಿದಾಗ ಅದು ಬೀಜಗಣಿತದ ಕಲ್ಪನೆಗೆ ನಾಂದಿ ಆಯಿತು. ಇದರ ಜೊತೆ ಜೊತೆಗೆ, ನಮ್ಮಲ್ಲಿ ಪ್ರಾಥಮಿಕ ರೇಖಾಗಣಿತದ ಸಹಜಜ್ಞಾನವೂ ಸಹ ಇತ್ತು. ಆದರೆ ಆ ಜ್ಞಾನಕ್ಕೆ ಯಾವೊಂದು ಸ್ಪಷ್ಟ ಶಾಸ್ತ್ರೀಯ ರೂಪವಿರಲಿಲ್ಲ. ಅದು ಒಂದು ರೂಪಕ್ಕೆ ಬಂದಾಗ ಗಣಿತವೆಂದರೆ ಸಂಖ್ಯೆಗಳು ಮತ್ತು ವ್ಯೋಮದ ಅಧ್ಯಯನ ಶಾಸ್ತ್ರವೆಂದು ವ್ಯಾಖ್ಯಾನಿಸಲಾಯಿತು.

ಗಣಿತಶಾಸ್ತ್ರದ ಬೆಳವಣಿಗೆಯ ಮೂಲವು ವ್ಯಾವಹಾರಿಕ ಅವಶ್ಯಕತೆ ಎನ್ನುವುದೇನೋ ನಿಜ. ಆದರೆ, ಈ ಶಾಸ್ತ್ರ ಬೆಳೆದಂತೆ ತಕ್ಷಣದ ಉಪಯುಕ್ತತೆಯ ಮಿತಿಯನ್ನು ಮೀರಿ ಒಂದು ಅಮೂರ್ತರೂಪವನ್ನು ಪಡೆಯಿತು.

ಭಾರತದಲ್ಲಿ ಉಪನಿಷತ್ತು ಮತ್ತು ವೇದಗಳ ಕಾಲದಿಂದಲೂ ಮನುಷ್ಯ ತರ್ಕಬದ್ಧವಾಗಿ ಆಲೋಚಿಸಬಲ್ಲನೆಂದು ತಿಳಿದಿದೆ. ಆದರೆ, ಪಾಶ್ಚಿಮಾತ್ಯ ದಾಖಲೆಗಳಲ್ಲಿ ಇದನ್ನು ಪ್ರಾಚೀನ ಗ್ರೀಕರ ಕಾಲದ್ದೆಂದು ನಮೂದಿಸಲಾಗಿದೆ. ಸಾಮಾನ್ಯವಾಗಿ ಏಷ್ಯಾ, ಅದರಲ್ಲೂ ಭಾರತ ಮೂಲದ ಯಾವುದೇ ಜ್ಞಾನ ಯಾವಾಗಲೂ ಪಾಶ್ಚಿಮಾತ್ಯ ಮೂಲದ್ದೆಂದು ಪ್ರತಿಪಾದಿಸಿ ದಾಖಲಿಸುವ ಚಾಳಿ ಇದೆ. ಗಣಿತಶಾಸ್ತ್ರದ ಇತಿಹಾಸ ಓದಿದರೆ ಅದು ತಾನಾಗಿಯೇ ಗೋಚರಿಸುತ್ತದೆ. ಸದ್ಯ ಈ ವಿಷಯ ಬೇಡ.

ಗಣಿತ ಅಂದರೆ, ಕೇವಲ ಕೆಲವು ಪದಗಳ ಅರ್ಥವ್ಯಾಖ್ಯೆ ಮತ್ತು ಕೆಲವು ಆಧಾರಸೂತ್ರಗಳಿಂದ ತಾರ್ಕಿಕವಾಗಿ ಸ್ಥಿರಪಟ್ಟ ಪ್ರಮೇಯಗಳ ಅಥವಾ ತೀರ್ಮಾನಗಳ ಒಂದು ಸಂಕಲನವೆಂದಾಗಿದ್ದರೆ, ಪ್ರಾಯಶಃ ಗಣಿತಶಾಸ್ತ್ರವು ಕೇವಲ ಅರ್ಥವ್ಯಾಖ್ಯೆಗಳು, ನಿಯಮಗಳು ಮತ್ತು ತರ್ಕವಿಧಾನಗಳಿಂದ ಕೂಡಿದ ಒಂದು ಕ್ರೀಡೆಯಾಗುತ್ತಿತ್ತೇ ವಿನಾ ಯಾವ ಬುದ್ಧಿವಂತನೂ ಅದಕ್ಕೆ ಆಕರ್ಷಿತನಾಗುತ್ತಿರಲಿಲ್ಲ ಅಥವಾ ಬೇಕಿರಲಿಲ್ಲ.

ಉದಾಹರಣೆಗೆ ಈ ಸೂತ್ರವನ್ನು ಗಮನಿಸೋಣ :

$$\sum n^2 = \frac{n(n+1)(2n+1)}{6}$$

ಈ ಸೂತ್ರದಲ್ಲಿ ಮೊದಲ n ಸ್ವಾಭಾವಿಕ ಸಂಖ್ಯೆಗಳ (Natural numbers) ವರ್ಗಗಳ ಮೊತ್ತವನ್ನು ಕೊಡುತ್ತದೆ. ಈ ಸೂತ್ರವನ್ನು ಗಣಿತಾನುಮಾನದ ವಿಧಾನ (Mathematical Induction) ದಿಂದ ಸುಲಭವಾಗಿ ಸಿದ್ಧಪಡಿಸಬಹುದು. ಆದರೆ, ಅದಕ್ಕೆ ಮೊದಲು ಈ ಸೂತ್ರದ ಕಲ್ಪನೆ ಹೇಗೆ ಬಂತೆಂಬುದು ಎಲ್ಲೂ ಸೂಚಿತವಾಗಿಲ್ಲ.

ಎಚ್. ಎಲ್. ಎಸ್. ರಾವ್




ಇದರಿಂದ ಗಣಿತದಲ್ಲಿ ಒಂದು ರಚನಾತ್ಮಕ ಅಂಶ ಇರುವುದು ನಮಗೆ ತಿಳಿಯುತ್ತದೆ. ಒಂದು ಆಧಾರ ಕಲ್ಪನೆ ಹೇಗೆ ಉತ್ಪತ್ತಿ ಆಗುತ್ತದೆ ಎಂಬುದಕ್ಕೆ ಯಾವುದೇ ಸಾಮಾನ್ಯ ಸೂತ್ರವಿಲ್ಲ. ಇದರಲ್ಲಿಯೇ ಪ್ರಯೋಗ, ಸಾದೃಶ್ಯ ಮತ್ತು ರಚನಾತ್ಮಕ ಅಂತಃಪ್ರೇರಣೆ ಕೆಲಸ ಮಾಡುವುದು. ಇದಕ್ಕೆ ಬೇಕಾದಷ್ಟು ಉದಾಹರಣೆಗಳಿವೆ. ಶ್ರೀನಿವಾಸ ರಾಮಾನುಜನ್ ಅವರು ಪ್ರಚುರಪಡಿಸಿದ ಪ್ರಮೇಯ ಮತ್ತು ಸೂತ್ರಗಳಲ್ಲಿ ಹೆಚ್ಚಿನವುಗಳನ್ನು ಅವರೇನೂ ಸಿದ್ಧಪಡಿಸಲಿಲ್ಲ (ಆ ಕೆಲಸ ಈಗ ನಡೆಯುತ್ತಿದೆ). ಅವುಗಳೆಲ್ಲ ಅವರ ಕುಲದೇವತೆಯಾದ ನಾಮಗಿರಿ ದೇವತೆಯ ಪ್ರೇರಣೆ ಎಂದು ಅವರೇ ಹೇಳಿದ್ದಾರೆ. ಅಂದರೆ ಅವೆಲ್ಲಕ್ಕೂ ಅವರ ಅಂತಃಪ್ರೇರಣೆಯೇ ಕಾರಣವೆಂದು ನಾವು ತರ್ಕಿಸಬಹುದು.

ಒಟ್ಟಿನಲ್ಲಿ, ಪಂಡಿತ ಪಾಮರರಿಬ್ಬರಿಗೂ ನಮ್ಮ ಮೂಲ ಪ್ರಶ್ನೆಗೆ ತಾತ್ವಿಕವಾಗಿ ಯಾವ ಉತ್ತರವೂ ಸಿಗಲಾರದು. ಕೇವಲ ಗಣಿತದ ಅನುಭವ ಮಾತ್ರ ಆ ಪ್ರಶ್ನೆಗೆ ಉತ್ತರವಾಗಬಹುದು. ಅದೊಂದೇ ಮಾರ್ಗೋಪಾಯ. ಹಾಗಾದರೆ ನಮಗೆ ಈ ಮಾರ್ಗದಿಂದ ಉತ್ತರ ಸಿಗುವುದೆಂದಾಯಿತು, ಅಲ್ಲವೆ ?

Mathematics is the Mother of all Sciences. – ತಾಯಿ ಹೆಂಗಸು. ಇತ್ತೀಚೆಗೆ ಅಂತರ್ಜಾಲದಲ್ಲಿ ಯಾರೋ ಒಬ್ಬರು ಒಂದು ಉದ್ಗಾರವೆತ್ತಿದ್ದಾರೆ : "At last a book to understand a woman". ಆ ಪುಸ್ತಕದ ಒಂದು

ಚಿತ್ರವನ್ನೂ ಕೊಟ್ಟಿದ್ದಾರೆ. ಆದರೆ ಆ ಪುಸ್ತಕವನ್ನು ಒಂದು ಜೀವಮಾನದಲ್ಲಿ ಓದಿ ಮುಗಿಸಲು ಸಾಧ್ಯವಿಲ್ಲ.

ಗಣಿತಾಭ್ಯಾಸಿಗಳಿಗಷ್ಟೇ ಅಲ್ಲ, ಇತರರಿಗೂ ಸಹ ಗಣಿತದಲ್ಲಿ ಕಾಣುವಷ್ಟು ವಿವಿಧ ರೂಪಗಳು ಬೇರಾವ ವಿಜ್ಞಾನದಲ್ಲಿಯೂ ಪ್ರಾಯಶಃ ಕಾಣಲಾರವು. ಹೊಸ ಹೊಸ ಆಲೋಚನೆಗಳನ್ನು ಪ್ರೇರೇಪಿಸುತ್ತಾ ಎಲ್ಲೆಡೆ ತಲುಪಿದಂತೆ ಕಂಡೂ ತಲುಪಲಾರದ ಗುರಿಯ ಕಡೆ ಸಾಗುತ್ತಾ ಗಣಿತಶಾಸ್ತ್ರವು ಬೆಳೆದಿದೆ.

ಗಣಿತದ ವಸ್ತುಗಳು ಭೌತಿಕ ಅಥವಾ ರಾಸಾಯನಿಕ ವಸ್ತುಗಳಂತೆ ಮೂರ್ತರೂಪ ಹೊಂದಿರುವುದಿಲ್ಲ. ಅವು ಅಮೂರ್ತ ಸ್ವರೂಪದ್ದಾಗಿವೆ. ಈ ಅಮೂರ್ತತೆಗೆ ಅನಂತ ವಿಸ್ತಾರವಿದ್ದು, ಅದರ ಆಲೋಚನೆಗಳೂ ಸಹ ಮಿತಿಯಿಲ್ಲದೆ ಕ್ರಮಿಸುತ್ತಾ ಇವೆ. ಹೀಗಾಗಿ ಗಣಿತವೂ ಶಾಖೋಪಶಾಖೆಗಳಾಗಿ ಬೆಳೆದು ಹೆಮ್ಮರದಂತಿದೆ. ಮನುಷ್ಯನು ಕಲ್ಪನಾಲೋಕ ದಲ್ಲಿ ವಿಹರಿಸುವಾಗ ಮಿತಿ ಎಲ್ಲಿಯದು ? ನೀಲಾಕಾಶದಲ್ಲಿ ಹೇಗೆ ಬೇಕಾದರೂ ಹಾರುವ ಪಕ್ಷಿಗಳ ಹಾಗೆ ಮತ್ತು ಕಾಡಿನಲ್ಲಿ ಕಲ್ಲು ಮುಳ್ಳುಗಳ ನಡುವೆ ಮನಬಂದ ಹಾಗೆ ಓಡಾಡಿ ಎಲ್ಲೆಲ್ಲೋ ಹರಿದು ಹೋಗಿರುವ ಕಾಲುದಾರಿಗಳ ಹಾಗೆ ಗಣಿತಶಾಸ್ತ್ರ ದಟ್ಟವಾಗಿ ಹರಡಿದೆ.

ಗಣಿತಶಾಸ್ತ್ರದ ಅಧ್ಯಯನದಲ್ಲಿ ಒಂದು ಸೌಂದರ್ಯ ರಸಾನುಭವವೂ ಇದೆ. ಸೌಂದರ್ಯ ಎಂದರೇನೆಂದು ಅರ್ಥ ವಿವರಣೆ ಕಷ್ಟವೇ. ಆದರೆ ಯಾವುದು ಅದರ ನೋಟ, ಅರ್ಥ ಅಥವಾ ಇನ್ನ್ಯಾವುದೇ ಗುಣದ ಅನುಭವದಿಂದ ಮನಸ್ಸಿಗೆ ಆಹ್ಲಾದವೆನಿಸುತ್ತದೋ ಅದು ಸುಂದರ ಎನಿಸಿಕೊಳ್ಳುತ್ತದೆ. ಗಣಿತದಲ್ಲಿ ಸಂಖ್ಯಾ ಸಿದ್ಧಾಂತ ಆರಂಭದಿಂದಲೂ ಗಣಿತಜ್ಞರಿಗೆ ಬಹಳ ಆಸಕ್ತಿ ಮೂಡಿಸಿದ ವಿಷಯ. ಸಂಖ್ಯೆಗಳ ರಚನೆಯಲ್ಲಿನ ವಿನ್ಯಾಸಗಳನ್ನು ಗುರುತಿಸುವುದು ಒಂದು ಸುಂದರಾನುಭವ.

ಒಂದು ಸಣ್ಣ ಉದಾಹರಣೆ ಎಂದರೆ ಅವಿಭಾಜ್ಯ ಸಂಖ್ಯೆ (Prime Numbers)ಗಳಿಗೆ ಸಂಬಂಧಪಟ್ಟ ಫರ್ಮಾಟನ ೨-ವರ್ಗ ಪ್ರಮೇಯ. ಅವಿಭಾಜ್ಯ ಸಂಖ್ಯೆಗಳನ್ನು ಎರಡು ಗುಂಪುಗಳಾಗಿ ವಿಂಗಡಿಸಬಹುದು.

ಮೊದಲನೆಯದು, ಸಂಖ್ಯೆ ೪ರಿಂದ ಭಾಗಿಸಿದಾಗ ೧ ಶೇಷ ಉಳಿಯುವ ಅವಿಭಾಜ್ಯ ಸಂಖ್ಯೆಗಳು. ೫, ೧೩, ೧೭, ೨೯, ೩೭, ೪೧, ...

ಎರಡನೆಯದು, ಸಂಖ್ಯೆ ೪ರಿಂದ ಭಾಗಿಸಿದಾಗ ೩ ಶೇಷ ಉಳಿಯುವ ಅವಿಭಾಜ್ಯ ಸಂಖ್ಯೆಗಳು. ೩, ೭, ೧೧, ೧೯, ೨೩, ೩೧,...

# ಎದ್ದು ಹೋದವನು

ಮೈ ಮನಗಳಿಗೆ ತಂಪಾದ
ನೀರ ತೊರೆ, ಹಳ್ಳ ಕೆರೆ
ಬಾವಿ ನದಿಗಳಿಗೆ,
ಜೀವಕ್ಕೆ ಉಸಿರನೂದಿದ
ಎಳೆ ಗಾಳಿಗೆ,

ದಟ್ಟಡವಿಯ ಕತ್ತಲಲಿ
ಕೈ ಹಿಡಿದು ತನ್ನ
ಬೆನ್ನೇರಿಸಿಕೊಂಡು
ನಡೆಸಿದ ಹಾದಿಗೆ,

ಹೊಲದ ಬದುವಿನಲಿ
ತಾನೇ ಹುಟ್ಟಿ ಬೆಳೆದ
ಚೊಗಚಿ ಹೂವಿಗೆ,

ಅನ್ನವಾದ ಜೋಳ,
ರಾಗಿ, ಬತ್ತಗಳ
ತೆನೆಯ ಕಾಳಿಗೆ,

ಹೂವ ಮಕರಂದಕೆ
ಹಗಲಿರುಳು ಹಂಬಲಿಸಿ
ಕಟ್ಟಿದ ಹುಳುವಿನ
ಜೇನುಗೂಡಿಗೆ,

ಕಸದ ಎಳೆಯನು ತಂದು
ಚುಂಚಿನಿಂದ ಚುಚ್ಚಿ, ಚುಚ್ಚಿ
ಪೋಣಿಸಿ ಪೋಷಿಸಿದ
ಗುಬ್ಬಿ ಗೂಡಿಗೆ,

ಹರಕೆ, ಹಾರೈಕೆ
ನಂಬಿಕೆಗಳ ಗುಡಿ
ಗುಂಡಾರಗಳಿಗೆ,

ಒಳಗಿರುವ ದೇವರುಗಳಿಗೂ
ತನ್ನ ಯಜಮಾನಿಕೆಯ
ಹೆಸರ ಕೊರೆಸಿದ
ಮನುಷ್ಯ !!!

* * *

ಡಯಟಿಂಗು, ವಾಕಿಂಗು,
ಯಾವ ಕಿಂಗುಗಳಿಗೂ
ಜಗ್ಗದ ಕುಗ್ಗದ ಗುಡಾಣ

ತುಂಬಿದುದರಕ್ಕೆ
ಹಲಬಗೆಯ ಶೂಲೆಗಳು !!
ಉಳಿದೇ ಹೋಯಿತು
'ಹಸಿವು' ಮತ್ತದರ
ಸುಖ,

ಮೆತ್ತನೆಯ ಕುತನಿ
ಹಾಸಿಗೆಯ ತುಂಬ
ಸೆಂಟಿನ ಹೂವ ಹೊಗೆ,

ಸೊಳ್ಳೆಪರದೆಯ
ಭದ್ರ ಕೋಟೆಯೊಳಗೂ
ಕನಸ ಕದಿಯುವ
ಹಳವಂಡಗಳು !!

ಉಳಿದೇ ಹೋಯಿತು
'ನಿದ್ರೆ' ಮತ್ತದರ
ಸುಖ !!

ಇರುವಷ್ಟು ದಿನ
ಕಾರು, ಬಂಗಲೆ,
ಸೈಟುಗಳ ಲೆಕ್ಕದಲಿ
ತನ್ನಂಥ ಮನಸುಗಳ
ನಡುವೆ ಗೋಡೆ ಎಬ್ಬಿಸಿ
ದ್ವೀಪವಾದ !!



ಉಳಿದೇ ಹೋಯಿತು
ಎಲ್ಲರೊಳಗೊಂದಾಗುವ
ಆ ಸುಖ !!

ಸುಖದ ಬೇಟೆಗೆ ಹೊರಟು
ನೋವಿಗಭಿಮುಖನಾಗಿ
ಗುಡಚಾಪಿ ಕಟ್ಟದೇ
ಎದ್ದು ಹೋದ,
ಯಾರಿಗೂ ಹೇಳದೇ...

**ಮಾರುತಿ ದಾಸಣ್ಣವರ**
ಕನ್ನಡ ಅಧ್ಯಾಪಕ
ಜವಾಹರ ನವೋದಯ ವಿದ್ಯಾಲಯ
ಗಾಳಿಬೀಡು
ಮಡಿಕೇರಿ ತಾಲೂಕು
ಕೊಡಗು ಜಿಲ್ಲೆ - ೫೭೧ ೨೦೧

ಇವುಗಳ ಪೈಕಿ, ಮೊದಲನೆಯ ಗುಂಪಿನ ಯಾವುದೇ ಸಂಖ್ಯೆಯನ್ನು ಎರಡು ಸಂಖ್ಯೆಗಳ ವರ್ಗಗಳ ಮೊತ್ತವನ್ನಾಗಿ ಬರೆಯಬಹುದು.

$೫ = ೧^{೨} + ೨^{೨}$, $೧೩ = ೨^{೨} + ೩^{೨}$, $೧೭ = ೧^{೨} + ೪^{೨}$, $೨೯ = ೨^{೨} + ೫^{೨}$, $೩೭ = ೧^{೨} + ೬^{೨}$, $೪೧ = ೪^{೨} + ೫^{೨}$.

ಆದರೆ, ಎರಡನೆಯ ಗುಂಪಿನ ಸಂಖ್ಯೆಗಳನ್ನು ಈ ರೀತಿ ಬರೆಯಲಾಗುವುದಿಲ್ಲ. ಇದೇ ಫರ್ಮಾಟನ ಪ್ರಮೇಯ.

ಹಾಗೆ ನೋಡಿದರೆ, ಇಡೀ ಸಂಖ್ಯಾ ಸಿದ್ಧಾಂತವೇ ಈ ರೀತಿಯ ಸುಂದರ ವಿನ್ಯಾಸಗಳನ್ನು ತೆರೆದಿಡುತ್ತದೆ.



ಗಣಿತಶಾಸ್ತ್ರದ ಬೆಳವಣಿಗೆಯನ್ನು ನೋಡಿದಾಗ ಅದು ಕೇವಲ ಉಪಯುಕ್ತತೆಯ ದೃಷ್ಟಿಯಿಂದ ಬೆಳೆದಿಲ್ಲವೆಂಬುದು ಗೋಚರವಾಗುತ್ತದೆ. ನನಗೆ ಅನ್ನಿಸುವುದು ತಂತ್ರಜ್ಞಾನ ಅಭಿವೃದ್ಧಿಯ ದೃಷ್ಟಿಯಿಂದ ಒಂದು ನಿರ್ದಿಷ್ಟ ಗುರಿಯಿಂದ ಬೆಳೆದದ್ದೂ ಇದೆ. ಆದರೆ ಹೆಚ್ಚಾಗಿ ಮನುಷ್ಯನ ಯೋಚನಾಲಹರಿ ಹುಚ್ಚೆದ್ದು ಯಾವುದೇ ವಾಸ್ತವಿಕ ಉದ್ದೇಶವಿಲ್ಲದೆ ಅಥವಾ ಕಂಡ ಕಂಡ ಕಡೆ ಕುಣಿಯುತ್ತಾ ಕೇವಲ ಕುತೂಹಲದ ಜಾಡು ಹಿಡಿದು ಹೋಗುವ ಹಾಗೆ ಬೆಳೆದುಬಂದಿದೆ. ಹೀಗೆ ಬೆಳೆಯುತ್ತಾ ಹೋದಾಗ ತಿಳಿದ ಗಣಿತ ಸಿದ್ಧಾಂತಗಳಲ್ಲಿ ಕೆಲವು ವಾಸ್ತವಿಕ ಪ್ರಯೋಜನಕ್ಕೆ ಬಂದಿರಬಹುದು.

''ಗಣಿತಾಭ್ಯಾಸವು ಒಂದು ರೀತಿಯಲ್ಲಿ ಲಾಭದಾಯಕವಲ್ಲದಿದ್ದರೂ ಅಪಾಯಕಾರಿಯಲ್ಲದ ಮತ್ತು ನಿಷ್ಕಳಂಕ ಉದ್ಯೋಗ'' ಎಂದು ೨೦ನೇ ಶತಮಾನದ ಪ್ರಸಿದ್ಧ ಗಣಿತಜ್ಞ ಪ್ರೊಫೆಸರ್ ಡಾ|| ಜಿ. ಎಚ್. ಹಾರ್ಡಿಯವರು ಬಣ್ಣಿಸಿದ್ದಾರೆ. ''ಭಾಷೆ, ಕಲೆ, ಸಂಸ್ಕೃತಿ, ನಾಗರಿಕತೆ ಇವೆಲ್ಲವೂ ನಶಿಸಿಹೋಗಬಹುದು, ಆದರೆ ಗಣಿತದ ಪರಿಕಲ್ಪನೆಗಳು ಮಾತ್ರ ಶಾಶ್ವತ. ಗಣಿತಜ್ಞನು ಒಬ್ಬ ಚಿತ್ರಗಾರ ಅಥವಾ ಒಬ್ಬ ಕವಿಯಂತೆ ವಿನ್ಯಾಸಗಳ ರಚನಾಕಾರ. ಆದರೆ, ಗಣಿತಜ್ಞನ ವಿನ್ಯಾಸಗಳು ಉಳಿದವರ ವಿನ್ಯಾಸಗಳಿಗಿಂತ ಶಾಶ್ವತವಾದವು. ಏಕೆಂದರೆ ಅವು ಪರಿಕಲ್ಪನೆಗಳ ವಿನ್ಯಾಸಗಳು'' ಎಂದೂ ಅವರು ಹೇಳಿದ್ದಾರೆ.

ಈ ವಿನ್ಯಾಸಗಳ ಬಗ್ಗೆ ವಿಮರ್ಶೆ ಮಾಡುವುದಕ್ಕೆ ಅವುಗಳ ಸೌಂದರ್ಯ ಮತ್ತು ವಿಚಾರಶೀಲತೆಗಳೇ ಮಾನದಂಡಗಳಾಗಬೇಕಾಗುತ್ತದೆ. 'ಸೌಂದರ್ಯ'ದ ಬಗ್ಗೆ ಈಗಾಗಲೇ ಮೇಲೆ ಹೇಳಿದೆ. ಒಂದು ಪ್ರಮೇಯ, ಸಿದ್ಧಾಂತ ಅಥವಾ ಯಾವುದೇ ಒಂದು ಗಣಿತಾಂಶವು ವಿಚಾರಶೀಲವಾಗಿದೆಯೆಂದರೆ ಹೊಸ ಹೊಸ ಸಿದ್ಧಾಂತ, ಪ್ರಮೇಯಗಳಿಗೆ ಪ್ರೇರೇಪಿಸುತ್ತದೆ.

ಅವಿಭಾಜ್ಯ ಸಂಖ್ಯೆಗಳು ಅನಂತವೆಂಬ ಯುಕ್ಲಿಡನ ಪ್ರಮೇಯ ಇಡೀ ಅಂಕಗಣಿತದ ರಚನೆಗೆ ಬಹಳ ಮುಖ್ಯವಾಗಿದೆ. ಏಕೆಂದರೆ, ಅಂಕಗಣಿತದಲ್ಲಿ ಪೂರ್ಣಾಂಕಗಳಿಗೆ ಸಂಬಂಧಪಟ್ಟ ಅನೇಕ ಸಿದ್ಧಾಂತಗಳಿಗೆ ಅವಿಭಾಜ್ಯಗಳೇ ಮೂಲವಸ್ತುಗಳಾಗಿವೆ.

ಅಂತೆಯೇ ಪೈಥಾಗೊರಸನ ಲಂಬಕೋನ ತ್ರಿಭುಜದ ಪ್ರಮೇಯ ಮತ್ತು ಅದರ ವಿಸ್ತರಣೆಗಳು, ಸಂಖ್ಯೆಗಳು ಮತ್ತು ಪರಿಮಾಣಗಳ ಬಗ್ಗೆ ಅದುವರೆಗೂ ಇದ್ದ ತಿಳುವಳಿಕೆಯನ್ನು ಬುಡಮೇಲು ಮಾಡಿತು. ಒಂದೇ ರೀತಿಯ ಯಾವುದೇ ಎರಡು ಪರಿಮಾಣಗಳು ಸಮಮಾಪ್ಯ (Commensurable) ಆಗಿವೆಯೆಂಬುದೇ ಬುಡಮೇಲಾದ ಸಿದ್ಧಾಂತ.

ಇದನ್ನು ಅರ್ಥಮಾಡಿಕೊಳ್ಳಲು ಸಮಮಾಪ್ಯತೆ ಎಂಬ ಕಲ್ಪನೆ ಏನೆಂಬುದು ಸ್ಪಷ್ಟವಾಗಬೇಕು.

a ಮತ್ತು b ಎಂಬ ಎರಡು ಪರಿಮಾಣಗಳಲ್ಲಿ a ಪರಿಮಾಣವನ್ನು ಎಷ್ಟು ಸಲ ಹಾಕಿದರೆ b ಪರಿಮಾಣಕ್ಕೆ ಸಮನಾಗುವುದೆಂಬುದೇ ಪ್ರಶ್ನೆ. ಉದಾಹರಣೆಗೆ, ೩ ಅನ್ನು ೮ ಸಲ ಪರಿಗಣಿಸಿದರೆ ೨೪ ಆಗುವುದು. ಆಗ ನಾವು ೨೪ = ೮ x ೩ ಎಂದು ಬರೆಯುತ್ತೇವೆ. ಅದೇ ರೀತಿ, ೪ = ${}^{೨}/_{೩}$ x ೬. ಇಲ್ಲಿ ${}^{೨}/_{೩}$ ಪೂರ್ಣಾಂಕವಲ್ಲ, ಅದು ಒಂದು ಭಾಗಲಬ್ಧ ಸಂಖ್ಯೆ (Rational Number). ಅಂದರೆ, ಒಂದು ಸಂಖ್ಯೆ bಯು ಇನ್ನೊಂದು ಸಂಖ್ಯೆ aಯ ಪೂರ್ಣಾಂಕ ಅಥವಾ ಭಿನ್ನರಾಶಿ (ಭಾಗಲಬ್ಧ ಸಂಖ್ಯೆ)ಯ ಆವರ್ತವಾಗಿರಬಹುದು. ಆಗ ನಾವು $b = n \times a$ ಅಥವಾ $b/a = n$ ಎಂದು ಬರೆಯುತ್ತೇವೆ. ಇಲ್ಲಿ n ಎಂಬುದು ಪೂರ್ಣಾಂಕ ಅಥವಾ ಭಿನ್ನರಾಶಿ (ಭಾಗಲಬ್ಧ ಸಂಖ್ಯೆ) ಆಗಿರಬಹುದು.

ಮೇಲೆ ತಿಳಿಸಿದ ಎರಡೂ ಪ್ರಸಂಗಗಳಲ್ಲಿ a ಮತ್ತು bಗಳನ್ನು ಸಮಮಾಪ್ಯ ಪರಿಮಾಣಗಳೆಂದು ಕರೆಯುತ್ತೇವೆ.

ಒಂದು ವಸ್ತುವಿನ ಉದ್ದವನ್ನು ೪' ಎಂದಾಗ ೧' ಎಂದು ಕರೆಯುವ ಉದ್ದದ ಮತ್ತೊಂದು ವಸ್ತುವಿನ ಉದ್ದವನ್ನು ೪ ಸಲ ಆವರ್ತಿಸಿದರೆ ಮೊದಲಿನ ವಸ್ತುವಿನ ಉದ್ದಕ್ಕೆ ಸಮನಾಗಿರುತ್ತದೆ. ಅಂದರೆ ೪' = ೪ x೧' ಅಥವಾ ಒಂದು ವಸ್ತುವಿನ ತೂಕ ೩${}^{೧}/_{೨}$ ಕೆ.ಜಿ. ಎಂದಾಗ ಅರ್ಧ ಕೆ.ಜಿ. ಎಂದು ಕರೆಯುವ ತೂಕದ ಮತ್ತೊಂದು ವಸ್ತುವಿನ ತೂಕವನ್ನು ೭ ಸಲ ಆವರ್ತಿಸಿದರೆ ಮೊದಲಿನ ವಸ್ತುವಿನ ತೂಕಕ್ಕೆ ಸಮನಾಗಿರುತ್ತದೆ. ಇಲ್ಲಿ ೩${}^{೧}/_{೨}$ ಕೆ.ಜಿ. = ೭ x ${}^{೧}/_{೨}$ ಕೆ.ಜಿ. = ೭/೨ x ೧ ಕೆ.ಜಿ.

ವ್ಯಾವಹಾರಿಕವಾಗಿ ಅಳತೆ ಮಾಡಲು ಭಾಗಲಬ್ಧ ಸಂಖ್ಯೆಗಳು (ಪೂರ್ಣಾಂಕಗಳು ಮತ್ತು ಭಿನ್ನರಾಶಿಗಳು) ಸಾಕು.

ಆದರೆ ಕ್ರಿ. ಪೂ. ೪ನೇ ಶತಮಾನದಲ್ಲಿ ಪೈಥಾಗೊರಸ್ ಪಂಥದ ಯುಡಾಕ್ಸಸ್ ಎಂಬ ಗ್ರೀಕ್ ಗಣಿತಜ್ಞನು ಜ್ಯಾಮಿತಿಯ ಮುಖಾಂತರ ಒಂದು ಆಶ್ಚರ್ಯಕರ ಸಂಗತಿಯನ್ನು ತಿಳಿಸಿದ. ಯಾವುದೇ ವೃತ್ತದ ಪರಿಧಿ ಮತ್ತು ಅದರ ವ್ಯಾಸಗಳು ಸಮಮಾಪ್ಯವಲ್ಲವೆಂಬುದೇ ಈ ಹೊಸ ಸಂಗತಿ. ಅಷ್ಟೇ ಅಲ್ಲ, ಯಾವುದೇ ಚೌಕದ ವಿಕರ್ಣ ಮತ್ತು ಅದರ ಭುಜ ಇವು ಸಹ ಸಮಮಾಪ್ಯವಲ್ಲ. ಇಂತಹ ಪರಿಮಾಣಗಳನ್ನು ಅಸಮಮಾಪ್ಯ (Incommensurable) ಎಂದು ಕರೆಯುತ್ತೇವೆ.

ಈ ಶೋಧನೆಗೆ ಯುಡಾಕ್ಸಸ್‌ನ ಅಸಮಮಾಪ್ಯ ಪರಿಮಾಣಗಳ ಸಿದ್ಧಾಂತವೆಂದು ಕರೆಯುವುದುಂಟು. ಯಾವುದೇ ಚೌಕದ ವಿಕರ್ಣದ ಉದ್ದವನ್ನು ನಿಖರವಾದ ಪರಿಮಾಣದಲ್ಲಿ ವ್ಯಕ್ತಪಡಿಸಲಾಗದೆಂಬ ಸತ್ಯಾಂಶ ಅಭಾಗಲಬ್ಧ ಸಂಖ್ಯೆಗಳ (irrational numbers) ಪರಿಕಲ್ಪನೆಗೆ ದಾರಿಯಾಯಿತು. ಇದು ಗಣಿತ ವಿಶ್ಲೇಷಣೆಯಲ್ಲಿ ಒಂದು ಕ್ರಾಂತಿಯನ್ನೇ ತಂದಿತು.

ಇದರಿಂದ ಯುಕ್ಲಿಡ್ ಮತ್ತು ಪೈಥಾಗೊರಸನ ಪ್ರಮೇಯಗಳ ವಿಚಾರಶೀಲತೆ ತಿಳಿಯುತ್ತದೆ. ಇವು ಗಣಿತಜ್ಞನಿಗೆ ಬಹಳ ಮುಖ್ಯ. ಇದಕ್ಕೆ ವ್ಯತಿರಿಕ್ತವಾದ ಕೆಳಕಂಡ ಉದಾಹರಣೆಗಳನ್ನು ಗಮನಿಸೋಣ :

(i) ೮೭೧೨ ಸಂಖ್ಯೆಯನ್ನು ತೆಗೆದುಕೊಳ್ಳೋಣ. ಇದರಲ್ಲಿನ ಅಂಕಿಗಳನ್ನು ವಿರುದ್ಧ ಕ್ರಮದಲ್ಲಿ ಬರೆದರೆ ೨೧೭೮ ಆಗುವುದು. ೮೭೧೨ = ೪ x ೨೧೭೮. ಹಾಗೆಯೇ ೯೮೦೧ = ೯ x ೧೦೮೯.

೧೦೦೦೦ಕ್ಕಿಂತ ಕಡಿಮೆಯಿದ್ದು, ಅಂಕಿಗಳನ್ನು ವಿರುದ್ಧ ಕ್ರಮದಲ್ಲಿ ಬರೆದಾಗ ಬಂದ ಸಂಖ್ಯೆಯ ಒಂದು ಪೂರ್ಣಾಂಕ ಅಪವರ್ತ್ಯವಾಗುವ ನಾಲ್ಕು ಅಂಕಿಗಳ ಸಂಖ್ಯೆಗಳು ಕೇವಲ ೮೭೧೨ ಮತ್ತು ೯೮೦೧.

(ii) ೧ ಅನ್ನು ಬಿಟ್ಟರೆ, ಒಂದು ಸಂಖ್ಯೆ ಅದರ ಅಂಕಿಗಳ ಘನ (cubes)ಗಳ ಮೊತ್ತಕ್ಕೆ ಸಮನಾಗುವಂತಹವುಗಳು ನಾಲ್ಕು ಮಾತ್ರ. ಅವುಗಳು $೧೫೩ = ೧^{೩} + ೫^{೩} + ೩^{೩}$, $೩೭೦ = ೩^{೩} + ೭^{೩} + ೦^{೩}$, $೩೭೧ = ೩^{೩} + ೭^{೩} + ೧^{೩}$, $೪೦೭ = ೪^{೩} + ೦^{೩} + ೭^{೩}$.

ಈ ಮೇಲಿನ ಗಣಿತಾಂಶಗಳು ಸ್ವಲ್ಪ ಖುಷಿ ಕೊಡುವ ವಿನೋದ ಗಣಿತ ಆಗಬಲ್ಲವೇ ವಿನಾ, ಅವುಗಳಲ್ಲಿ ಗಂಭೀರವಾದ ಯಾವುದೇ ವಿಚಾರಶೀಲತೆ ಇಲ್ಲ.

ಇನ್ನು ಗಣಿತದ ಉಪಯುಕ್ತತೆಯ ವಿಚಾರ. ವ್ಯಾವಹಾರಿಕ ಅವಶ್ಯಕತೆಗಳಿಗಾಗಿ ಬಳಸುವ ಮೂಲ ಅಂಕಗಣಿತ ಹಾಗೂ ಪ್ರಾಥಮಿಕ ಜ್ಯಾಮಿತಿ ಪ್ರಮೇಯಗಳು, ರಚನಾಕ್ರಮಗಳು, ಸ್ವಲ್ಪಮಟ್ಟಿನ ಕಲನಶಾಸ್ತ್ರ, ತಂತ್ರಜ್ಞಾನ ಅಭಿವೃದ್ಧಿಯ ದೃಷ್ಟಿಯಿಂದ ಬಂದ ಗಣಿತ ಪ್ರಮೇಯಗಳು ಮತ್ತು ವಿಧಾನಗಳು – ಇವಿಷ್ಟೇ ಪ್ರತ್ಯಕ್ಷವಾಗಿ ಉಪಯುಕ್ತವೆನಿಸಿಕೊಳ್ಳುವಂಥವುಗಳು. ಉಳಿದಂತೆ ಗಣಿತಾಭ್ಯಾಸಿಗಳ ಆಲೋಚನಾಕ್ರಮವನ್ನು ಚುರುಕುಗೊಳಿಸಿ ನೂತನ ಆಯಾಮಗಳ ಕಲ್ಪನೆಗೆ ಪ್ರಚೋದನೆ ಕೊಡುವಂಥವುಗಳು. ಇವುಗಳಲ್ಲಿಯೂ ಸಹ ಕೆಲವು ಇತರೆ ವೈಜ್ಞಾನಿಕ ಸಮಸ್ಯೆಗಳನ್ನು ಬಗೆಹರಿಸಲು ಅನೇಕ ಸಲ ಉಪಯುಕ್ತವಾಗಿವೆ. ಆದರೆ ಅವುಗಳು ಆಕಸ್ಮಿಕ. ಆದರೆ ಈ ರೀತಿಯ ಉಪಯುಕ್ತತೆ ಗಣಿತಶಾಸ್ತ್ರಜ್ಞನ ಗುರಿಯಲ್ಲ.

ಕೊನೆಯಲ್ಲಿ ಇನ್ನೊಂದು ವಿಷಯ. ವ್ಯಾವಹಾರಿಕವಾಗಿ ಗಣಿತ ಉಪಯೋಗವಾಗುವುದು ಅಳತೆ ಮತ್ತು ಪರಿಮಾಣಗಳ ಲೆಕ್ಕಾಚಾರದಲ್ಲಿ. ಭೌತಿಕ ಪರಿಮಾಣದ ಲೆಕ್ಕಾಚಾರ ನಿಖರವಾಗಿರುವುದಿಲ್ಲ, ಕೇವಲ ಅಂದಾಜು ಆಗಿರುತ್ತದೆ. ಗಣಿತಶಾಸ್ತ್ರದ ಯಾವುದೇ ನಿಯಮ, ಪ್ರಮೇಯ ಅಥವಾ ಸಿದ್ಧಾಂತವು ನಿಖರವಾಗಿರುತ್ತದೆ.

ಒಟ್ಟಿನಲ್ಲಿ, ಗಣಿತವು ತರ್ಕ ಮತ್ತು ಕ್ರಿಯಾತ್ಮಕ ಅಂತಃಪ್ರೇರಣೆಯಿಂದ ರೋಮಾಂಚನವನ್ನುಂಟುಮಾಡುವ ನಿರಂತರ ಬೆಳೆಯುವ ಹಾಗೂ ಬೆಳಗುವ ಆಲೋಚನಾ ಕ್ರಮದ ಒಂದು ಸುಂದರ ಅನುಭವ. ಏನೇ ಆಗಲಿ, ಈ ಲೇಖನದ ಆರಂಭದಲ್ಲಿ ಹೇಳಿದಂತೆ 'ಗಣಿತಶಾಸ್ತ್ರ ಎಂದರೇನು ?' ಎಂಬ ಪ್ರಶ್ನೆಗೆ ಯಾವ ತಾತ್ವಿಕ ಅಥವಾ ಸೈದ್ಧಾಂತಿಕ ವಿವರಣೆಯೂ ಉತ್ತರ ನೀಡದು. ಕೇವಲ ಗಣಿತಾಭ್ಯಾಸಿಗಳ ಅನುಭವ ಮಾತ್ರ ಉತ್ತರ ನೀಡಲು ಸಾಧ್ಯ.

**ಎಚ್. ಎಲ್. ಎಸ್. ರಾವ್**
'ಭಗವತಿ', ೨ನೇ ಅಡ್ಡರಸ್ತೆ, ನೆಹರು ನಗರ, ಸಾಗರ - ೫೭೭ ೪೦೧ ಶಿವಮೊಗ್ಗ ಜಿಲ್ಲೆ

## ಡಾ|| ಎಸ್. ಬಾಲಚಂದ್ರರಾವ್

ನಮ್ಮ ಭಾರತೀಯ ಪರಂಪರೆಯ ಅನೇಕ ಜ್ಞಾನ-ವಿಜ್ಞಾನ ಪ್ರಕಾರಗಳಂತೆಯೇ ಗಣಿತ-ಖಗೋಳವಿಜ್ಞಾನದ ಮೂಲವೂ ನಿಗೂಢ ಹಾಗೂ ಅತೀತ - ದೈವ ಮೂಲ, ಬ್ರಹ್ಮಮೂಲ, ಪಿಶಾಚಮೂಲ ಇಲ್ಲವೇ ವೇದಮೂಲ !

ಬಹಳ ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಬಹಳ ರಹಸ್ಯವಾಗಿರಿಸಿಕೊಂಡು ಬಂದು, ಯಂತ್ರ-ತಂತ್ರ-ಮಂತ್ರ, ಮತ್ತು ಮಾಯಾಮಾಟ ಮುಂತಾದ ವಾಮಮಾರ್ಗ ಪದ್ಧತಿಗಳ ಭಾಗವಾಗಿಸಿಕೊಂಡು ಬಂದಿರುವ ಗಣಿತಶಾಸ್ತ್ರದ ಒಂದು ಮುಖ್ಯವಾದ ಪ್ರಕಾರವೆಂದರೆ **ಮಾಯಾಚೌಕಗಳು**. ಈ ಇಪ್ಪತ್ತೊಂದನೇ ಶತಮಾನದ ವಿಜ್ಞಾನ ಮತ್ತು ತಂತ್ರಜ್ಞಾನಗಳ ಯುಗದಲ್ಲೂ ಮಾಯಾಚೌಕಗಳು ಬಹಳ ಬಳಕೆಯಿರುವುದು ಕೈಗೋ, ತೋಳಿಗೋ, ಕುತ್ತಿಗೆಗೋ ಅಥವಾ ಇನ್ನೆಲ್ಲೋ ಕಟ್ಟಿಕೊಳ್ಳುವ ತಾಯಿತಗಳಲ್ಲಿ ಮಾತ್ರ !

| | | | | | | | | | | | | | |
|---|---|---|---|---|---|---|---|---|---|---|---|---|---|
| १ | १९५ | १९४ | १९३ | ५ | ६ | १९० | ७ | ९ | १० | १८६ | १८५ | १८४ | १४ |
| १६९ | २७ | १७१ | २५ | १७२ | २३ | १७५ | २२ | २० | १७८ | १८ | १९० | १६ | १८२ |
| १६८ | १६७ | १६६ | ३२ | ३३ | ३४ | १६२ | ३५ | ३७ | १३८ | ३९ | १५७ | १५६ | १५५ |
| १४१ | १४२ | १४३ | ५७ | ५२ | ५१ | १४७ | ५० | ४८ | १४० | १४६ | १५२ | १५३ | १५४ |
| १४० | १३९ | १३८ | ६० | ६१ | ६२ | १४ | ६३ | ६५ | ६६ | ६७ | १२९ | १२८ | १२७ |
| ११३ | ११४ | ११५ | ८१ | ८० | ७९ | ११९ | ७८ | ७६ | ७५ | ७४ | ९८ | १२५ | १२६ |
| ११२ | १११ | ८९ | ८८ | ८२ | ९० | ९८ | ११० | ९३ | ९४ | ९५ | १०१ | १०७ | १०६ |
| ८५ | ८६ | १०८ | १०९ | १०५ | १०७ | ९९ | ८७ | १०४ | १०३ | १२५ | ९५ | ९७ | ६१ |
| ८४ | ८३ | ८२ | ११६ | ११७ | ११८ | ७७ | १२० | १२१ | १२२ | १२३ | ७३ | ७२ | ७१ |
| ५७ | ५८ | ५९ | १३७ | १३६ | १३५ | ६४ | १३३ | १३२ | १३१ | १३० | ६८ | ६९ | ७० |
| ५६ | ५५ | ५४ | १४४ | १४५ | १४६ | ४९ | १४८ | १४९ | १५० | १५१ | ४५ | ४४ | ४३ |
| २९ | ३० | ३१ | १६५ | १६४ | १६३ | ३६ | १६१ | १६० | १५९ | १५८ | ४० | ४१ | ४२ |
| २८ | ७० | २६ | १७२ | २४ | १७४ | २१ | १७६ | १७७ | १९ | १७९ | १७ | १८१ | १५ |
| १९६ | २ | ३ | ४ | १९२ | १९१ | ८ | ८९ | १८८ | १८७ | ११ | १२ | १३ | १८३ |

**ಚಿತ್ರ-೧ : 'ಗಣಿತಕೌಮುದಿ'ಯ ೧೪ x ೧೪ ದರ್ಜೆಯ ಮಾಯಾಚೌಕ**

ಗಣಿತಶಾಸ್ತ್ರದ ಒಂದು ಮುಖ್ಯ ಭಾಗವಾಗಿ ಇರಬೇಕಾಗಿದ್ದ ಮಾಯಾಚೌಕಗಳ ಹಾಗೂ ಇತರ ಮಾಯಾಕೃತಿಗಳ ಬಗ್ಗೆ ಪ್ರಖ್ಯಾತ ಗಣಿತಜ್ಞರಾದ ಆರ್ಯಭಟ, ಬ್ರಹ್ಮಗುಪ್ತ, ಮಹಾವೀರ, ಭಾಸ್ಕರಾಚಾರ್ಯ ಮುಂತಾದವರಲ್ಲಿ ಒಬ್ಬರೂ ಚರ್ಚಿಸಿಲ್ಲ! ಈ ಸ್ವಾರಸ್ಯಮಯವಾದ ಗಣಿತದ ವಿಷಯವನ್ನು ಪಾರಂಪರಿಕ ಮಡಿವಂತಿಕೆಯನ್ನು ಬಿಟ್ಟು ಸವಿಸ್ತಾರವಾಗಿ ಮೊಟ್ಟಮೊದಲಿಗೆ ಚರ್ಚಿಸಿರುವ ಕೀರ್ತಿ ಹದಿನಾಲ್ಕನೇ ಶತಮಾನದ ನಾರಾಯಣ ಪಂಡಿತನಿಗೆ ಸಲ್ಲುತ್ತದೆ. ತನ್ನ **ಗಣಿತಕೌಮುದಿ** ಎಂಬ ಕೃತಿಯು ಕ್ರಿ.ಶ. ೧೩೫೬ರಲ್ಲಿ ರಚಿಸಲ್ಪಟ್ಟು ಅದರ ಕೊನೆಯ ಅಧ್ಯಾಯದಲ್ಲಿ ಮಾಯಾಚೌಕಗಳ ಮತ್ತು

# ಭಾರತೀಯ ಗಣಿತ ಖಗೋಳ ವಿಜ್ಞಾನದ ಮೂಲ - ನಿಗೂಢ ಮತ್ತು ಅತೀತ !

ಇತರ ಮಾಯಾಕೃತಿಗಳ ರಚನಾ ವಿಧಾನಗಳನ್ನು **ಭದ್ರಗಣಿತಮ್** ಎಂಬ ಹೆಸರಿನ ಮೂಲವನ್ನು ನಾರಾಯಣ ಪಂಡಿತ ಹೀಗೆ ಬಣ್ಣಿಸುತ್ತಾನೆ :

**ಅಥ ಭುವನತ್ರಯ ಗುರುಣಾ ಉಪದಿಷ್ಟಂ ಈಶೇನ ಮಣಿಭದ್ರಾಯ। ಕೌತುಕಿನೇ ಭೂತಾಯ ಶ್ರೇಢೀಸಂಬಂಧಿ ಸದ್ಗಣಿತಮ್ ॥೧॥ ಸದ್ಗಣಿತ ಚಮತ್ಕೃತಯೇ ಯಂತ್ರವಿದಾಂ ಪ್ರೀತಯೇ ಕುಗಣಕಾನಾಂ। ಗರ್ವಕ್ಷಿಪ್ತ್ಯೈ ವಕ್ಷ್ಯೇ ತತ್ಸಾರಂ ಭದ್ರಗಣಿತಾಖ್ಯಮ್ ॥೨॥**

--''ಈಗ, ಮಣೀಭದ್ರನೆಂಬ ಕುತೂಹಲವುಳ್ಳ ಭೂತನಿಗೆ(ಯಕ್ಷನಿಗೆ) ಶ್ರೇಢಿಗಳಿಗೆ ಸಂಬಂಧಿಸಿದ ಒಳ್ಳೆಯ ಗಣಿತವು ಭುವನತ್ರಯದ ಗುರುವಾದ ಈಶ(ಶಿವ)ನಿಂದ ಉಪದೇಶಿಸಲ್ಪಟ್ಟಿತು.

'ಭದ್ರಗಣಿತ' ಎಂಬ ಹೆಸರಿನ ಇದರ ಸಾರವನ್ನು ಒಳ್ಳೆಯ ಗಣಿತಜ್ಞರ ಚಮತ್ಕಾರಕ್ಕಾಗಿ, (ಮಾಯಾಚೌಕ) ಯಂತ್ರಗಳನ್ನು ತಿಳಿದಿರುವವರ ಸಂತೋಷಕ್ಕಾಗಿ ಹಾಗೂ ಕೆಟ್ಟ ಗಣಿತಜ್ಞರ ಜಂಬವನ್ನು ಅಡಗಿಸುವ ಉದ್ದೇಶದಿಂದ ಹೇಳುತ್ತೇನೆ.''

ಹೀಗೆ, ಮಾಯಾಚೌಕಗಳ ಗಣಿತಜ್ಞಾನದ ಮೂಲ ಶಿವನು ಉಪದೇಶಿಸಿದ ಜ್ಞಾನ. ತ್ರಿಲೋಕ ಗುರುವಾದ ಶಂಕರನು ಈ ಗಣಿತಜ್ಞಾನವನ್ನು ಉಪದೇಶಿಸಿದ್ದು ನಮ್ಮಂಥ ಮನುಷ್ಯ ಮಾತ್ರರಿಗಾ ಅಂದರೆ ಅಲ್ಲ!

ಈ ಚಮತ್ಕಾರಮಯ ಜ್ಞಾನವನ್ನು ಸ್ವೀಕರಿಸಿದ್ದು ಮಣಿಭದ್ರ ಎಂಬ ಭೂತ(ಅಥವಾ ಯಕ್ಷ) ! ಇನ್ನು ಶಿವ ಮತ್ತು ಭೂತ ಇವರಿಬ್ಬರ ಮಧ್ಯೆ ಸಂಭವಿಸಿದ ಈ ರಹಸ್ಯಮಯ ಬೋಧನೆ ನಾರಾಯಣ ಪಂಡಿತನಂಥ ಮನುಷ್ಯ ಮಾತ್ರರ ಕಿವಿಗೋ ಅಥವಾ ಮೆದುಳಿಗೋ ಹೇಗೆ ಬಂದು ಬಡಿಯಿತೆಂಬುದನ್ನು ಆ ಶಿವನೇ ಬಲ್ಲ ಅಥವಾ ಅದು ಒಂದು ಭೂತರಹಸ್ಯ !

**ಚಿತ್ರ-೨ : 'ಗಣಿತಕೌಮುದಿ'ಯ ಒಂದು ಆಕರ್ಷಕ ಮಾಯಾಕೃತಿ**

ಈ ಭದ್ರಗಣಿತದ ವಿದ್ಯೆಯನ್ನು ನಮ್ಮ ಪ್ರಾಚೀನರು ರಹಸ್ಯವಾಗಿ ಇರಿಸಿಕೊಳ್ಳಲು ಯಶಸ್ವಿಯಾಗಿದ್ದರೆ, ನಮ್ಮ ಭೂತಗಳ ದೇಶದ್ರೋಹಿ ಚಟುವಟಿಕೆಯಿಂದಲೋ ಅಥವಾ



ಬಾಹ್ಯದೇಶದಿಂದ ಪಡೆದ 'ಡಿ-ನೋಟಿಫಿಕೇಶನ್' ಲಾಭದ ಪರಿಣಾಮವಾಗಿಯೋ ಆ ರಹಸ್ಯವಿದ್ಯೆಯ ಹುಟ್ಟು ಮತ್ತು ಬೆಳವಣಿಗೆ ಎಲ್ಲಾ ಚೈನಾ ದೇಶದಲ್ಲೇ ಆಯಿತೆಂದು ಚೀಣಿಯರು ಬೊಬ್ಬೆ ಹಾಕುತ್ತಿದ್ದಾರೆ! ಬಹುಶಃ ಪ್ರಾಚೀನ ಬೌದ್ಧ ತಾಂತ್ರಿಕರಿಂದಾಗಿ ನಮ್ಮ ಭದ್ರಗಣಿತವು ಚೈನಾದೇಶಕ್ಕೆ ರಫ್ತಾಗಿರಲಿಕ್ಕೆ ಸಾಕು.

ಸಾವಿರಾರು ವರ್ಷಗಳ ಹಿಂದಿನಿಂದಲೂ ಜನಪ್ರಿಯವಾಗಿರುವ, ಪ್ರಸಿದ್ಧವಾಗಿರುವ ಖಗೋಳವಿಜ್ಞಾನದ ಗ್ರಂಥ **ಸೂರ್ಯಸಿದ್ಧಾಂತ**. ಈ ಸಂಸ್ಕೃತ ಕೃತಿಯಲ್ಲೇ ಉಲ್ಲೇಖಿಸಿರುವಂತೆ. **ಅಲ್ಪಾವಶಿಷ್ಟೇ ತು ಕೃತೇ ಮಾಯೋ ನಾಮ ಮಹಾಸುರಃ ರಹಸ್ಯಂ ಪರಮಂ ಪುಣ್ಯಂ ಜಿಜ್ಞಾಸುರ್ ಜ್ಞಾನಮುತ್ತಮಮ್। ವೇದಾಂಗಮಗ್ರ್ಯಂ ಅಖಿಲಂ ಜ್ಯೋತಿಷಾಂ ಗತಿಕಾರಣಮ್। ಆರಾಧಯನ್ ವಿವಸ್ವಂತಂ ತಪಸ್ತೇಪೇ ಸುದುಶ್ಚರಮ್ ॥** -- *ಸೂ.ಸಿ. ೧, ೨-೩.*

--''ಕೃತಯುಗದಲ್ಲಿ ಸ್ವಲ್ಪ ಭಾಗ ಮಾತ್ರ ಉಳಿದಿರುವಾಗ ರಹಸ್ಯವೂ, ಪರಮಪುಣ್ಯಮಯವೂ, ಉತ್ತಮಜ್ಞಾನವೂ, ವೇದಾಂಗಗಳಲ್ಲಿ ಅಗ್ರಸ್ಥಾನವನ್ನು ಹೊಂದಿರುವ ಶಾಸ್ತ್ರವನ್ನು ತಿಳಿಯುವ ಇಚ್ಛೆಯಿಂದ ಎಲ್ಲಾ ಜ್ಯೋತಿಃಸ್ವರೂಪವಾದ ಆಕಾಶಕಾಯಗಳ ಚಲನೆಗೆ ಕಾರಣನಾದ ವಿವಸ್ವಂತ(ಸೂರ್ಯದೇವ)ನನ್ನು ಕುರಿತು ಆರಾಧಿಸಿ ಮಹಾ ಅಸುರನಾದ ಮಯನು ಬಹಳ ಕಷ್ಟತಮವಾದ ತಪಸ್ಸನ್ನು ಆಚರಿಸಿದನು.''

**ಚಿತ್ರ-೩ : 'ಸೂರ್ಯಸಿದ್ಧಾಂತ'ದಲ್ಲಿ ಮಯಾಸುರನ ತಪಸ್ಸಿನ ವಿವರಣೆ**

अल्पावशिष्टे तु कृते मयो नाम महासुरः ।
रहस्यं परमं पुण्यं जिज्ञासुर्ज्ञानमुत्तमम् ॥ २ ॥
वेदाङ्गमग्र्यमखिलं ज्योतिषां गतिकारणम् ।
आराधयन् विवस्वन्तं तपस्तेपे सुदुश्चरम् ॥ ३ ॥

ರಾಕ್ಷಸರ ಉಗ್ರತಪಸ್ಸಿಗೆ ಒಲಿದು ಸುಪ್ರೀತರಾದ ಇತರ ಆರಾಧ್ಯ ದೇವರಂತೆಯೇ ಸೂರ್ಯದೇವನೂ ಕೂಡ ಭಕ್ತನಾದ ಮಯಾಸುರನ ಸುದುಶ್ಚರವಾದ ತಪಸ್ಸನ್ನು ಮೆಚ್ಚಿ.

**ತೋಷಿತಸ್ತಪಸಾ ತೇನ ಪ್ರೀತಸ್ತಸ್ಮೈ ವರಾರ್ಥಿನೇ। ಗ್ರಹಾಣಾಂ ಚರಿತಂ ಪ್ರಾದಾನ್ಮಯಾಯ ಸವಿತಾ ಸ್ವಯಮ್ ॥೪॥**

''ತಪಸ್ಸಿನಿಂದ ಸಂತುಷ್ಟನೂ ಮತ್ತು ಸುಪ್ರೀತನೂ ಆದ ಸೂರ್ಯದೇವನೇ ಸ್ವತಃ ವರವನ್ನು ಇಚ್ಛಿಸಿದ ಮಯಾಸುರನಿಗೆ ಗ್ರಹಗಳ ಚಲನೆಯ ಜ್ಞಾನವನ್ನು ವಿಶೇಷವಾಗಿ ನೀಡಿದನು. ಹಾಗೆಯೇ ಅಪ್ಪಣೆ ಕೊಟ್ಟನು :

**ವಿದಿತಸ್ತೇ ಮಯಾ ಭಾವಸ್ತೋಷಿತಸ್ತಪಸಾ ಹ್ಯಹಂ। ದದ್ಯಾಂ ಕಾಲಾಶ್ರಯಂ ಜ್ಞಾನಂ ಗ್ರಹಾಣಾಂ ಚರಿತಂ ಮಹತ್ ॥೫॥**

--''ತಪಸ್ಸಿನಿಂದ ಸಂತುಷ್ಟನಾದ ನಾನು ನಿನ್ನ ಉದ್ದೇಶವನ್ನು ತಿಳಿದಿದ್ದೇನೆ. ಕಾಲವನ್ನೇ ಆಶ್ರಯಿಸಿರುವ ಗ್ರಹಗಳ ಚಲನೆಯ ಮಹತ್ತಾದ ಜ್ಞಾನವನ್ನು ನೀಡುತ್ತೇನೆ.''

**ಚಿತ್ರ-೪ : 'ಸೂರ್ಯಸಿದ್ಧಾಂತ'ದಲ್ಲಿ ಸುಪ್ರೀತನಾದ ಸೂರ್ಯನ ಆಶ್ವಾಸನೆ**

तोषितस्तपसा तेन प्रीतस्तस्मै वरार्थिने ।
ग्रहाणां चरितं प्रादान्मयाय सविता स्वयम् ॥ ४ ॥
विदितस्ते मया भावस्तोषितस्तपसा ह्यहम् ।
दद्यां कालाश्रयं ज्ञानं ग्रहाणां चरितं महत् ॥ ५ ॥

**ನ ಮೇ ತೇಜಸ್ಸಹಂ ಕಶ್ಚಿದ್ ಆಖ್ಯಾತುಂ ನಾಸ್ತಿ ಮೇ ಕ್ಷಣಃ। ಮದಂಶಃ ಪುರುಷೋ ಅಯಂ ತೇ ನಿಶ್ಶೇಷಂ ಕಥಯಿಷ್ಯತಿ ॥೬॥**

--''ನನ್ನ ಪ್ರಖರವಾದ ತೇಜಸ್ಸನ್ನು ಸಹಿಸಿಕೊಳ್ಳಲು ಯಾರಿಂದಲೂ ಸಾಧ್ಯವಿಲ್ಲ. (ಹಾಗೂ ಈ ಗ್ರಹಚಲನ ಜ್ಞಾನವನ್ನು) ಉಪದೇಶಿಸಲು ನನಗೆ ಒಂದು ಕ್ಷಣವೂ (ಪುರುಸತ್ತು) ಇಲ್ಲ. (ಆದ್ದರಿಂದ) ನನ್ನ ಅಂಶವನ್ನೇ ಹೊಂದಿರುವ ಈ ಪುರುಷನು ನಿನಗೆ ನಿಶ್ಶೇಷವಾಗಿ (ಸ್ವಲ್ಪವೂ ಬಿಡದೆ ಜ್ಞಾನವನ್ನು) ಬೋಧಿಸುವನು.''

**ಇತ್ಯುಕ್ತ್ವಾ ಅಂತರ್ದಧೇ ದೇವಃ ಸಮಾದಿಶ್ಯ ಅಂಶಂ ಆತ್ಮನಃ। ಸ ಪುಮಾನ್ ಮಯಂ ಆಹ ಇದಂ ಪ್ರಣತಂ ಪ್ರಾಂಜಲಿಸ್ಥಿತಮ್ ॥೭॥**

ಹೀಗೆ ಹೇಳಿ, ತನ್ನ ಅಂಶವಂತನಿಗೆ ಆದೇಶಿಸಿ (ಸೂರ್ಯ)ದೇವನು ಅಂತರ್ಧಾನನಾದನು. ನಮಸ್ಕರಿಸುತ್ತ ಪ್ರಾಂಜಲಬದ್ಧನಾಗಿ ನಿಂತಿರುವ ಮಯನಿಗೆ ಆ ಮನುಷ್ಯನು ಇದನ್ನು ಹೇಳಿದನು :

**ಶೃಣುಷ್ವ ಏಕಮನಾಃ ಪೂರ್ವಂ ಯದುಕ್ತಂ ಜ್ಞಾನಂ ಉತ್ತಮಮ್। ಯುಗೇ ಯುಗೇ ಮಹರ್ಷೀಣಾಂ ಸ್ವಯಮೇವ ವಿವಸ್ವತಾ ॥೮॥**

--''ಈ ಹಿಂದೆ ಪ್ರತಿಯೊಂದು ಯುಗದಲ್ಲಿಯೂ ಮಹರ್ಷಿಗಳಿಗೆ ಸ್ವತಃ ಸೂರ್ಯದೇವನಿಂದಲೇ ಯಾವ ಉತ್ತಮವಾದ ಜ್ಞಾನವು ಹೇಳಲ್ಪಟ್ಟಿತೋ ಅದನ್ನೇ ಒಂದೇ ಮನಸ್ಸಿನಿಂದ ಕೇಳುವವನಾಗು'' ಹೀಗೆ ಮುಂದುವರೆಯುತ್ತದೆ ಸೂರ್ಯ ಸಿದ್ಧಾಂತ!

''ಏತನ್ಮಧ್ಯೇ ಭೂತಸಂಚಾರಃ'' ಎಂಬಂತೆ ಒಂದು ಸ್ವಾರಸ್ಯಮಯವಾದ ವಿಷಯವಿದೆ. 'ಸೂರ್ಯಸಿದ್ಧಾಂತ'ದ ಕೆಲವು ಹಸ್ತಪ್ರತಿಗಳಲ್ಲಿ ೬ನೇ ಶ್ಲೋಕದ ಪೂರ್ವಾರ್ಧ ಮತ್ತು ಉತ್ತರಾರ್ಧಗಳ ಮಧ್ಯದಲ್ಲಿ ಇನ್ನೊಂದು ಸ್ವಾರಸ್ಯಕರವಾದ ಶ್ಲೋಕದ ಪ್ರವೇಶವಾಗಿದೆ! ಆ ಶ್ಲೋಕವು ಹೀಗಿದೆ :

**ತಸ್ಮಾತ್ ತ್ವಂ ಸ್ವಾಂ ಪುರೀಂ ಗಚ್ಛ ತತ್ರ ಜ್ಞಾನಂ ದದಾಮಿ ತೇ। ರೋಮಕೇ ನಗರೇ ಬ್ರಹ್ಮಶಾಪಾನ್ ಮ್ಲೇಚ್ಛಾವತಾರಧೃಕ್।**

''ಆದ್ದರಿಂದ ನೀನು ನಿನ್ನ ಸ್ವಂತ ಊರಿಗೆ(ರೋಮಿಗೆ) ತೆರಳು. ಅಲ್ಲಿ ಬ್ರಹ್ಮದೇವನ ಶಾಪದಿಂದಾಗಿ ಮ್ಲೇಚ್ಛಾವತಾರಿಯಾಗಿರುವ ನಾನು ಅಲ್ಲಿ- ರೋಮಕನಗರದಲ್ಲಿ- ನಿನಗೆ ಜ್ಞಾನವನ್ನು ನೀಡುತ್ತೇನೆ.''

ಸಂಶಯಾತ್ಮಕವಾದ ಈ ಶ್ಲೋಕವು ನಿಜವಾಗಿಯೂ ಮೂಲ ಸೂರ್ಯಸಿದ್ಧಾಂತದ ಭಾಗವಾಗಿದ್ದರೆ, ಈ ಶ್ಲೋಕದ ಸೂಚ್ಯಾರ್ಥವು ನಿಜಕ್ಕೂ ಕುತೂಹಲಕಾರಿಯಾಗಿದೆ. ರೋಮಕನಗರವು ತೊಂಬತ್ತು ಡಿಗ್ರಿಗಳಷ್ಟು ರೇಖಾಂಶದ ಅಂತರದಲ್ಲಿ ಉಜ್ಜಯಿನಿಯ ಪೂರ್ವದಲ್ಲಿ ಇದ್ದು, ಅಲ್ಲಿ ಪಾಶ್ಚಾತ್ಯನಾದ 'ಅಸುರಮಯ'ನಿಗೆ ಪ್ರಾಪ್ತವಾದ ಗ್ರಹವಿಜ್ಞಾನವು ಸೂರ್ಯದೇವನ ತವರೂರಾದ ಭಾರತಮೂಲದ್ದೇ! ಅಲ್ಲಿರುವ ಸೂರ್ಯಾಂಶನು ಬ್ರಹ್ಮದೇವನಿಂದ ಶಾಪಗ್ರಸ್ತನಾದ್ದರಿಂದ 'ಮ್ಲೇಚ್ಛ'ನಾಗಿದ್ದಾನಷ್ಟೆ!

ಈ ಶ್ಲೋಕದ ತಥ್ಯದ ಬಗ್ಗೆ ರೆವರೆಂಡ್ ಬರ್ಗೆಸ್ ಅವರು ನೀಡುವ ವ್ಯಾಖ್ಯಾನ ಹೀಗಿದೆ : 'ಜ್ಞಾನಭಾಸ್ಕರ' ಎಂಬ ಸಂಸ್ಕೃತ ಕೃತಿಯಲ್ಲಿ ಸೂರ್ಯದೇವನ ಅಂಶಪುರುಷನು ಪಂಚಸಿದ್ಧಾಂತಗಳಲ್ಲಿ ಒಂದಾದ ರೋಮಕಸಿದ್ಧಾಂತವನ್ನೂ ಬೋಧಿಸಿದನು ಎಂದು ಉಲ್ಲೇಖಿಸಿದೆ. ಆದ್ದರಿಂದ ಸೂರ್ಯಸಿದ್ಧಾಂತದ ಉಗಮವೂ 'ರೋಮಕಸಿದ್ಧಾಂತ'ದಂತೆಯೇ ಪಾಶ್ಚಾತ್ಯ ಮೂಲವೇ? ಹಾಗೆಯೇ ಈ ಗ್ರಹಜ್ಞಾನವನ್ನು ಸ್ವೀಕರಿಸಿದ 'ಅಸುರಮಯ'ನೂ ಕುತೂಹಲಕಾರಿಯಾಗಿದ್ದಾನೆ!

ಪಾಶ್ಚಾತ್ಯ ವಿದ್ವಾಂಸ ವೆಬರ್ ಮಹಾಶಯನ ಪ್ರಕಾರ ಗ್ರೀಕರ ಆಳ್ವಿಕೆಯಲ್ಲಿದ್ದ ಈಜಿಪ್ಟ್ ಮೂಲದ 'ಟಾಲೆಮಿಯೋಸ್' ಎಂಬಾತನ ಹೆಸರು ಭಾರತೀಯ ಶಾಸನಗಳಲ್ಲಿ 'ತುರಮಯ' ಎಂದು ಉಲ್ಲೇಖಗೊಂಡಿದೆ.

**ಚಿತ್ರ-೫ : 'ಸೂರ್ಯಸಿದ್ಧಾಂತ'ದಲ್ಲಿ ಕಕ್ಷಾವೃತ್ತ ಮತ್ತು ಶೀಘ್ರವೃತ್ತ**

ನಮ್ಮ ಪ್ರಾಚೀನ ಮತ್ತು ಮಧ್ಯಕಾಲೀನ ಗ್ರಂಥಗಳಲ್ಲಿ ಪಾಶ್ಚಾತ್ಯ ರಾಷ್ಟ್ರಗಳಾದ 'ಅಸ್ಸಿರೀಯ', 'ಗ್ರೀಸ್' ಮುಂತಾದವುಗಳನ್ನು 'ಅಸುರ', 'ಯವನ', 'ಮ್ಲೇಚ್ಛ' ಎಂಬುದಾಗಿ ಸಾರಾಸಗಟಾಗಿ ಉಲ್ಲೇಖಿಸಿರುವುದರಿಂದ ಕ್ರಿ.ಶ. ಎರಡನೇ ಶತಮಾನದಲ್ಲಿದ್ದು ಅಲ್ಮೆಜೆಸ್ಟ್ ಎಂಬ ಶ್ರೇಷ್ಠಮಟ್ಟದ ಖಗೋಳಗಣಿತದ ಕರ್ತೃ ಟಾಲೆಮಿಯೇ ಕಾಲಕ್ರಮದಲ್ಲಿ 'ತುರಮಯ'ನಾಗಿಯೂ, ಅನಂತರದಲ್ಲಿ 'ಅಸುರಮಯ'ನಾಗಿ ಮಾರ್ಪಾಡಾಗಿರಬಹುದು ಎಂದು ವೆಬರ್ ಅವರ ವಾದ ಹಾಗೂ ಅದಕ್ಕೆ ಬರ್ಗೆಸ್ ಅವರ 'ಅಸ್ತು'! ಈ ವಾದಕ್ಕೆ ಪುಷ್ಟಿ ನೀಡುವುದು ಭಾರತ ದೇಶಕ್ಕೆ ಹನ್ನೊಂದನೇ ಶತಮಾನದಲ್ಲಿ ಆಗಮಿಸಿದ ಪರ್ಷಿಯನ್ ವಿದ್ವಾಂಸ ಹಾಗೂ ಪ್ರವಾಸಿಗ ಅಲ್-ಬಿರೂನಿಯು ಕೊಡುವ ಒಂದು ಉಲ್ಲೇಖ. ವರಾಹಮಿಹಿರನ (ಕ್ರಿ.ಶ. ೫೦೫) ಪಂಚಸಿದ್ಧಾಂತಿಕಾ ಗ್ರಂಥದಲ್ಲಿರುವ 'ಪೌಲಿಷ ಸಿದ್ಧಾಂತ'ದ ಮೂಲವು ಪಾಲಸ್-ಉಲ್-ಯುನಾನಿ (ಅಂದರೆ ಗ್ರೀಸ್ ದೇಶದ ಪಾಲಸ್) ಎಂಬುದು ಅಲ್-ಬಿರೂನಿ ಸಾಹೇಬರ ಅಂಬೋಣ!

ಇನ್ನು ಟಾಲೆಮಿಯ 'ಅಲ್‌ಮೆಜೆಸ್ಟ್' ತನ್ನ ತವರು ಗ್ರೀಕ್‌ರ ಆಡಳಿತದಲ್ಲಿದ್ದ ಈಜಿಪ್ಟಿನಿಂದ ನಮ್ಮ ಪವಿತ್ರವಾದ ಭಾರತಕ್ಕೆ ಕೈಗೊಂಡ ಯಾತ್ರೆ ರೋಚಕವಾಗಿದೆ. ಕ್ರಿ.ಶ. ಎರಡನೇ ಶತಮಾನದಲ್ಲಿ ರಚಿತವಾದ, ಟಾಲೆಮಿಯ (ಸುಮಾರು ಕ್ರಿ.ಶ. ೧೫೦)



**ಮ್ಯಾಥಮ್ಯಾಟಿಕಲ್ ಸಿಂಟ್ಯಾಕ್ಸಿಸ್** ಎಂಬ ಶ್ರೇಷ್ಠಮಟ್ಟದ ಖಗೋಳಗಣಿತ ಕೃತಿಯು ರೋಮನ್ನರ ದುರಾಕ್ರಮಣದಿಂದಾಗಿ ನಷ್ಟವಾಯಿತು. ಇದೇ ದುರ್ಗತಿ ಪ್ರಸಿದ್ಧ ರೇಖಾಗಣಿತಜ್ಞ ಯುಕ್ಲಿಡ್‌ನ (ಸುಮಾರು ಕ್ರಿ.ಪೂ. ೩ನೇ ಶತಮಾನ) 'ಎಲಿಮೆಂಟ್ಸ್' ಎಂಬ ಕೃತಿಗೂ ಒದಗಿಬಂತು. ಬಹಳ ಶತಮಾನಗಳ ಅನಂತರ ಈ ಎರಡು ಕೃತಿಗಳು ಪರ್ಷಿಯನ್ ಅರೇಬಿಕ್ ಭಾಷೆಯಲ್ಲಿ ಹೊಸ ಅವತಾರದಲ್ಲಿ ಕಂಡುಬಂದವು. ಕಾಲಕ್ರಮದಲ್ಲಿ, ಕ್ರಿ.ಶ. ೧೮ನೇ ಶತಮಾನದಲ್ಲಿ ದೆಹಲಿಯ ಸುಲ್ತಾನ ಮೊಹಮ್ಮದ್ ಷಾಹನ ಸಾಮಂತ ರಾಜನಾದ ಜೈಪುರದ ರಾಜಾ ಸವಾಯ್ ಜಯಸಿಂಗನಿಗೆ ಗಣಿತ ಮತ್ತು ಖಗೋಳ ವಿಜ್ಞಾನ ಶಾಖೆಗಳಿದ್ದ ವಿಶೇಷವಾದ ಗೀಳಿನಿಂದಾಗಿ 'ಜಂತರ್ ಮಂತರ್' ಎಂಬ ಖಗೋಳ ವೀಕ್ಷಣಾಲಯಗಳು ಕಟ್ಟಿಸಲಾದವು. ಹಾಗೆಯೇ ಸಂಸ್ಕೃತ ಮತ್ತು ಪರ್ಷಿಯನ್ ಭಾಷೆಗಳಿಗೆ ಅನೇಕ ಐರೋಪ್ಯ ಕೃತಿಗಳ ರಚನೆಯಾಗಿ ಪ್ರಕಟಣೆಗೊಂಡವು. ಅಂತೆಯೇ, ಯುಕ್ಲಿಡ್‌ನ ಜ್ಯಾಮಿತಿಯು ರೇಖಾಗಣಿತ ಎಂಬುದಾಗಿಯೂ, ಟಾಲೆಮಿಯ 'ಅಲ್‌ಮೆಜೆಸ್ಟ್‌ಮ್' ಸಮ್ರಾಟ್ ಸಿದ್ಧಾಂತ ಎಂತಲೂ ಸಂಸ್ಕೃತ ಭಾಷೆಯಲ್ಲಿ ಅವತರಿಸಿದವು. ಇವೆರಡನ್ನೂ ರಚಿಸಿದ ಕೀರ್ತಿ 'ಸಮ್ರಾಟ್' ಜಗನ್ನಾಥನೆಂಬ ವಿಪ್ರೋತ್ತಮನದು.

ಹೀಗೆ ಈಜಿಪ್ಟ್‌ನ ಪ್ರಾಚೀನ ಸಂಸ್ಕೃತಿಯ ಜೀವನಾಡಿಯಾದ ನೈಲ್‌ನದಿಯ ಜಲಸಿಕ್ತವಾದ ಟಾಲೆಮಿಯ ಕೃತಿಯು ಬರ್ಬರರ ವಿನಾಶಕಾರೀ ಹೊಡೆತದ ಮಧ್ಯದಲ್ಲೂ ಬಹಳ ಶತಮಾನಗಳ ಕಾಲ ಗುಪ್ತವಾಗಿದ್ದು ಅರಬ್ಬರ ಸುಗಂಧದ್ರವ್ಯಗಳ ಲೇಪನಗಳಿಂದಲೇ ಬದುಕಿದ್ದು, ಆ ಬಳಿಕ ಅರಬ್ಬೀ ಭಾಷೆಯ ರೂಪಾಂತರದಲ್ಲಿ ಕಾಣಿಸಿಕೊಂಡಿತು. ಸುಮಾರು ಒಂದೂವರೆ ಸಹಸ್ರ ವರ್ಷಗಳ ನಂತರ ತನ್ನ ಜನ್ಮಸ್ಥಳದಿಂದ ಸಾವಿರಾರು ಮೈಲಿಗಳಷ್ಟು ದೂರದಲ್ಲಿರುವ ನಮ್ಮ ಭಾರತದ ಜಯಪುರದಲ್ಲಿ (ಪವಿತ್ರವಾದ ಸರಸ್ವತೀ ನದಿಯು ಬತ್ತಿರುವುದರಿಂದ) ಮರಳುಗಾಡಿನಲ್ಲಿರುವ ಓಯಸಿಸ್‌ಗಳ ನೀರಿನ ಪ್ರೋಕ್ಷಣೆಯಿಂದಲೇ ಸಂಸ್ಕೃತೀಕರಿಸಿ 'ಸಮ್ರಾಟ್ ಸಿದ್ಧಾಂತ'ವೆಂದು ನಾಮಕರಣ ಮಾಡಲಾಯಿತು !

ಈಗ ಆ 'ಸಮ್ರಾಟ್ ಸಿದ್ಧಾಂತ'ದ ಹಸ್ತಪ್ರತಿಯು ನಮ್ಮಂತಹ ಪಾಪಗ್ರಸ್ತರ ಕೈಗೆ ಸಿಗದಂತೆ ಜಯಪುರದ ರಾಜಾ ಮಾನ್‌ಸಿಂಗ್ ವಸ್ತುಸಂಗ್ರಹಾಲಯದ ಭದ್ರಕೋಟೆಯಲ್ಲಿ ಬಚ್ಚಿಟ್ಟುಕೊಂಡಿದೆ ! ಹೀಗಿರುವಾಗ ಟಾಲೆಮಿಯ 'ಅಲ್‌ಮೆಜೆಸ್ಟ್'ಗೂ ಮಯಾಸುರನ 'ಸೂರ್ಯಸಿದ್ಧಾಂತ' ಕೃತಿಗೂ ಎತ್ತಿಂದೆತ್ತಣ ಸಂಬಂಧವಯ್ಯ ?

(ಇಲ್ಲಿ ಬರುವ ಮಯಾಸುರನು ಲಂಕಾಧಿಪತಿಯಾಗಿದ್ದ ರಾವಣಾಸುರನ ಮಾವ - ಅರ್ಥಾತ್ ಮಂಡೋದರಿಯ ತಂದೆ. - ಎಂಬುವುದು ನಮ್ಮ ಸಂಪ್ರದಾಯವಾದಿಗಳ ನಂಬಿಕೆ !).

**ಡಾ|| ಎಸ್. ಬಾಲಚಂದ್ರರಾವ್**
ಗೌ|| ನಿರ್ದೇಶಕರು, ಗಾಂಧೀ ಕೇಂದ್ರ, ಭಾರತೀಯ ವಿದ್ಯಾಭವನ
ಬೆಂಗಳೂರು - ೫೬೦ ೦೦೧

---

*(೩೨ನೇ ಪುಟದಿಂದ. ಸರ್ವಜ್ಞಾಂಕಿತ ತ್ರಿಪದಿಗಳು)*

ಕಡಿಮೆ ! ಯಾಕೆಂದರೆ ಸರ್ವಜ್ಞಾಂಕಿತ ವಚನಗಳ ವೀರಶೈವೀಕರಣ ರಾಜಕಾರಣದ ಪರಿಣಾಮ ಇದು.

ಸುಮಾರು ೧೫೨೫ರಲ್ಲಿ ರಚನೆಯಾದ ಪ್ರಭುದೇಶಿಕನ 'ಮೋಕ್ಷ ದರ್ಶನ ಸಂಗ್ರಹ' ಎಂಬ ಸಂಪಾದನೆ; ೧೬೦೦ರ ಸುಮಾರಿನಲ್ಲಿ ಸಂಪಾದನೆಯಾಗಿರುವ ಸಂಪಾದನೆಯ ಸಿದ್ಧವೀರನು ಸೇರಿಸಿದ 'ಸರ್ವಜ್ಞಮೂರ್ತಿ ನಿರೂಪಿಸಿದ ತ್ರಿವಿಧಿ' ಮತ್ತು ೧೬೩೬ರ ಕಾಲದ ವೆಂಕನು ಸಂಪಾದಿಸಿರುವ ಸರ್ವಜ್ಞನ ವಚನಗಳು (ಪರಮಾರ್ಥ ವಚನಗಳು) ಈ ಮೂರೂ ಸಂಕಲನಗಳನ್ನು ತೌಲನಿಕವಾಗಿ ಗಮನಿಸಿದರೆ ಇವರೆಲ್ಲರೂ ಮೌಖಿಕ ಅಭಿವ್ಯಕ್ತಿಯಾದ ಅಂದರೆ ಸಾಮುದಾಯಿಕ ರಚನೆಗಳಾದ ಸರ್ವಜ್ಞಾಂಕಿತ ತ್ರಿಪದಿಗಳನ್ನು ಲಿಪೀಕರಣ ಮಾಡುವಾಗ ವ್ಯಕ್ತೀಕರಣ ಮಾಡಿರುವುದು ಕೂಡ ಸ್ಪಷ್ಟವಾಗಿ ಕಾಣುತ್ತದೆ. ಹೀಗಾಗಿ ಜಾನಪದ ಪಠ್ಯವಾಗಿದ್ದ ಸರ್ವಜ್ಞಾಂಕಿತ ವಚನಗಳು ವ್ಯಕ್ತಿ ಪಠ್ಯವೆಂಬ ಮುದ್ರೆ ಪಡೆದಿವೆ. ಸಂಪಾದನಾ ರಾಜಕಾರಣದ, ಲಿಪೀಕರಣ ಪ್ರಕ್ರಿಯೆಯ ರಾಜಕಾರಣದ ಫಲವಿದು. ಏಕವ್ಯಕ್ತಿ ರಚನೆ ಅಲ್ಲದ, ಆದರೆ ಸಾಮುದಾಯಿಕ ಪಠ್ಯಗಳಾದ ಇಂತಹ ತ್ರಿಪದಿಗಳನ್ನು ಜಾನಪದ ಪಠ್ಯಗಳೆಂದೇ ಪರಿಗಣಿಸಬೇಕಲ್ಲವೆ ? ಇಂತಹ ಒಂದು ಪ್ರಮೇಯವನ್ನು ಡಾ|| ಎಸ್. ವಿದ್ಯಾಶಂಕರ್ ಈಗಾಗಲೇ ಮಂಡಿಸಿದ್ದಾರೆ. (ಹೆಚ್ಚಿನ ವಿವರಗಳಿಗೆ ನೋಡಿ : ಹೀಗೊಬ್ಬ ಸರ್ವಜ್ಞ – ಡಾ|| ಎಸ್. ವಿದ್ಯಾಶಂಕರ್, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೨೦೦೯)

೧೬೩೬ರ ತೇದಿ ನಮೂದಾಗಿರುವ ವೆಂಕನ ಸಂಪಾದನೆಯಲ್ಲಿ ವೀರಶೈವೀಕರಣಕ್ಕಿಂತ ಭಿನ್ನವಾದ ಶಿಷ್ಟೀಕರಣದ ರಾಜಕಾರಣ ನಡೆದಿದೆ. ಈತ ಜಾನಪದೀಯ ಎನ್ನಬಹುದಾದ ಆಡುನುಡಿಯ ರಚನೆಗಳನ್ನೆಲ್ಲ ಶಿಷ್ಟ ಕನ್ನಡಕ್ಕೆ ತಿರುಗಿಸಿದ್ದಾನೆ. ಎಲ್ಲೆಲ್ಲಿ ಪ್ರಾಸ, ಛಂದೋದೋಷ ಕಾಣಬಹುದೋ ಅಲ್ಲೆಲ್ಲ ತನ್ನದೆ ತಿದ್ದುಪಾಟುಗಳನ್ನು ಮಾಡಿದ್ದಾನೆ. ಸಂಪಾದನೆಯ ಸಿದ್ಧವೀರನ ಸರ್ವಜ್ಞಮೂರ್ತಿ ನಿರೂಪಿಸಿದ ತ್ರಿವಿಧಿಯಲ್ಲಿನ ಪಾಠಕ್ಕೂ ಈತನ ಪಾಠಕ್ಕೂ ವ್ಯತ್ಯಾಸಗಳು ಇರುವುದನ್ನು ನಾವು ಗಮನಿಸಬಹುದು. ವೆಂಕನಲ್ಲಿ ಷಕಟರೇಫ, ಗಡ ಇತ್ಯಾದಿ ಪ್ರಯೋಗಗಳು ಇವೆ. ಆದರೆ ಇದಕ್ಕಿಂತ ಪ್ರಾಚೀನವಾದ ಪ್ರಭುದೇಶಿಕನಲ್ಲಿ ಇವುಗಳ ಬಳಕೆ ಇಲ್ಲ. ಎಷ್ಟೋ ವಚನಗಳು ಪ್ರಾಸಕ್ಕೆ ತಕ್ಕಂತೆ ನಾದಕ್ಕೆ ತಕ್ಕಂತೆ ರೂಪಿಸಲ್ಪಟ್ಟಿವೆ. ಒಂದು ಉದಾಹರಣೆ ನೀಡುವುದಾದರೆ; ಸಿದ್ಧವೀರನಲ್ಲಿ ಇರುವ,

*ಮಾಳಿಗೆಯು ಸಡಿಲಿದರೆ ಸೂಳೆ ಹಲ್ಲುದುರಿದರೆ*
*ಆಳುವ ದೊರೆಯು ಹಸಿದರೆ ಇದ್ದಲ್ಲಿಂದ*
*ಹೇಳದಲೆ ತೊಲಗು ಸರ್ವಜ್ಞ*

ಎಂಬ ತ್ರಿಪದಿಯು ವೆಂಕನಲ್ಲಿ

*ಮಾಳಿಗೆ ಸೋರುವಡೆ ಸೂಳೆ ಹಲುದಿಂಬಡೆ*
*ಆಳುವ ದೊರೆಯು ಹಸಿದಡೆ ಅಲ್ಲಿಂದ*
*ಹೇಳದೆ ಹೋಗು ಸರ್ವಜ್ಞ*

– ಎಂದಾಗಿದೆ. ಹೀಗೆ ಸಂಪಾದನೆಯಲ್ಲಿ ಶಿಷ್ಟೀಕರಣದ ರಾಜಕಾರಣವೂ ಜರುಗಿದೆ. ಜಾನಪದ ರಚನೆಗಳನ್ನು ಛಂದಸ್ಸಿಗೆ ಒಗ್ಗಿಸಿ, ಮಾತ್ರಾ ಗಣ-ಅಕ್ಷರಗಣಗಳ ಕಟ್ಟಳೆಗೆ ಬಗ್ಗಿಸಿ ಸಾಹಿತ್ಯವನ್ನು ಓದು ಬರಹ ಬಲ್ಲವರ ಸೊತ್ತಾಗಿ ಮಾಡುವ ರಾಜಕಾರಣ ಇದು.

ಈ ಎಲ್ಲ ಕಾರಣಗಳಿಂದ ಸರ್ವಜ್ಞ ಎಂಬ ಅಂಕಿತದಲ್ಲಿ ಇರುವ ವಚನಗಳನ್ನು ಸರ್ವಜ್ಞ ಎಂಬ ಒಬ್ಬ ಕವಿ ಬರೆದಿರುವ ವಚನಗಳು ಎಂದು ತಿಳಿದು ಸರ್ವಜ್ಞನ ವಚನಗಳು ಎಂದು ಕರೆಯದೆ ಅವನ್ನು ಸರ್ವಜ್ಞಾಂಕಿತ ವಚನಗಳು ಎಂದೇ ಕರೆಯುವುದು ಸೂಕ್ತ. ವ್ಯಕ್ತೀಕರಣ, ವೀರಶೈವೀಕರಣ, ಶಿಷ್ಟೀಕರಣ ಆಗಿರುವ ರಚನೆಗಳೆಂದೆ ತಿಳಿಯುವುದು ಸೂಕ್ತ.

**ಡಾ|| ರಾಮಲಿಂಗಪ್ಪ ಟಿ. ಬೇಗೂರು**
ನಂ. ೩೫, ೬ನೇ ಬ್ಲಾಕ್, ಬನಗಿರಿನಗರ, ಬನಶಂಕರಿ ೩ನೇ ಹಂತ
ಬೆಂಗಳೂರು - ೫೬೦ ೦೮೫

ಕೆ. ಎಸ್. ರವಿಕುಮಾರ್

ಸಾಮಾಜಿಕ ನ್ಯಾಯವೆಂಬುದು ಮೇಘನಾದ ಸಹಾ ಅವರಿಗೆ ಬರಿಯ ಬಾಯಿಮಾತಿನ ಆದರ್ಶವಾಗಿರಲಿಲ್ಲ. ಅವರೆಂದೂ ತಮ್ಮೊಡನೆ ಕೆಲಸ ಮಾಡಿದ ಜವಾನರನ್ನು ಜವಾನರೆಂದು ಅಪ್ಪಿತಪ್ಪಿಯೂ ಕರೆಯುತ್ತಿರಲಿಲ್ಲ. ಹಾಗೆಯೇ ಬೇರೆ ಯಾರಾದರೂ ಮಾತನಾಡುವಾಗ ಜವಾನ ಎಂಬ ಪದವನ್ನು ಪ್ರಯೋಗಿಸಿದರೆ ಸಹಾ ''ಏಕೆ, ಅವನಿಗೆ ಒಂದು ಹೆಸರಿದೆಯಲ್ಲ? ಹೆಸರು ಹೇಳಿರಿ'' ಎಂದು ಆಗ್ರಹಿಸುತ್ತಿದ್ದರು.



# ಎಲ್ಲವೂ ವೇದಗಳಲ್ಲಿದೆ!

ರಾಷ್ಟ್ರೀಯ ಮನೋಭಾವ ಅಂದರೆ, ಓರ್ವ ಪ್ರಜೆಯಲ್ಲಿ ಆತ ತನ್ನ ತಾಯ್ನಾಡಿನ ಕುರಿತು ಹೊಂದಿರಬಹುದಾದ ಭಾವೋದ್ರೇಕದ ಅಭಿಮಾನವನ್ನು ಬಡಿದೆಬ್ಬಿಸಿ ಅದನ್ನು ಅಂಧಾಭಿಮಾನವನ್ನಾಗಿ ಪರಿವರ್ತಿಸುವ ಪ್ರತಿಗಾಮಿ ಸಿದ್ಧಾಂತವೊಂದು ಭಾರತೀಯರ ನಡುವೆ ಚಾಲ್ತಿಯಲ್ಲಿದೆ. ಈ ಅಂಧಾಭಿಮಾನವನ್ನು ಸದಾ ಜೀವಂತವಾಗಿರಿಸಲು ಭಾರತದ ಇತಿಹಾಸದಿಂದ ಕೆಲವು ಕಾಲಘಟ್ಟ (ವೇದಕಾಲ, ಸುವರ್ಣಯುಗ ಇತ್ಯಾದಿ)ಗಳನ್ನು ವೈಭವೀಕರಿಸಲಾಗುತ್ತದೆ. ಈ ವೈಭವೀಕರಣದಿಂದಾಗಿ ಭಾವೋದ್ರೇಕಕ್ಕೆ ಸ್ಫೂರ್ತಿ ತುಂಬುವ ಹುನ್ನಾರ ಜರುಗುತ್ತಲೇ ಇರುತ್ತದೆ. ಪ್ರಾಚೀನ ಸಾಹಿತ್ಯಗಳಾದ ವೇದ, ಉಪನಿಷತ್ತು, ಸ್ಮೃತಿ ಇತ್ಯಾದಿಗಳಲ್ಲಿ ಆಧುನಿಕ ವಿಜ್ಞಾನಿಗಳು ಆವಿಷ್ಕರಿಸಿದ ಅದೆಷ್ಟೋ ವಿಚಾರಗಳು ಆಗಲೇ ಇದ್ದವು ಎಂಬ (ವಿತಂಡ) ವಾದವಂತೂ ಶಿಕ್ಷಿತರ ನಡುವೆಯೇ ಹೆಚ್ಚು ಜನಪ್ರಿಯವಾಗಿದೆ (ಅಂದ ಹಾಗೆ, ಜನಪ್ರಿಯವಾದದ್ದೆಲ್ಲ ಕಾಲದ ಪರೀಕ್ಷೆಯಲ್ಲಿ ಉತ್ತೀರ್ಣವಾಗಿರುತ್ತದೆ ಎಂದೇನೂ ಇಲ್ಲವಲ್ಲ). ಇಂತಹ ವಾದ ಹೂಡುವವರಿಗೆ ಪರಿಶೀಲನೆ, ತಲಸ್ಪರ್ಶಿ ಅಧ್ಯಯನ, ತಾರ್ಕಿಕ ಆಲೋಚನಾಕ್ರಮ, ಅರಿಯುವ ಸಂಯಮ, ಅಡ್ಡ ವಿಚಾರಣೆ, ವಿಮರ್ಶೆ, ಆತ್ಮಾವಲೋಕನ, ಸಹನೀಯ ಚರ್ಚೆ, ವಿವೇಚನೆ, ವಿವೇಕ, ಕುತೂಹಲ, ಚಿಕಿತ್ಸಕ ದೃಷ್ಟಿಕೋನ, ವಿಚಾರವಂತಿಕೆ ಇತ್ಯಾದಿಗಳ ನೆರವು ಬೇಕಿಲ್ಲ. ಇವರದು ಮುಚ್ಚಿದ ಬಾಗಿಲಿನ ಮನಸ್ಸು. ಇವರ ನಿಲುವೇ ಅಂತಿಮ. ಇವರ ನಂಬಿಕೆಯೇ ಪ್ರಶ್ನಾತೀತ, ಸಂದೇಹಾತೀತ, ಇನ್ನೂ ಏನೇನೆಲ್ಲ. ಇವರ ಜೊತೆ ರಚನಾತ್ಮಕ ಸಂವಾದ ಸಾಧ್ಯವೇ ಇಲ್ಲ. ಇಂತಹ ಅನುಭವ ಪಡೆಯುವ ಸನ್ನಿವೇಶವೊಂದು ನಮ್ಮ ಭಾರತದ ಅತ್ಯಂತ ಕ್ರಿಯಾಶೀಲ ವಿಜ್ಞಾನಿ ಎಂದು ಖ್ಯಾತರಾಗಿದ್ದ ಮೇಘನಾದ ಸಹಾ (೧೮೯೩-೧೯೫೬) ಅವರಿಗೆ ಎದುರಾಯಿತು.

ಮೇಘನಾದ ಸಹಾ ನಕ್ಷತ್ರಗಳ ರೋಹಿತಕ್ಕೆ ಸಂಬಂಧಿಸಿದಂತೆ ಔಷ್ಣ ಅಯಾನೀಕರಣ ಸಿದ್ಧಾಂತವನ್ನು ಮಂಡಿಸಿ ಜಗದ್ವಿಖ್ಯಾತರಾದ ಮೇಲೆ ಢಾಕಾಗೆ ಭೇಟಿಕೊಟ್ಟರು. ಅಲ್ಲಿಯ ಜಡ್ಜ್ ಒಬ್ಬರು, ಸಹಾ ಅವರ ವೈಜ್ಞಾನಿಕ ಕೊಡುಗೆಯ ಬಗ್ಗೆ ತಿಳಿಯಲು ಬಯಸಿದರು. ಸಹಾ ಉತ್ಸಾಹದಿಂದಲೆ ನಕ್ಷತ್ರಗಳ ಸಂಯೋಜನೆ ಮತ್ತು ತಾವು ಕಂಡುಹಿಡಿದ ಅಯಾನೀಕರಣ ಸೂತ್ರಗಳ ಬಗ್ಗೆ ವಿವರಿಸಿದರು. ಆದರೆ ಆ ಜಡ್ಜ್ ಪೂರ್ತಿ ಕೇಳಿಸಿಕೊಳ್ಳಲು ತಾಳ್ಮೆ ತೋರಿಸದೆ ನಡುವೆ ಬಾಯಿ ಹಾಕಿ, ''ನೀವು ಸಂಶೋಧಿಸಿದುದರಲ್ಲಿ ಹೊಸದೇನಿದೆ? ಇವೆಲ್ಲ ನಮ್ಮ ವೇದಗಳಲ್ಲಿದೆಯಲ್ಲ'' ಎಂದರು. ಸಹಾ ಅವರಿಗೆ ಬೇಸರವಾಯಿತು. ಆದರೆ ಅವರು ಉಡಾಫೆ ಹೇಳಿಕೆಗಳನ್ನು ಪ್ರಶ್ನಿಸದೇ ಇರುವವರಲ್ಲ. ''ಮಹನೀಯರೆ, ನಕ್ಷತ್ರಗಳಲ್ಲಿ ಜರುಗುವ ಅಯಾನೀಕರಣ ಸಿದ್ಧಾಂತವು ವೇದಗಳ ಯಾವ ಭಾಗದಲ್ಲಿ ವಿವರಿಸಲ್ಪಟ್ಟಿದೆ ಎಂದು ತಿಳಿಸಿಕೊಡುತ್ತೀರಾ ?'' ಎಂದು ಕೇಳಿದರು.

ಸಹಾ ಅವರ ಪ್ರಶ್ನೆಗೆ ವಿಚಲಿತನಾಗದಂತೆ ತೋರಿದ ಜಡ್ಜ್ ''ನಾನು ಸ್ವತಃ ವೇದಗಳನ್ನು ಓದಿಲ್ಲ. ಆದರೆ ನೀವು ಹೇಳಿದ್ದೆಲ್ಲ ಅವುಗಳಲ್ಲಿದೆ ಎಂಬುದು ನನ್ನ ದೃಢ ನಂಬಿಕೆ'' ಎಂದಾಗ ಸಹಾ ಸುಮ್ಮನಾಗಿಬಿಟ್ಟರು. ಪುರಾವೆ, ಆಧಾರಗಳೇ ಇಲ್ಲದೆ, ಪರಾಮರ್ಶಿಸುವ ಗೊಡವೆಗೂ ಹೋಗದೆ ಸುಮ್ಮನೆ ನಂಬಿಕೆಯಿಂದ ವಾದಿಸುವವರ ಜೊತೆ ಚರ್ಚಿಸಿ ಪ್ರಯೋಜನವಿಲ್ಲ ಎಂಬ ವಿವೇಚನೆ ಅವರಿಗೆ ಮೌನ ವಹಿಸಲು ಪ್ರೇರಣೆ ನೀಡಿತು.

ಈ ಅನುಭವದ ನಂತರ ಮೇಘನಾದ ಸಹಾ ಮುಂದಿನ ಎರಡು ದಶಕಗಳ ಕಾಲ ವೇದ, ಉಪನಿಷತ್ತುಗಳು, ಸ್ಮೃತಿ, ಪುರಾಣಗಳು ಮತ್ತು ಪ್ರಾಚೀನ ಖಗೋಳ ಶಾಸ್ತ್ರದ ಗ್ರಂಥಗಳನ್ನೆಲ್ಲ ಅಧ್ಯಯನ ಮಾಡಿದರು. ಈ ಯಾವ ಸಾಹಿತ್ಯದಲ್ಲಿಯೂ ಅಯಾನೀಕರಣ ಸಿದ್ಧಾಂತವನ್ನು ಅವರು ಸಂಶೋಧಿಸಲು ವಿಫಲರಾದರು ಎಂದು ನಿಮಗೆ ಪ್ರತ್ಯೇಕವಾಗಿ ಹೇಳಬೇಕಾಗಿಲ್ಲವಷ್ಟೆ. ಆದರೆ ಸಹಾ ಅವರಿಗೆ ಮಾತ್ರ ಭಾರತೀಯ ಪ್ರಾಚೀನ ಸಾಹಿತ್ಯಗಳಲ್ಲಿ ವಿಜ್ಞಾನದ ವಿಷಯಕ್ಕೆ ಬಂದಾಗ ಇರುವ ಕಾಳೆಷ್ಟು, ಗಾಳಿಗೆ ತೂರಬಲ್ಲ ಜೊಳ್ಳೆಷ್ಟು ಎಂಬ ತಿಳುವಳಿಕೆಯ ಮೇಲೆ ಸಂದೇಹಾತೀತ ಹಿಡಿತ ದೊರಕಿತು.

ಯಾವುದೋ ಒಂದು ಹಳವಂಡಕ್ಕೆ ಜೋತುಬಿದ್ದು ಆರೋಗ್ಯಕರ ಮುಕ್ತ ನಿಲುವು

ತಳೆಯಲು ಹಿಂಜರಿಯುವ ಹುಂಬ ಮೊಂಡರ ಅಂಧ ವಿಶ್ವಾಸದೆದುರು ಶ್ರಮವಹಿಸಿ ಸತ್ಯ ಅರಸುವ ಸಹಾ ಅಂತಹವರ ಸಹನೆ ಮತ್ತು ಶ್ರದ್ಧೆ ನಮಗೆ ಅನುಕರಣೀಯವಾಗಿದೆ.

*　　　　*　　　　*

ಮೇಘನಾದ ಸಹಾ ಅವರ ತಂದೆ ಓರ್ವ ಕಿರಾಣಿ ವ್ಯಾಪಾರಿ. ಹಳ್ಳಿ ಹಳ್ಳಿಯ ಸಂತೆಗಳಿಗೆ ತೆರಳಿ ವ್ಯಾಪಾರ ಮಾಡುತ್ತಿದ್ದ ಆ ತಂದೆಗೆ ಸಹಾ ಶಾಲೆಗೆ ಹೋಗಲೆಂಬ ಹಂಬಲ ಕಿಂಚಿತ್ತೂ ಇರಲಿಲ್ಲ. ಆದರೆ ಸಹಾಗೆ ಮಾತ್ರ ಶಾಲೆಗೆ ಹೋಗಿ ಕಲಿಯಬೇಕೆಂಬ ತೀವ್ರ ಅಭಿಲಾಷೆ. ಅಪ್ಪನಾಸೆಗೆ ವಿರುದ್ಧವಾಗಿ ಅವರು ಶಾಲೆಗೆ ಸೇರಿದ್ದೂ ಆಯಿತು. ಗಟ್ಟಿಯಾಗಿ ಓದಿಕೊಂಡಾಗ ನಿದ್ದೆಗೆ ಅಡ್ಡಿಯಾಗುವುದೆಂದು ತಂದೆಯಿಂದ ಅವರಿಗೆ ಆಗಾಗ ಏಟು ಬೀಳುತ್ತಿತ್ತು. ಶಾಲೆಯಾದರೋ ಹತ್ತು ಕಿ.ಮೀ. ದೂರದ ಸಮೋಲಿಯಾ ಎಂಬಲ್ಲಿ (ಈಗಿನ ಬಾಂಗ್ಲಾದೇಶ) ಇತ್ತು. ಕೆಸರು, ಕೊರಕಲಿನ ರಸ್ತೆಯಲ್ಲಿ ಬರಿಗಾಲಿನಲ್ಲೆ ನಡೆಯುತ್ತ ಸಹಾ ಶಾಲೆಗೆ ಹೋಗಿಬರುತ್ತಿದ್ದರು. ಅಪ್ಪನ ನಿರ್ಲಕ್ಷ್ಯ, ಕಠಿಣ ನಡಿಗೆ ಮತ್ತು ಖರಾಬು ರಸ್ತೆಗಳು ಎಷ್ಟು ಮಾತ್ರವೂ ಅವರನ್ನು ಓದಿನಿಂದ ವಿಮುಖರನ್ನಾಗಿಸಲಿಲ್ಲ. ಅಣ್ಣ ಜಯನಾಥನಿಗೆ ತಮ್ಮನ ಮೇಲೆ ಕನಿಕರ. ದಿನವೂ ಇಪ್ಪತ್ತು ಕಿ.ಮೀ. ನಡೆಯುವಷ್ಟು ಸಮಯವನ್ನು ಸಹಾ ಓದಿಗೇ ಉಪಯೋಗಿಸಿದರೆ ಉತ್ತಮ ಎಂದು ಅವನಿಗೆ ಅನ್ನಿಸುತ್ತಿತ್ತು. ತಮ್ಮನ ದಣಿವಿನ ನಿತ್ಯ ಚಾರಣವನ್ನು ತಪ್ಪಿಸಲೋಸುಗ ಜಯನಾಥ ಸಿಮೋಲಿಯಾದಲ್ಲಿ ವೈದ್ಯರಾಗಿದ್ದ ಅನಂತಕುಮಾರ್ ದಾಸ್ ಎಂಬುವರ ಮನೆಯಲ್ಲಿ ತನ್ನ ತಮ್ಮನನ್ನು ಇರಿಸುವ ವ್ಯವಸ್ಥೆ ಮಾಡಿದನು. ಆದರೆ ಸಹಾ ಇಲ್ಲಿರಲು ಒಂದು ಷರತ್ತಿಗೆ ಒಳಪಡಬೇಕಿತ್ತು. ಕೆಳಜಾತಿಗೆ ಸೇರಿದವರಾದ್ದರಿಂದ ಅವರು ತಮ್ಮ ಊಟದ ತಟ್ಟೆಯನ್ನು ತಾವೇ ತೊಳೆದುಕೊಳ್ಳಬೇಕಿತ್ತು. ಜೊತೆಗೆ ಸಣ್ಣಪುಟ್ಟ ಮನೆಗೆಲಸಗಳನ್ನು, ಹಸುಗಳ ಯೋಗಕ್ಷೇಮ ನೋಡಿಕೊಳ್ಳುವ ಜವಾಬ್ದಾರಿಯನ್ನು ನಿರ್ವಹಿಸಬೇಕಿತ್ತು. ತನಗೆ ವಿದ್ಯಾಭ್ಯಾಸ ಸಿಗುವುದಾದರೆ ಈ ಕೆಲಸಗಳನ್ನೆಲ್ಲ ಮಾಡಲು ಅವರ ಮುಗ್ಧ ಮನಸ್ಸು ಸಮ್ಮತಿಸಿತ್ತು. ಆದರೆ ಭಾರತದ ಜಾತಿಪದ್ಧತಿಯ ತಳಹದಿಯಾದ ಮೇಲು ಕೀಳಿನ, ತಾರತಮ್ಯದ ಜೀವನಶೈಲಿಯ ನೇರ ಪರಿಚಯ ಅವರ ವಿದ್ಯಾರ್ಥಿ ಜೀವನದಲ್ಲಿ ಹೀಗೆ ಆರಂಭವಾಯಿತು.

*　　　　*　　　　*

೧೯೦೯ರಲ್ಲಿ ಢಾಕಾ ಕಾಲೇಜಿಗೆ ದಾಖಲಾಗಲು ಸಹಾ ಪ್ರವೇಶ ಪರೀಕ್ಷೆ ಬರೆದು ಅದರಲ್ಲಿ ಇಡೀ ಪೂರ್ವ ಬಂಗಾಳಕ್ಕೇ ಅತಿ ಹೆಚ್ಚು ಅಂಕ ಪಡೆದು ಪ್ರಥಮ ಸ್ಥಾನದಲ್ಲಿ ತೇರ್ಗಡೆಯಾದರು. ಇಂಟರ್‌ಮೀಡಿಯೆಟ್ (ಪ್ರೀ-ಯೂನಿವರ್ಸಿಟಿಗೆ ಸಮ) ಸೈನ್ಸ್‌ಗೆ ಅವರಿಗೆ ಪ್ರವೇಶ ದೊರಕಿತು.

ಒಮ್ಮೆ ಸರಸ್ವತಿ ಪೂಜೆಯ ಸಮಾರಂಭವೊಂದಕ್ಕೆ ಸಹಾ ಅವರು ಎಲ್ಲ ವಿದ್ಯಾರ್ಥಿಗಳ ಜೊತೆ ತೆರಳಿದರು. ಅಲ್ಲಿ ಅರ್ಚಕ, ''ವೇದಿಕೆಯಿಂದ ಕೆಳಗಿಳಿ, ನೀನು ಕೆಳಜಾತಿಯವ'' ಎಂದು ಎಲ್ಲರೆದುರು ಗದರಿದಾಗ ಸಹಾ ಅವರಿಗೆ ಬಹಳ ಅವಮಾನವಾಯಿತು. ಅವರು ತೀವ್ರವಾಗಿ ನೊಂದುಕೊಂಡರು.



೧೯೧೧ರಲ್ಲಿ ಕಲಕತ್ತೆಯ ಪ್ರೆಸಿಡೆನ್ಸಿ ಕಾಲೇಜಿಗೆ ಸಹಾ ಸೇರಿದರು. ಈಡೆನ್ ಹಿಂದೂ ಹಾಸ್ಟೆಲಿನಲ್ಲಿ ಅವರು ಊಟ ಮಾಡುತ್ತಿದ್ದರು. ಅಲ್ಲಿ ನಡೆದ ಕಹಿ ಘಟನೆ ಅಲ್ಲಿಂದ ಅವರು ಹೊರ ನಡೆಯುವಂತೆ ಮಾಡಿತು. ಮೇಲುಜಾತಿಯ ಕೆಲವು ಯುವಕರು ಸಹಾ ಅವರು ತಮ್ಮೊಡನೆ ಊಟ ಮಾಡಬಾರದು ಎಂದು ಹಾಸ್ಟೆಲಿನ ವ್ಯವಸ್ಥಾಪಕರಲ್ಲಿ ತಗಾದೆ ತೆಗೆದರು. ಹಾಸ್ಟೆಲ್ಲಿನಲ್ಲಿ ನಡೆಯುತ್ತಿದ್ದ ಸರಸ್ವತಿ ಪೂಜೆಗೂ ಸಹಾ ಬರಬಾರದೆಂದು ವಿರೋಧಿಸಲಾಯಿತು. ಈ ಹಿಂದೆ ಇದೇ ಬಗೆಯ ಅನುಭವವಾಗಿದ್ದಾಗಲೇ ಈ ಬಗೆಯ ಪೂಜಾ ಸಮಾರಂಭಗಳಿಗೆ ಹೋಗಬಾರದು ಎಂದು ಸಹಾ ತೀರ್ಮಾನಿಸಿದ್ದರು. ಈಗಂತೂ ಆ ತೀರ್ಮಾನ ಇನ್ನೂ ಗಟ್ಟಿಯಾಯಿತು. ಅವರು ಮತ್ತು ಅವರ ಕೆಲ ಗೆಳೆಯರು ತಮ್ಮದೇ ಆದ ಖಾಸಗಿ ಮೆಸ್ ಆರಂಭಿಸಿ ತಮ್ಮ ಊಟಕ್ಕೆ ವ್ಯವಸ್ಥೆ ಮಾಡಿಕೊಂಡರು (ಸಹಾ ಅವರು ಪ್ರತಿಭಾವಂತ ವಿದ್ಯಾರ್ಥಿಯಾಗಿದ್ದರಿಂದ ಅವರಿಗೆ ವಿದ್ಯಾರ್ಥಿವೇತನ ಸಿಗುತ್ತಿತ್ತು. ಅವರ ಎಲ್ಲ ವೈಯಕ್ತಿಕ ಖರ್ಚುಗಳು ಮತ್ತು ವಿದ್ಯಾಭ್ಯಾಸದ ವೆಚ್ಚಗಳು ಹೇಗೋ ಇದರಲ್ಲೆ ನಿಭಾಯಿಸಲ್ಪಡುತ್ತಿದ್ದವು). ಇಂತಹ ಅಮಾನವೀಯ ಅನುಭವಗಳು ಸಹಾ ಅವರಲ್ಲಿ ಹಿಂದೂ ಸಾಂಪ್ರದಾಯಿಕ ಆಚರಣೆಗಳಲ್ಲಿ ಆಳವಾದ ಅವಿಶ್ವಾಸ ರೂಪಿಸಿದವು. ಹಾಗೆಂದು ಇವುಗಳನ್ನೆಲ್ಲ ಕುರುಡಾಗಿ ದ್ವೇಷಿಸುವುದನ್ನು ಅವರು ರೂಢಿಸಿಕೊಳ್ಳಲಿಲ್ಲ. ಬದಲಾಗಿ ಅವುಗಳನ್ನು ನೈತಿಕ ಸ್ಥೈರ್ಯದಿಂದ ತಾರ್ಕಿಕವಾಗಿ ಪ್ರಶ್ನಿಸುವ ಬೌದ್ಧಿಕ ಸಮತೋಲನವನ್ನು ಅವರು ಸಾಧಿಸಿಕೊಂಡರು. ಅವರ ವಿಚಾರಪೂರಿತ ವಾದವೈಖರಿ (ವಾಗ್ ವೈಖರಿಯೂ ಹೌದು)ಯೆದುರು ಎದುರಾಳಿಗಳು ಮೌನ ವಹಿಸದೆ ಬೇರೆ ದಾರಿಯಿರುತ್ತಿರಲಿಲ್ಲ.

ಹೀಗೆ ವಿದ್ಯಾಭ್ಯಾಸದ ಜೊತೆಜೊತೆಗೆ ಸಾಮಾಜಿಕ ಅವಮಾನಗಳ ಪರಿಚಯ ಪಡೆಯುತ್ತ ಬೆಳೆದ ಸಹಾ ಅವರಿಗೆ ಭಾರತೀಯ ಸಮಾಜದ ಬದುಕಿನ ಆದ್ಯತೆಗಳಲ್ಲಿ ವಿಜ್ಞಾನಕ್ಕೆ ಅತಿಕಡಿಮೆ ಪ್ರಾಶಸ್ತ್ಯವಿರುವುದು ಅರಿವಾಯಿತು. ಪುರಾತನ ನಂಬಿಕೆಗಳಿಗೆ ನೇತುಬಿದ್ದು ವರ್ತಮಾನದಲ್ಲಿ ಬದುಕುವುದಕ್ಕಿಂತ ಭವಿಷ್ಯ ರೂಪಿಸುವ ವಿಜ್ಞಾನ ಮತ್ತು ತಂತ್ರಜ್ಞಾನಗಳಿಗೆ ಮಾನ್ಯತೆ ಲಭ್ಯವಾಗದಿದ್ದರೆ ಭಾರತೀಯರೆಂದೂ ಮುಂಚೂಣಿಗೆ ಬರಲು ಸಾಧ್ಯವಾಗುವುದಿಲ್ಲ ಎಂಬುದು ಅವರ ದೃಢ ಅನಿಸಿಕೆಯಾಗಿತ್ತು. ಈ ನಿಟ್ಟಿನಲ್ಲಿ ಆಳವಾಗಿ ಆಲೋಚಿಸಿ ೧೯೩೮ರಲ್ಲಿ ಶಾಂತಿನಿಕೇತನದಲ್ಲಿ ಅವರು ನೀಡಿದ 'ಒಂದು ನವ ಜೀವನ ತತ್ವ' ಎಂಬ ಸತ್ವಶಾಲಿ ಭಾಷಣಕ್ಕೆ ಟೀಕೆಗಳ ಸುರಿಮಳೆಯಾಯಿತು. ಇಷ್ಟಕ್ಕೂ ಅವರು ಏನು ಹೇಳಿದ್ದರು ?

''ಮಿದುಳು ಮತ್ತು ಕೈ, ಅಂದರೆ, ಆಲೋಚನೆ ಮತ್ತು ಶ್ರಮ ಒಟ್ಟಿಗೆ ಸಾಗಬೇಕು. ಬರಿಯ ಊಹಾಪೋಹಗಳಿಂದ ವಿಜ್ಞಾನದ ಬೆಳಕು ಕಾಣುವುದು ಸಾಧ್ಯವಿಲ್ಲ. ಹುಸಿ ರಾಷ್ಟ್ರೀಯ ಹೆಮ್ಮೆಯ ನೆಪವೊಡ್ಡಿ ಪಶ್ಚಿಮದ ಪ್ರಾಯೋಗಿಕ ವಿಜ್ಞಾನವನ್ನು ತಿರಸ್ಕಾರದಿಂದ ಕಾಣಲಾಗದು. ನಾವೇ ನಮ್ಮ ಆಲೋಚನೆ ಮತ್ತು ದೈಹಿಕ ಶ್ರಮಗಳಿಂದ ಉತ್ಪಾದನಾ ವಿಧಾನಗಳನ್ನು ಅಭಿವೃದ್ಧಿಪಡಿಸಿಕೊಳ್ಳದೆ ಹೋದರೆ ನಾವು ತಂತ್ರಜ್ಞಾನಗಳಿಗೆ ಪಾಶ್ಚಿಮಾತ್ಯರನ್ನೇ ಅವಲಂಬಿಸಿರಬೇಕಾಗುತ್ತದೆ. ಪಶ್ಚಿಮದ ದೇಶಗಳಲ್ಲಿ ಪ್ರತಿಭೆ ಎಲ್ಲಿದ್ದರೂ ಬೆಳಕಿಗೆ ಬರುತ್ತದೆ. ಓರ್ವ ಕಸಾಯಿಯವನ ಮಗ ಪ್ರತಿಭೆ ಮತ್ತು ಆಸಕ್ತಿಗಳಿದ್ದರೆ ಷೇಕ್ಸ್‌ಪಿಯರ್ ಆಗಬಹುದು. ಆದರೆ ಭಾರತದ ಜಾತಿ ಪದ್ಧತಿಯಲ್ಲಿ ಅವನು ರವೀಂದ್ರನಾಥ್ ಟಾಗೋರ್ ಆಗುವುದು ಸಾಧ್ಯವಿಲ್ಲ. ಒಬ್ಬ ಮೋಚಿ (ಚಪ್ಪಲಿ ಹೊಲಿಯುವವ)ಯ ಮಗ ತನ್ನ ಪ್ರತಿಭೆಯಿಂದ ಸಮಾಜದಲ್ಲಿ ಉನ್ನತ ಸ್ಥಾನವನ್ನೇಕೆ ಪಡೆಯಬಾರದು ?'' ಎಂದು ಅವರು ಕೇಳಿದ ಪ್ರಶ್ನೆ ಕರ್ಮಠ ಮನಸ್ಸುಗಳನ್ನು ಅಲುಗಾಡಿಸಿಬಿಟ್ಟಿತು. ಸಂಪ್ರದಾಯವಾದಿಗಳು ಅವರ ಮೇಲೆ ವಾಗ್ದಾಳಿ ನಡೆಸಿದರು. ಇತ್ತ ಸಂಪ್ರದಾಯವನ್ನು ಮನಃಪೂರ್ವಕವಾಗಿ ನಿರಾಕರಿಸಲಾಗದ, ಅತ್ತ ವಿಜ್ಞಾನವನ್ನೂ ಮನಃಪೂರ್ವಕವಾಗಿ ಒಪ್ಪಲಾಗದ ಎಡಬಿಡಂಗಿಗಳು ಸಹಾ ನೆರವಿಗೆ ಬರಲಿಲ್ಲ. ಸಹಾ ಯಾವಾಗಲೂ ಸತ್ಯ ಹಾಗೂ ಪ್ರಾಮಾಣಿಕತೆಗಳ ಪರ ನಿಂತವರು. ತಮ್ಮ ನಿಲುವಿಗೆ ಯಾರ ಬೆಂಬಲವನ್ನೂ ಅವರು ನಿರೀಕ್ಷಿಸುತ್ತಿರಲಿಲ್ಲ. ಭಾರತದ ಎಲ್ಲ ಪ್ರಾಚೀನ ಸಾಹಿತ್ಯಗಳನ್ನು ಆಮೂಲಾಗ್ರ ಅಭ್ಯಸಿಸಿದ್ದ ಅವರಿಗೆ ತಮ್ಮ ವಿರೋಧಿಗಳ ಟೊಳ್ಳುತನದ ಅರಿವು ಚೆನ್ನಾಗಿ ಮನದಟ್ಟಾಗಿತ್ತು. ಅವರೊಬ್ಬರೇ ಗಟ್ಟಿಯಾಗಿ ನಿಂತು ಎಲ್ಲ ಟೀಕೆಗಳನ್ನು ಎದುರಿಸಿದರು.

ಸಹಾ ಮೌಢ್ಯತೆಗಳನ್ನು ವಿರೋಧಿಸುವಾಗಲೂ ಮನುಷ್ಯತ್ವಕ್ಕೆ ಮಹತ್ವ ಕೊಡದ ಹುಂಬ ಉತ್ಸಾಹಿಯಾಗಿರಲಿಲ್ಲ. ಸಿಮೋಲಿಯಾದಲ್ಲಿ ತನಗೆ ಊಟ ಕೊಟ್ಟು (ಇವರ ತಟ್ಟೆ ಮುಟ್ಟದಿದ್ದರೂ) ಶಾಲೆಗೆ ಹೋಗಲು ನೆರವಾಗಿದ್ದ ವೈದ್ಯರ ವಿಧವಾ ಪತ್ನಿಗೆ ಅವರು ತಪ್ಪದೇ ಹಣ ಕಳುಹಿಸುತ್ತಿದ್ದರು. ತಾವು ಬಾಲ್ಯದಲ್ಲಿ ವಿದ್ಯಾಭ್ಯಾಸ ಪಡೆಯಲು ಪಟ್ಟ ಕಷ್ಟವನ್ನು ಅವರೆಂದೂ ಮರೆತಿರಲಿಲ್ಲ. ಕಡೆಯವರೆಗೂ ನೂರಾರು ಬಡ ವಿದ್ಯಾರ್ಥಿಗಳಿಗೆ ಹಣ ಸಹಾಯ ನೀಡಿ ವಿದ್ಯಾರ್ಜನೆಗೆ ಉತ್ತೇಜನ ನೀಡಿದರು. ಅಲಹಾಬಾದ ಮತ್ತು ಕಲಕತ್ತೆಯ ಅವರ ಮನೆಯಲ್ಲಿ ಅದೆಷ್ಟು ಮಂದಿ ವಿದ್ಯಾರ್ಥಿಗಳು ಸಹಾ ಹಾಗೂ ಅವರ ಪತ್ನಿ ಪ್ರೀತಿಪೂರ್ವಕವಾಗಿ ನೀಡಿದ ಊಟವನ್ನು ಸವಿದಿದ್ದರೋ. ತನಗಾದ ಜಾತಿಕಾರಣದ ಅವಮಾನಗಳು ತನ್ನ ವಿದ್ಯಾರ್ಥಿಗಳಿಗಾಗಬಾರದು ಎಂಬುದು ಸಹಾ ಅವರ ತೀವ್ರ ಅಭಿಲಾಷೆಯಾಗಿತ್ತು.

ಸಾಮಾಜಿಕ ನ್ಯಾಯವೆಂಬುದು ಸಹಾ ಅವರಿಗೆ ಬರಿಯ ಬಾಯಿಮಾತಿನ

ಆದರ್ಶವಾಗಿರಲಿಲ್ಲ. ಅವರೆಂದೂ ತಮ್ಮೊಡನೆ ಕೆಲಸ ಮಾಡಿದ ಜವಾನರನ್ನು ಜವಾನರೆಂದು ಅಪ್ಪಿತಪ್ಪಿಯೂ ಕರೆಯುತ್ತಿರಲಿಲ್ಲ. ಹಾಗೆಯೇ ಬೇರೆ ಯಾರಾದರೂ ಮಾತನಾಡುವಾಗ ಜವಾನ ಎಂಬ ಪದವನ್ನು ಪ್ರಯೋಗಿಸಿದರೆ ಸಹಾ ''ಏಕೆ, ಅವನಿಗೆ ಒಂದು ಹೆಸರಿದೆಯಲ್ಲ? ಹೆಸರು ಹೇಳಿರಿ'' ಎಂದು ಆಗ್ರಹಿಸುತ್ತಿದ್ದರು.

ಭಾರತದಲ್ಲಿ ಕ್ಯಾಲೆಂಡರ್ ಸುಧಾರಣೆಗೆ ಮತ್ತು ನದಿಪ್ರವಾಹಗಳನ್ನು ನಿಯಂತ್ರಿಸುವ ವೈಜ್ಞಾನಿಕ ಕ್ರಮಗಳ ಜಾರಿಗೆ ಜವಹರಲಾಲ್ ನೆಹರೂ ಸರ್ಕಾರದೊಟ್ಟಿಗೆ ಕೆಲಸ ಮಾಡಿ ಗಮನ ಸೆಳೆದ ಸಹಾ ಒಂದು ಅವಧಿಗೆ (೧೯೫೨-೫೬) ಸಂಸತ್ ಸದಸ್ಯರೂ ಆಗಿ ಸಂಸತ್‌ನಲ್ಲಿ ತಮ್ಮ ತೀಕ್ಷ್ಣ ಮಾತುಗಳಿಂದ ಸರ್ಕಾರ ಮೈ ಕೊಡವಿಕೊಳ್ಳುವಂತೆ ಮಾಡುತ್ತಿದ್ದರು. ಭಾರತದಲ್ಲಿ ಅನೇಕ ವಿಜ್ಞಾನ ಸಂಸ್ಥೆಗಳು ಹಾಗೂ ವಿಜ್ಞಾನಿಗಳನ್ನು ರೂಪಿಸಿದ ಸಹಾ ಅವರ ಹೆಸರನ್ನು ೧೯೩೦, ೧೯೩೭, ೧೯೩೯ ಮತ್ತು ೧೯೪೦ರಲ್ಲಿ ನಾಲ್ಕು ಬಾರಿ ಭೌತಶಾಸ್ತ್ರದ ನೊಬೆಲ್ ಪ್ರಶಸ್ತಿಗೆ ಸೂಚಿಸಲಾಗಿತ್ತು. ''ಒಂದು ಶತಮಾನದ ಅವಧಿಯಲ್ಲಿ ಒಬ್ಬರಿಗಿಂತ ಹೆಚ್ಚು ಭಾರತೀಯ ವಿಜ್ಞಾನಿಗಳಿಗೆ ನೊಬೆಲ್ ಪ್ರಶಸ್ತಿ ನೀಡುವುದು ಹೆಚ್ಚೇ ಆದೀತು'' ಎಂದು ನೊಬೆಲ್ ಪ್ರಶಸ್ತಿ ಸಮಿತಿಯು ಸಹಾ ಅವರಿಗೆ ಪ್ರಶಸ್ತಿ ನೀಡಲಾಗದಿದ್ದುದಕ್ಕೆ (ಅರ್ಥಹೀನ) ಕಾರಣ ನೀಡಿತು. ಸಹಾ ಇಂತಹ ನಿರಾಸೆಗಳಿಗೆಲ್ಲ ನಿರುತ್ಸಾಹಗೊಳ್ಳುವ ಸಡಿಲ ಮನಸ್ಸಿನವರಲ್ಲ. ಠಾಕುಠೀಕಿಲ್ಲದ ವಿಜ್ಞಾನಿ ಸಹಾ ತಮ್ಮ ನೇರ ನಡವಳಿಕೆಗಳಿಂದ 'ಸಾಣೆ ಹಿಡಿಯದ ವಜ್ರ'ದಂತಿದ್ದರು.

**ಸಹಾ ಎತ್ತಿದ ಪ್ರಶ್ನೆ**

''ಒಬ್ಬ ಮೋಚಿಯ ಮಗನೇಕೆ ತನ್ನ ಪ್ರತಿಭೆಯಿಂದ ಸಮಾಜದಲ್ಲಿ ಉನ್ನತ ಸ್ಥಾನವನ್ನು ಪಡೆಯಬಾರದು ?'' ಇದು ಸಹಾ ಅವರ ದೃಷ್ಟಿಕೋನವನ್ನು ಪ್ರತಿಬಿಂಬಿಸುವ ಪ್ರಶ್ನೆ. ಅವರ ಕೊನೆಯುಸಿರಿನ ತನಕವೂ ಪ್ರಶ್ನೆಯಾಗಿಯೇ ಉಳಿದ ಪ್ರಶ್ನೆ. ಯಾವೊಬ್ಬ ಸನಾತನಿಯೂ, ಮತ ಭ್ರಮಿಷ್ಟನೂ, ಸಂಪ್ರದಾಯವಾದಿಯೂ ಹಾಗೂ ಅಂಧ ರಾಷ್ಟ್ರಾಭಿಮಾನಿಯೂ, ''ಸಹಾ ಅವರೇ, ನಿಮ್ಮ ಪ್ರಶ್ನೆ ಅರ್ಥವಿಲ್ಲದ್ದು, ಇಗೋ, ನೋಡಿ, ಎಷ್ಟು ಜನ ಬೇಕು, ಕೆಳಜಾತಿಯಿಂದ ಬಂದು ಪ್ರತಿಭಾಶಾಲಿಗಳೆನಿಸಿಕೊಂಡವರು. ಬೇಕಿದ್ದರೆ ಈ ಪಟ್ಟಿಯಲ್ಲಿರುವ ಹೆಸರನ್ನು ಪರಿಶೀಲಿಸಿ'' ಎಂದು ಅವರಿಗೆ ಸವಾಲು ಹಾಕಲಿಲ್ಲ. ಯಾಕೆಂದರೆ ವಸ್ತುಸ್ಥಿತಿ ಹಾಗಿರಲೇ ಇಲ್ಲವಲ್ಲ. ಇಲ್ಲವಾಗಿದ್ದರೆ ದೆಹಲಿಯ ಮೆಹರೋಲಿಯಲ್ಲಿ ನಿಲ್ಲಿಸಿರುವ ತುಕ್ಕು ಹಿಡಿಯದ ಕಬ್ಬಿಣದ ಕಂಬವನ್ನು ಎರಕಹೊಯ್ದ ಮೇಧಾವಿ ಕಮ್ಮಾರರ ಹೆಸರುಗಳನ್ನಾದರೂ ಹೇಳಬೇಕಿತ್ತು. ಶ್ರಮಜೀವಿಗಳ ಹೆಸರನ್ನು ದಾಖಲಿಸಿ ಲಾಭವೇನಾಗಬೇಕಿದೆ ? ಗ್ರಹಣವೆಂದರೆ ರಾಹುಕೇತುಗಳ ಆಟ ಎಂದ ಮಾತಿನರಮನೆಯ ಪಂಡಿತರು ತಾನೆ ಪ್ರಸಿದ್ಧಿ ಪಡೆಯಬೇಕಿರುವುದು !

ಸಹಾ ವಾದಿಸಿದಂತೆ ಪಶ್ಚಿಮದ ಸಮಾಜಗಳಲ್ಲಿ ಪ್ರತಿಭೆಯನ್ನು ಅದರ ಹಿನ್ನೆಲೆಯಿಂದ ನಿರ್ಲಕ್ಷಿಸುವುದಿಲ್ಲ ಅಥವಾ ಹತ್ತಿಕ್ಕುವುದಿಲ್ಲ. ಚಪ್ಪಲಿ ಹೊಲಿಯುವವನ ಮಗ ಚಪ್ಪಲಿ ಹೊಲಿದುಕೊಂಡೇ ಇರಬೇಕು ಎಂಬ ನಿರ್ಬಂಧವನ್ನು ಹೇರುವುದಿಲ್ಲ. ಅವನು ವಿಜ್ಞಾನಿಯಾಗಲು ಬಯಸಿದರೆ ಅವನಿಗೆ ಅಡ್ಡಿ ಆತಂಕಗಳಿರಬೇಕಿಲ್ಲ. ಸೂಕ್ಷ್ಮದರ್ಶಕ ಕಂಡುಹಿಡಿದು ಬ್ಯಾಕ್ಟೀರಿಯಾಗಳನ್ನು ವಿವರಿಸಿ ಸೂಕ್ಷ್ಮ ಜೀವವಿಜ್ಞಾನದ ಪಿತಾಮಹನೆಂದು ಖ್ಯಾತನಾಗಿರುವ ಹಾಲೆಂಡಿನ ಆಂಟೋನಿಯೊ ಲೆವೆನ್‌ಹಾಕ್ (೧೬೩೨-೧೭೨೩) ಬಟ್ಟೆ ಹೆಣೆಯುವ ಮತ್ತು ಸಾರಾಯಿ ಮಾರುವ ವೃತ್ತಿಯ ಕುಟುಂಬದಿಂದ ಬಂದವನು.

ಮಿಂಚು ಮೂಲತಃ ವಿದ್ಯುತ್ ಎಂದು ಕಂಡುಹಿಡಿದು, ಕಟ್ಟಡಗಳನ್ನು ಸಿಡಿಲಿನ ಆಘಾತದಿಂದ ರಕ್ಷಿಸುವ ಸಿಡಿಲು ವಾಹಕವನ್ನು ಕಂಡುಹಿಡಿದ ಅಮೆರಿಕಾದ ವಿಜ್ಞಾನಿ, ಕುಶಲ ರಾಜಕಾರಣಿಯೂ ಆಗಿದ್ದ ಬೆಂಜಮಿನ್ ಫ್ರಾಂಕ್ಲಿನ್ (೧೭೦೬-೧೭೯೦) ಮೇಣದ ಬತ್ತಿ ತಯಾರಿಸಿ ಮಾರುವ, ದಾರಿದ್ರ್ಯ ತುಂಬಿತುಳುಕುತ್ತಿದ್ದ ಕುಟುಂಬದಿಂದ ಬಂದವ. ಈತನಿಗೆ ಔಪಚಾರಿಕ ಶಿಕ್ಷಣವೇ ಇರಲಿಲ್ಲ.

ವಿದ್ಯುತ್ ಮತ್ತು ಕಾಂತತೆಗಳಿಗಿರುವ ಸಂಬಂಧವನ್ನು ಗುರುತಿಸಿ, ವಿದ್ಯುತ್‌ಕಾಂತೀಯ ಪ್ರೇರಣೆಯಿಂದ ಜಗತ್ತಿನ ಮೊತ್ತಮೊದಲ ಜನರೇಟರ್ ತಯಾರಿಸಿ, ವಿದ್ಯುದ್ವಿಭಜನೆಯ ನಿಯಮಗಳನ್ನು ಕಂಡುಹಿಡಿದ ಇಂಗ್ಲೆಂಡಿನ ಮೈಕೆಲ್ ಫ್ಯಾರಡೆ (೧೭೯೧-೧೮೬೭) ಓರ್ವ ಕಡುಬಡವ ಕಮ್ಮಾರನ ಮಗನಾಗಿದ್ದ.

ಅಂಧರಿಗೂ ವಿದ್ಯಾಭ್ಯಾಸ ಪಡೆಯಲು ಅನುಕೂಲವಾಗುವಂತೆ ಲಿಪಿಯನ್ನು ಅಭಿವೃದ್ಧಿಪಡಿಸಿ ಅವರ ಅಂಧಕಾರದ ಬಾಳಿನಲ್ಲಿ ಜ್ಞಾನಸೂರ್ಯ ಬೆಳಗುವಂತೆ ಮಾಡಿದ ಫ್ರಾನ್ಸಿನ ಲೂಯಿ ಬ್ರೇಲ್ (೧೮೦೯-೧೮೫೨) ಚರ್ಮದ ಪಾದರಕ್ಷೆ ತಯಾರಿಸಿ ಮಾರುವ ಚಮ್ಮಾರನ ಮಗನಾಗಿದ್ದ.

ಹೊಲಿಗೆಯಂತ್ರ ಕಂಡುಹಿಡಿದು ನಾವು ದೇಹಕ್ಕೆ ಒಪ್ಪುವ ಬಗೆಬಗೆಯ ವರ್ಣ, ವಿನ್ಯಾಸಗಳ ಬಟ್ಟೆ ತೊಟ್ಟು ಸಂಭ್ರಮಿಸಲು ಕಾರಣನಾದ ಅಮೇರಿಕಾದ ಐಸಾಕ್ ಮೆರಿಟ್ ಸಿಂಗರ್ (೧೮೧೧-೧೮೭೫) ಗಿರಣಿಯಲ್ಲಿ ಮರಗೆಲಸ ಮಾಡುತ್ತಿದ್ದ ಬಡ ಬಡಗಿಯ ಮಗನಾಗಿದ್ದ.

ರೇಬೀಸ್‌ನಿಂದ ಮನುಕುಲವನ್ನು ರಕ್ಷಿಸುವ ಲಸಿಕೆ ರೂಪಿಸಿದ, ಆಂಥ್ರಾಕ್ಸ್, ಚಿಕನ್‌ಪಾಕ್ಸ್, ಕಾಲರಾಗಳಿಗೂ ಲಸಿಕೆ ರೂಪಿಸಿ ಹೈನುಗಾರಿಕೆ ಮತ್ತು ಕುಕ್ಕುಟ ಉದ್ಯಮದ ಏಳಿಗೆಗೆ ಕಾರಣನಾದ, ಸೋಂಕುಕಾರಕ ಸೂಕ್ಷ್ಮಜೀವಿಗಳನ್ನು ಕೊಲ್ಲುವ ಪಾಶ್ಚರೀಕರಣ ವಿಧಾನದ ಸಂಶೋಧಕನಾದ ಮಹಾಮಾನವತಾವಾದಿ, ವೈದ್ಯನಲ್ಲದ ವೈದ್ಯ ಫ್ರಾನ್ಸಿನ ಲೂಯಿ ಪಾಶ್ಚರ್ (೧೮೨೨-೧೮೯೫) ಚರ್ಮ ಹದಮಾಡುವವನ ಮಗನಾಗಿದ್ದ.

ತಳಿಶಾಸ್ತ್ರದ ಪಿತಾಮಹನೆನಿಸಿದ ಚೆಕೋಸ್ಲೊವಾಕಿಯಾದ ಗ್ರೆಗೋರ್ ಮೆಂಡಲ್ (೧೮೨೨-೧೮೮೪) ಓರ್ವ ಬಡರೈತನ ಮಗ.

ಸಾವಿರಾರು ಸಂಶೋಧನೆಗಳನ್ನು ಮಾಡಿ ಸಿನೆಮಾ, ಬಲ್ಬು, ಗ್ರಾಮಾಫೋನ್, ಮುಂತಾದ ಕೊಡುಗೆಗಳನ್ನು ನೀಡಿದ ಥಾಮಸ್ ಆಲ್ವಾ ಎಡಿಸನ್ (೧೮೪೭-೧೯೩೧) ಬಡ ಮರಗೆಲಸದವನ ಮಗ.

ಮನೋವಿಜ್ಞಾನಕ್ಕೆ ಮಹತ್ವದ ಸ್ವರೂಪ ತಂದುಕೊಟ್ಟ ಆಸ್ಟ್ರಿಯಾದ ಸಿಗ್ಮಂಡ್ ಫ್ರಾಯ್ಡ್ (೧೮೫೬-೧೯೩೯)ನ ತಂದೆ ಉಣ್ಣೆ ಮಾರುವ ವೃತ್ತಿಯವನಾಗಿದ್ದ.

ಮಕ್ಕಳನ್ನು ಕಾಡುವ ಪೋಲಿಯೋ ಕಾಯಿಲೆಗೆ ಪೋಲಿಯೋ ಹನಿಗಳನ್ನು ಅಭಿವೃದ್ಧಿಪಡಿಸಿ ಅವರು ಜೀವನ ಪೂರ್ತಿ ಅಂಗವಿಕಲರಾಗುವುದನ್ನು ತಪ್ಪಿಸಿದ, ರಷ್ಯಾದಲ್ಲಿ ಹುಟ್ಟಿ ಅಮೆರಿಕಾದಲ್ಲಿ ನೆಲೆಸಿದ ಆಲ್ಬರ್ಟ್ ಸೇಬಿನ್ (೧೯೦೬- ೧೯೯೩)ನ ತಂದೆ ಓರ್ವ ನೇಕಾರನಾಗಿದ್ದ. ಅಮೆರಿಕಾದಲ್ಲಿ ನೆಲೆಸಿದ ಮೇಲೂ ಆತ ಈ ವೃತ್ತಿಯಲ್ಲೇ ಮುಂದುವರಿದಿದ್ದ.

## ಗಾಂಧಿ ಅಂತಿಮ ದಿನಗಳು

*ಡಾ|| ರಾಜಶೇಖರ ಮಠಪತಿ (ರಾಗಂ)*

**ಪುಟ : xx + ೧೭೪ = ೧೯೪** **ಬೆಲೆ : ರೂ. ೧೬೦**

**ಕಣ್ವ ಪ್ರಕಾಶನ,** 'ಕಾಲ ಕನಸು', ನಂ. ೮೯೪, ೧ನೇ ಮುಖ್ಯರಸ್ತೆ, ನಿಸರ್ಗ ಬಡಾವಣೆ ಚಂದ್ರಾ ಲೇಔಟ್, ಬೆಂಗಳೂರು - ೫೬೦ ೦೭೨

ರಾಷ್ಟ್ರಪಿತ ಮಹಾತ್ಮಾಗಾಂಧಿಯನ್ನು ಅರಿಯದವರು ನಮ್ಮ ದೇಶದಲ್ಲಷ್ಟೇ ಅಲ್ಲ; ಪ್ರಪಂಚದಲ್ಲೇ ಯಾರೂ ಇಲ್ಲ. ಗತಿಸಿ ಅರವತ್ನಾಲ್ಕು ವರ್ಷ ಕಳೆದರೂ ನಮಗೆ ಗಾಂಧಿಯನ್ನು ಮರೆಯಲಾಗುತ್ತಿಲ್ಲ. ಹಿಂದೆಂದಿಗಿಂತಲೂ ಇಂದು ಹೆಚ್ಚು ಚರ್ಚೆಗೊಳಗಾಗುತ್ತಿರುವ ವ್ಯಕ್ತಿ ಗಾಂಧೀಜಿ. ಸ್ವಾತಂತ್ರ್ಯ ಚಳುವಳಿ, ಅಸ್ಪೃಶ್ಯತಾ ನಿವಾರಣೆಯ ಹರಿಕಾರರಾಗಿ ಅವರು ಸಫಲರಾದದ್ದು ಮತ್ತು ಕೆಲವೊಂದು ಪ್ರಯತ್ನಗಳಲ್ಲಿ ವಿಫಲರಾದದ್ದು ಯಾಕೆ ? ಹಿಂದೂ ಮುಸ್ಲಿಂ ದಂಗೆಯನ್ನು ಅಹಿಂಸಾಮೂರ್ತಿಯಾಗಿದ್ದ ಅವರು ಹೇಗೆ ಕಂಡರು ? ಶಾಂತಿ ಮಂತ್ರ ಜಪಿಸುತ್ತ ಉಪವಾಸ ಸತ್ಯಾಗ್ರಹಗಳಲ್ಲಿ ಪಾಲ್ಗೊಂಡ ಅವರನ್ನು ಅವರ ಅನುಯಾಯಿಗಳು, ನಿಕಟವರ್ತಿಗಳು ಕಂಡ ಬಗೆ ಹೇಗೆ ? ಅವರ ಪರ-ವಿರೋಧ ಶಕ್ತಿಗಳ ಪ್ರಮಾಣವೆಷ್ಟು ? ಗಾಂಧಿಯ ಒಂದು ಮುಖವನ್ನು ಅನಾವರಣಗೊಳಿಸಿದ ಮತ್ತು ಅವರ ವ್ಯಕ್ತಿತ್ವವನ್ನು ಎತ್ತರಿಸಿದ ಸಾಹಿತ್ಯ ನಮ್ಮಲ್ಲಿ ಸಾಕಷ್ಟಿದೆ. ಅವರು ಎದುರಿಸಿದ ಒತ್ತಡಗಳು, ಬಿಕ್ಕಟ್ಟುಗಳು, ದುಗುಡಗಳು ಹೇಳಿ ಮುಗಿಯದಷ್ಟಿವೆ. ಅವರೇ ತಮ್ಮ ಆತ್ಮಕಥೆಯಲ್ಲಿ ಸತ್ಯದೊಂದಿಗೆ ನಡೆಸಿದ ಪ್ರಯೋಗಗಳೆಂದು ಎಷ್ಟೋ ಸತ್ಯಗಳನ್ನು ಧಾರೆ ಧಾರೆಯಾಗಿ ಪ್ರಾಂಜಲ ಮನಸ್ಸಿನಿಂದ ಒಪ್ಪಿಕೊಂಡಿದ್ದಾರೆ. ಗಾಂಧಿ ತನ್ನ ಕೆಲವು ಅಚಲ ನಿಲುವಿಗೆ ಬದ್ಧರಾಗಿ ಎಷ್ಟೆಷ್ಟನ್ನೋ ಸಾಧಿಸಿದರು. ಆದರೆ ಕೆಲವೊಂದನ್ನು ಸಾಧಿಸಲಾಗಲಿಲ್ಲ. ಅವರ ಕೊನೆಯ ದಿನಗಳಲ್ಲಿ ಇದು ಅವರನ್ನು ಕಾಡುತ್ತಿತ್ತು. ಗಾಂಧಿ ಹಾಗೆ ಮಾಡಬೇಕಿತ್ತು – ಹೀಗೆ ಮಾಡಬೇಕಿತ್ತು – ಹಾಗೆ ಮಾಡಬಾರದಿತ್ತು ಎಂಬಂತಹ ನಿರ್ದೇಶನಗಳನ್ನು ಏನೂ ಸಾಧಿಸಲಾಗದವರು ಕೊಡುತ್ತಲೇ ಇರುತ್ತಾರೆ. ಗಾಂಧಿಯ ತಲ್ಲಣಗಳೇನಾಗಿದ್ದುವೆಂದು ಇಲ್ಲಿ ಓದಿನೋಡಿ.




## ನುಡಿಸಂಕರ ಸಾಹಿತ್ಯ (ಕನ್ನಡ ಭಾಷಾಭಿವೃದ್ಧಿ ಯೋಜನೆ)

*ರಹಮತ್ ತರೀಕೆರೆ*

**ಪುಟ : ೫೨ + ೨೧೨** **ಬೆಲೆ : ರೂ. ೧೬೦**

**ನಿರ್ದೇಶಕರು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ - ೫೮೩ ೨೭೬

ಭಾಷೆಗಳನ್ನು ಸಾಮಾನ್ಯವಾಗಿ ಬೇರೆ ಭಾಷೆಯ ಪದಗಳನ್ನು ಬೆರೆಸದೆ ಶುದ್ಧವಾಗಿ ಬಳಸಬೇಕೆಂಬ ಅಪೇಕ್ಷೆಯೇನೊ ಸರಿಯೆ. ಎಲ್ಲ ಭಾಷೆಗಳೂ ಯಾವುದೇ ಎರವಲು ಪದಗಳಿಲ್ಲದೆ ಇಂದು ಸ್ವತಂತ್ರವಾಗಿಲ್ಲ ಎನ್ನುವುದೂ ಅಷ್ಟೇ ಸತ್ಯ. ನುಡಿಸಂಕರ ಅರ್ಥಾತ್ ಭಾಷಾ ಬೆರಕೆ ಇಂದು ನಿನ್ನೆಯ ವಿಚಾರವೇನಲ್ಲ. ನಾವಾಡುವ ಇಂದಿನ ಕನ್ನಡದಲ್ಲಿ ನಮ್ಮ ದೇಶದ ಭಾಷೆಗಳಷ್ಟೇ ಅಲ್ಲದೆ ಅನ್ಯದೇಶಗಳ ಭಾಷಾ ಪದಗಳು ಹೇರಳವಾಗಿದ್ದು ''ಎರವಲು ಪದಕೋಶ''ವೆಂಬ ಶಬ್ದಕೋಶವನ್ನೇ ನವಕರ್ನಾಟಕ ಪ್ರಕಟಿಸಿದೆ. ದಕ್ಷಿಣ ಭಾರತದ ನಾಲ್ಕು ಪ್ರಾದೇಶಿಕ ಭಾಷೆಗಳಲ್ಲಿ ಪದ-ಉಚ್ಚಾರ - ಅರ್ಥಗಳಿಗೆ ತೀರ ಸಾಮೀಪ್ಯವಿದ್ದು ದ್ರಾವಿಡ ಭಾಷೆಗಳೆನಿಸಿವೆ. ನುಡಿಸಂಕರವು ಯಾವುದೇ ಭಾಷೆಯನ್ನು ಹಾಳುಮಾಡಬೇಕೆಂಬ ಉದ್ದೇಶದಿಂದ ಆದದ್ದಲ್ಲ. ಒಂದು ಪ್ರದೇಶದ ಜನರು ಇನ್ನೊಂದು ಕಡೆಗೆ ವಲಸೆ ಹೋದಾಗ, ಗಡಿ ಪ್ರದೇಶಗಳ ಜನರು ಪರಸ್ಪರ ವ್ಯವಹರಿಸುವಾಗ ಎರಡು ಭಾಷೆಗಳ ಪದಗಳು ಸೇರ್ಪಡೆಗೊಳ್ಳುತ್ತವೆ. ಜನರಿಗೆ ಭಾಷಾಶುದ್ಧಿಗಿಂತ ವಿಷಯದ ಅರಿವಾಗುವುದು ಮುಖ್ಯ. ಈ ಪುಸ್ತಕವು ಭಾಷೆಗಳ ಪದಗಳು ಪರಸ್ಪರ ಮಿಳಿತವಾಗಲು ಕಾರಣಗಳನ್ನೂ ಅದು ಎಂದಿನಿಂದ ಪ್ರಾರಂಭವಾಗಿರಬಹುದೆಂಬ ಕಾಲದ ವ್ಯಾಪ್ತಿಯನ್ನೂ ಶೋಧಿಸುತ್ತ ಸಾಗಿದೆ. ಇಲ್ಲಿ ಸಂಗ್ರಹಿಸಲಾದ ತತ್ವಪದ, ಶಾಸನ, ವಚನ ಮುಂತಾದ ವಿವಿಧ ಆಕರಗಳು ಇದನ್ನು ಸ್ಪಷ್ಟಪಡಿಸಿವೆ. ಒಂದಲ್ಲ – ಎರಡಲ್ಲ ಅದ್ಭುತ ಮಾಹಿತಿಗಳ ಭಂಡಾರವನ್ನೇ ಬೃಹತ್ ಪ್ರಮಾಣದಲ್ಲಿ ಸಾದರಪಡಿಸಿ ಓದುಗನ ಕುತೂಹಲ ತಣಿಸಿದೆ.

**– ಇಂದಿರಾಕುಮಾರಿ**

*೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨*

## ಸಾದರ ಸ್ವೀಕಾರ

**ಕುವೆಂಪು ನೆನಪು – ಮುಂದೆ ಬನ್ನಿ – ನಡೆನುಡಿ**
ಪ್ರಭು ಜಯರಾಮ್
**ಪುಟ : ೪ + ೧೬ + ೧೧೨** **ಬೆಲೆ : ರೂ. ೫೦**
**ಶ್ರೀ ಪ್ರಭು ಜಯರಾಮ್ ಸೇವಾ ಸಮಿತಿ,** 'ಅಮೋಘ' ನಂ. ೧೦೪, ೧೪ನೇ ಅಡ್ಡರಸ್ತೆ, ೬ನೇ ಮುಖ್ಯರಸ್ತೆ ನೃಪತುಂಗನಗರ, ನಾಗರಭಾವಿ, ಬೆಂಗಳೂರು - ೫೬೦ ೦೭೨

**ಕೆಂಡ ಮಂಡಲ** (ಸಮಗ್ರ ಕಾವ್ಯ)
*ಡಾ|| ವೃಷಭೇಂದ್ರಾಚಾರ್ ಅರ್ಕಸಾಲಿ*
**ಪುಟ : xxviii + ೩೮೦ = ೪೦೮** **ಬೆಲೆ : ರೂ. ೨೪೫**
**ಶುಭ ಮುದ್ರಣ ಪ್ರಕಾಶನ,** ನಂ. ೫೫೯/೧, ೯ನೇ ಮುಖ್ಯರಸ್ತೆ, ಎಂ. ಸಿ. ಬಡಾವಣೆ, ವಿಜಯನಗರ ಬೆಂಗಳೂರು - ೫೬೦ ೦೪೦

**ಮೂಡಲ ಕೆಂಪು** *ಡಾ|| ವೃಷಭೇಂದ್ರಾಚಾರ್ ಅರ್ಕಸಾಲಿ*
**ಪುಟ : xii + ೯೨ = ೧೦೪** **ಬೆಲೆ : ರೂ. ೭೫**
**ಎಂ. ಕೆ. ಪ್ರಕಾಶನ,** ನಂ. ೪೧, ೩ನೇ ಮುಖ್ಯರಸ್ತೆ ಮೊದಲನೇ ಹಂತ, ೨ನೇ ಫೇಸ್, ಮಂಜುನಾಥನಗರ ವೆಸ್ಟ್ ಆಫ್ ಕಾರ್ಡ್ ರೋಡ್, ಬೆಂಗಳೂರು - ೫೬೦ ೦೧೦

**ಹೊರಳು ದಾರಿ** (ವೈಚಾರಿಕ ಲೇಖನಗಳ ಸಂಗ್ರಹ)
*ಪ್ರೊ|| ಎನ್. ವಿ. ಅಂಬಾಮಣಿ ಮೂರ್ತಿ*
**ಪುಟ : xvi + ೧೮೪ + ೧೬ = ೨೧೬** **ಬೆಲೆ : ರೂ. ೧೨೦**
**ಪ್ರಿಯದರ್ಶಿನಿ, ಪ್ರಕಾಶನ,** ನಂ. ೧೩೮, ೭ನೇ 'ಸಿ' ಮುಖ್ಯರಸ್ತೆ, ಹಂಪಿನಗರ, ವಿಜಯನಗರ ೨ನೇ ಹಂತ ಬೆಂಗಳೂರು - ೫೬೦ ೧೦೪

**ಇಮ್ಮಡಿ ನಾಗವರ್ಮನ ಶಾಸ್ತ್ರಸಾಹಿತ್ಯ**
*ಡಾ|| ಎಂ. ಮಹ್ಮದ್ ಬಾಷ ಗೂಳ್ಯಂ*
**ಪುಟ : xii + ೩೦೮ = ೩೨೦** **ಬೆಲೆ : ರೂ. ೨೫೦**

**ಕನ್ನಡ ವಿಭಕ್ತಿರೂಪಗಳ ಅಯಿತ್ತಿಹಾಸಿಕ ಬೆಳವಣಿಗೆ**
*ಬಸವರಾಜ ಕೋಡಗುಂಟಿ*
**ಪುಟ : xviii + ೧೯೮ = ೨೧೬** **ಬೆಲೆ : ರೂ. ೧೫೦**

**ಶಬ್ದಾದರ್ಶವೆಂಬ ಹೊಸಗನ್ನಡ ವ್ಯಾಕರಣವು** *ಬಿ. ಮಲ್ಲಪ್ಪ*
**ಪುಟ : viii + ೧೦೫** **ಬೆಲೆ : ರೂ. ೮೦**

ಮೇಲಿನ ಮೂರು ಕೃತಿಗಳ ಪ್ರಕಾಶಕರು
**ಬಂಡಾರ ಪ್ರಕಾಶನ,** ಮಸ್ಕಿ - ೫೮೪ ೧೨೪, ರಾಯಚೂರು ಜಿ.

**ಇವು ಬರೀ ಕವನಗಳಲ್ಲ...** *ಕತ್ತಿಗೆ ಗಂಗಾಧರಪ್ಪ*
*ಕೆ. ಪಿ. ದೇವೇಂದ್ರಯ್ಯ, ಯು. ಎನ್. ಸಂಗನಾಳಮಠ*
*ಕೆ. ಸಿದ್ದಪ್ಪ, ಪಿ. ಎಂ. ಸಿದ್ಧಯ್ಯ*
**ಪುಟ : xii + ೧೧೦** **ಬೆಲೆ : ರೂ. ೪೦**
**ಚನ್ನ-ಚೇತನ ಪ್ರಕಾಶನ,** ಹಿರೇ ಕಲ್ಮಠ ಹೊನ್ನಾಳಿ - ೫೭೭ ೨೧೭, ದಾವಣಗೆರೆ ಜಿಲ್ಲೆ

**ಬರಸಹಿಷ್ಣು ಹಾರಕಕ್ಕೆ ಮರುಜೀವ – ಗೋಪಾಲನಹಳ್ಳಿಯ ಯಶೋಗಾಥೆ** *ಮಲ್ಲಿಕಾರ್ಜುನ ಹೊಸಪಾಳ್ಯ*
**ಪುಟ : iv + ೩೨** **ಬೆಲೆ : ರೂ. ೨೫**
**ಕೃಷಿ ಮಾಧ್ಯಮ ಕೇಂದ್ರ,** ನಂ. ೧೧೯, ೧ನೇ ಮುಖ್ಯರಸ್ತೆ, ೪ನೇ ಅಡ್ಡರಸ್ತೆ, ನಾರಾಯಣಪುರ, ಧಾರವಾಡ - ೫೮೦ ೦೦೮

**ಗುರುದೇವ ಟಾಗೋರರ ಚುಟುಕುಗಳು** *ಡಿ. ವಿ. ಬಡಿಗೇರ*
**ಪುಟ : ೬೪** **ಬೆಲೆ : ರೂ. ೪೦**
**ವೈದ್ಯ ವಾರ್ತಾ ಪ್ರಕಾಶನ,** ವಿದ್ಯಾರಣ್ಯಪುರಂ ಮೈಸೂರು - ೫೭೦ ೦೦೮

**ಚಿನುವಾನ ಚೆರಿಮನೆ** *ಅನಿತಾ ಪೈಲೂರು*
**ಪುಟ : xiv + ೪೬** **ಬೆಲೆ : ರೂ. ೫೦**
**ಭೂಮಿ ಬುಕ್ಸ್,** ೧೫೦, ಮೊದಲನೇ ಮುಖ್ಯರಸ್ತೆ ಶೇಷಾದ್ರಿಪುರಂ, ಬೆಂಗಳೂರು - ೫೬೦ ೦೨೦

**ರಾಮ ಕ್ಷತ್ರಿಯ ಸಮುದಾಯದ ಸಂಸ್ಕೃತಿ** (ಶೇರುಗಾರ ಸಮುದಾಯದ ಅಧ್ಯಯನ) *ಡಾ|| ಸುರೇಶ ನಾರಾಯಣ ನಾಯ್ಕ*
**ಪುಟ : ೧೭೨** **ಬೆಲೆ : ರೂ. ೧೫೦**

**ಹೊಳೆಸಾಲು** *ಡಾ|| ಸುರೇಶ ನಾರಾಯಣ ನಾಯ್ಕ*
**ಪುಟ : xiv + ೭೪** **ಬೆಲೆ : ರೂ. ೭೫**

ಮೇಲಿನ ಎರಡು ಕೃತಿಗಳ ಪ್ರಕಾಶಕರು
**ಸುವರ್ಣ ಪ್ರಕಾಶನ,** ಶ್ರೀ ನಾರಾಯಣ, ಬಾರಗದ್ದೆ, ಸಾಳೇಹಿತ್ತಲ್ ರಸ್ತೆ, ಹೊನ್ನಾವರ, ಉತ್ತರ ಕನ್ನಡ - ೫೮೧ ೩೩೪

**ಮೊಬೈಲ್ ಎಂಬ ಮೋಹಿನಿ** (ಪ್ರಬಂಧ ಸಂಕಲನ)
*ತಂಬ್ರಹಳ್ಳಿ ಡಿ. ರಾಮನಮಲಿ*
**ಪುಟ : xii + ೮೮ = ೧೦೦** **ಬೆಲೆ : ರೂ. ೬೦**
**ಹೊಂಬೆಳಕು ಪ್ರಕಾಶನ,** ೩೭೦/೩ ಆಚಾರ್ಯ ಬಡಾವಣೆ ಹರಪನಹಳ್ಳಿ - ೫೮೩ ೧೩೧, ದಾವಣಗೆರೆ ಜಿಲ್ಲೆ

**ನಿಜ ದನಿ** (ಹೋರಾಟಕ್ಕೆ ಹಾಡಿನ ರಂಗು) *ಯಮುನಾ ಗಾಂವ್ಕರ್*
**ಪುಟ : iv + ೧೦೪** **ಬೆಲೆ : ರೂ. ೬೦**

**ಸುತ್ತಮುತ್ತ ಒಂದು ಸುತ್ತು** (ವೈಚಾರಿಕ ಲೇಖನಗಳ ಸಂಗ್ರಹ)
*ಯಮುನಾ ಗಾಂವ್ಕರ್*
**ಪುಟ : x + ೯೪** **ಬೆಲೆ : ರೂ. ೬೦**

ಮೇಲಿನ ಎರಡು ಕೃತಿಗಳ ಪ್ರಕಾಶಕರು
**ಬಂಡಾಯ ಪ್ರಕಾಶನ,** 'ಸಹಯಾನ' ಕೆರೆಕೋಣ, ಅರೆಅಂಗಡಿ ಹೊನ್ನಾವರ ತಾಲೂಕು, ಉತ್ತರ ಕನ್ನಡ - ೫೮೧ ೪೩೦

# ಅಮೆರಿಕದ ಬಂದೂಕು ಸಂಸ್ಕೃತಿ




'ಟ್ರಿಗ್ಗರ್ ಹ್ಯಾಪಿ ಅಮೆರಿಕ' ಎಂಬ ನುಡಿಗಟ್ಟು ಚಾಲ್ತಿಯಲ್ಲಿದೆ ಮೊದಲಿನಿಂದ. ಪ್ರಾಯಶಃ ಇದು ಅಮೆರಿಕದ ಹುಟ್ಟಿನಿಂದಲೇ ಬಂದದ್ದು ಎಂದು ತೋರುತ್ತದೆ. ಮೂಲ ನಿವಾಸಿಗಳನ್ನು ಮೂಲೆಗೊತ್ತಿ ನಿರ್ನಾಮ ಮಾಡಿ ಬಿಳಿಯ ವಲಸೆಗಾರರ ನಾಡು ಕಟ್ಟಿದ ಜನ ಸ್ವಾತಂತ್ರ್ಯ ಪಡೆದುಕೊಂಡದ್ದೂ ಬಂದೂಕಿನಿಂದಲೇ. ಅಂತರ್ಯುದ್ಧದಲ್ಲೂ ಬಂದೂಕಿನದೇ ಪ್ರಾಧಾನ್ಯ. ಕರಿಯರ ಶೋಷಣೆಗೂ ಬಂದೂಕೇ ಆಧಾರ. ಆದ್ದರಿಂದಲೇ ಇರಬೇಕು ಅಮೆರಿಕನ್ನರಿಗೆ ಬಂದೂಕು ಸಂವಿಧಾನದತ್ತವಾಗಿ ಸುಲಭವಾಗಿ ಎಟುಕುವಂತಾದದ್ದು. ನಂತರದ ವರ್ಷಗಳಲ್ಲಿ ಅಮೆರಿಕದ ವಿವಿಧ ರಾಜ್ಯಗಳಲ್ಲಿ ವಿವಿಧ ಬಗೆಯ ನಿಯಮಗಳಿವೆ ನಾಗರಿಕರು ಬಂದೂಕು ಖರೀದಿಸಲು. ಪ್ರಾಪ್ತ ವಯಸ್ಸಿಗೆ ಬಂದವರು ಸುಲಭವಾಗಿ ಬಂದೂಕು ಪಡೆಯಬಹುದು. ಎರಡನೇ ಮಹಾಯುದ್ಧದ ನಂತರ ಪ್ರಪಂಚದಲ್ಲಿ ಇದುವರೆಗೆ ನಡೆದಿರುವ ಎಲ್ಲ ಸಶಸ್ತ್ರ ಸಂಘರ್ಷಗಳಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಅಮೆರಿಕದ ಬಂದೂಕು ಪ್ರಯೋಗವಾಗಿದೆ, ಆಗುತ್ತಿದೆ. ಇದರಲ್ಲಿ ಬಹುತೇಕ ಅಮೆರಿಕನ್ ಸೈನಿಕರು, ಕೂಲಿ ಸಿಪಾಯಿಗಳೂ ನೇರವಾಗಿ ಭಾಗವಹಿಸಿದ್ದಾರೆ. ಈ ಬಂದೂಕು ಸಂಸ್ಕೃತಿ ಅಮೆರಿಕದ ನಾಗರಿಕ ಜೀವನವನ್ನು ಪ್ರವೇಶಿಸಿ ಬೇರೂರಿರುವುದು ದುರಂತ. ಇದು ಅಮೆರಿಕದಲ್ಲಿ ಭಯದ ವಾತಾವಾರಣ ಉಂಟುಮಾಡಿದೆ. ಯಾರು ಯಾವಾಗ ಎಲ್ಲಿ ಅಮಾಯಕ ಜನರ ಮೇಲೆ ಹುಚ್ಚಾಪಟ್ಟೆ ಗುಂಡಿನ ಮಳೆಗರೆಯುವರು ಎಂದು ಊಹಿಸಲಸಾಧ್ಯ. ಇಂಥ ಘಟನೆಗಳು ಹುಚ್ಚೋ, ಬೆಪ್ಪೋ, ದ್ವೇಷವೋ, ಪೂರ್ವ ನಿಯೋಜಿತವೋ ತಿಳಿಯದು. ಅಮೆರಿಕದ ಕಾಯಿದೆಯಲ್ಲಿ ಅತಿರೇಕದ ತಾತ್ಕಾಲಿಕ ಮನಸ್ಥಿತಿಗೆ ಮಾನ್ಯತೆ ಬೇರೆ ಇದೆ. ಹಾಗಾಗಿ ಆಗಾಗ್ಗೆ ಅಮೆರಿಕದಲ್ಲಿ ನಾಗರಿಕರ ಮೇಲೆ ಹಲ್ಲೆ ನಡೆಯುತ್ತಿರುತ್ತದೆ.

ಇತ್ತೀಚೆಗೆ ಅಮೆರಿಕದ ಉಸ್ಕಾನ್ಸಿನ್ ರಾಜ್ಯದಲ್ಲಿರುವ ಸಿಖ್ಖರ ಪ್ರಾರ್ಥನಾಮಂದಿರ ಗುರುದ್ವಾರದ ಮೇಲೆ ನಡೆದ ಗುಂಡಿನ ದಾಳಿ, ಸಂಭವಿಸಿದ ಸಾವು ನೋವು ಭಾರತೀಯರನ್ನು ದಿಗ್ಭ್ರಮೆಗೊಳಿಸಿದೆ. ಈ ಹತ್ಯಾಕಾಂಡ ನಡೆಸಿದಾತ ಅಮೆರಿಕದ ಮಾಜಿ ಸೈನಿಕ. ಈ ದಾಳಿಯ ಹಿಂದಿನ ಉದ್ದೇಶ ತಿಳಿಯದೆ ಹೋಗಬಹುದು. ಇಂಥ ಇತರ ದಾಳಿಗಳಂತೆಯೇ. ಏಕೆಂದರೆ ಅಮೆರಿಕದ ಅಧಿಕಾರಿಗಳು ಸಾಮಾನ್ಯವಾಗಿ ಇಂಥ ಪ್ರಕರಣಗಳನ್ನು ಬುದ್ಧಿವಿಕಲನ ಕೃತ್ಯ ಎಂದು ತಳ್ಳಿಹಾಕಿ ತೆಪ್ಪಗಾಗುತ್ತಾರೆ. ಆದರೆ ಉಸ್ಕಾನ್ಸಿನ್ ಗುರುದ್ವಾರದ ಘಟನೆ ಆ ರೀತಿಯಲ್ಲಿ ಕೈಬಿಡುವಂತಿಲ್ಲ. ದಾಳಿ ನಡೆಸಿದ ಯೋಧ ಮೈಕೇಲ್ ಪೇಜ್ ಬಿಳಿಯರ ಶ್ರೇಷ್ಠತೆಯನ್ನು ಎತ್ತಿಹಿಡಿಯುವ ಸಂಘಟನೆಯೊಂದಿಗೆ ಸಂಬಂಧಹೊಂದಿದ್ದನೆಂದು ಕಂಡುಬಂದಿದೆ. ಈ ಸಂಘಟನೆ ವಿದೇಶೀಯರನ್ನು ದ್ವೇಷಿಸುವ, ಅವರ ಮೇಲೆ ಹಲ್ಲೆ ನಡೆಸುವ ಭಯೋತ್ಪಾದಕರ ಗುಂಪು. ಅಮೆರಿಕದ ೯/೧೧ರ ಟ್ರೇಡ್ ಸೆಂಟರ್ ದಾಳಿಯ ತರುವಾಯ ಇಂಥ ದಾಳಿಗಳು ಏಶಿಯನ್ ಜನಾಂಗದ ಮೇಲೆ ಹೆಚ್ಚಾಗಿದೆ. ತಲೆಗೆ ಪೇಟ ಮತ್ತು ಗಡ್ಡಧಾರಿಗಳಾದ ಸಿಖ್ಖರನ್ನು ಒಸಾಮಾಬಿನ್ ಲಾಡೆನ್‌ನ ಅನುಯಾಯಿಗಳು ಎಂದು ಮೈಕೇಲ್ ಪೇಜ್ ತಪ್ಪಾಗಿ ಎಣಿಸಿದ್ದ ಎಂಬುದು ಒಂದು ಊಹೆ. ಇದು ಘಟನೆಯನ್ನು ಮುಚ್ಚಿಹಾಕುವ ಪ್ರಯತ್ನ. ಒಸಾಮಾಬಿನ್ ಲಾಡೆನ್‌ನ ದಾಳಿ ನಂತರ ಅರಿಜೋನಾದ ಮೆಸಾ ಎಂಬಲ್ಲಿ ಸಿಖ್ ಮಾಲಿಕನಿಗೆ ಸೇರಿದ್ದ ಪೆಟ್ರೋಲ್‌ಸ್ಟೇಷನ್ ಒಂದು ಭಸ್ಮವಾದ ಘಟನೆ ನೆನಪಿಸಿಕೊಳ್ಳಬೇಕು. ಉತ್ತರ ಅಮೆರಿಕದಲ್ಲಿ ವಲಸೆಹೋದ ಭಾರತೀಯರಲ್ಲಿ ಮೊದಲಿಗರು ಸಿಖ್ ಜನಾಂಗದವರು. ಕ್ಯಾಲಿಫೋರ್ನಿಯದ ಜಮೀನುಗಳಲ್ಲಿ ಕೃಷಿಕಾರ್ಮಿಕರಾಗಿ ಹೋದವರು ಇವರು ಇಪ್ಪತ್ತನೇ ಶತಮಾನದ ಆದಿಯಲ್ಲಿ. ಎಲ್ಲ ಬಗೆಯ ತಾರತಮ್ಯಗಳನ್ನು, ಹಿಂಸೆಯನ್ನು ಅನುಭವಿಸಿ ಸಿಖ್ಖರು ಈಗ ತಮ್ಮ ನೆಲೆ ಕಂಡುಕೊಂಡಿದ್ದಾರೆ. ಸ್ಥಳೀಯರ ಆಕ್ರೋಶಕ್ಕೂ ಈಡಾಗಿದ್ದಾರೆ. ೯/೧೧ರ ಘಟನೆಯ ನಂತರ ಅಮೆರಿಕದಲ್ಲಿ ನೆಲೆಸಿರುವ ಮುಸ್ಲಿಮರ ಜೀವನ ದುಸ್ತರವಾಗಿದೆ. ಅವರನ್ನು ಸಂದೇಹದಿಂದಲೇ ಕಾಣಲಾಗುತ್ತಿದೆ. ಅನೇಕರು ಅಮೆರಿಕದ ಕಾರಾಗೃಹಗಳಲ್ಲಿ ಕೊಳೆಯುತ್ತಿದ್ದಾರೆ. ಅಮೆರಿಕದ ವಿಮಾನನಿಲ್ದಾಣಗಳಲ್ಲಿ ಮುಸಲ್ಮಾನರ ಪ್ರವೇಶ ಎಲ್ಲ ದಾಖಲೆಗಳೂ ಸರಿಯಿದ್ದರೂ ಒಂದು ಬಗೆಯ ಹಿಂಸೆ. ಮುಸುಕಿನಲ್ಲೇ ಜನಾಂಗ ದ್ವೇಷ ಅಮೆರಿಕದಲ್ಲಿ ಬಲಿಯುತ್ತಿರುವುದನ್ನು ಇಂಥ ಘಟನೆಗಳನ್ನು ಅವಲೋಕಿಸಿದಾಗ ಗುರ್ತಿಸಬಹುದು.

ಅಮೆರಿಕದಲ್ಲಿ ನೆಲೆಸಿರುವ ಎಲ್ಲ ವಿದೇಶೀ ನಾಗರಿಕರಿಗೆ, ಜನಾಂಗಗಳಿಗೆ ರಕ್ಷಣೆ ಒದಗಿಸುವುದು ಅಮೆರಿಕ ಸರಕಾರದ ಹೊಣೆ. ಅದಕ್ಕಾಗಿ ಒಬಾಮಾ ಸರಕಾರ ಸೂಕ್ತಕ್ರಮ ಕೈಗೊಳ್ಳಬೇಕಾಗಿದೆ. ಹಿಂದೂ, ಸಿಖ್, ಮುಸಲ್ಮಾನರ ಪ್ರಾರ್ಥನಾ ಸ್ಥಳಗಳಿಗೆ ರಕ್ಷಣೆ ಒದಗಿಸಬೇಕು. ಭಾರತ ಸರಕಾರ ಈ ವಿಷಯದಲ್ಲಿ ನಿರ್ದಾಕ್ಷಿಣ್ಯವಾಗಿ ಅಮೆರಿಕ ಸರಕಾರದ ಮೇಲೆ ಒತ್ತಡ ತರಬೇಕಾಗಿದೆ. ಭಾರತೀಯ ನಾಗರಿಕರ ಸುರಕ್ಷತೆಗೆ ಅಗತ್ಯವಾದ ಕ್ರಮ ಕೈಗೊಳ್ಳಬೇಕೆಂದೂ ಒತ್ತಾಯಿಸಬೇಕಾಗಿದೆ. ಅಂದಹಾಗೆ ಕಳೆದ ವರ್ಷವಷ್ಟೆ ಉಸ್ಕಾನ್ಸಿನ್‌ನಲ್ಲಿ ಬಂದೂಕು ಕೊಳ್ಳುವುದಕ್ಕೆ ಇದ್ದ ನಿರ್ಬಂಧಗಳನ್ನು ತೆಗೆದುಹಾಕಿ ನಿಯಮಗಳನ್ನು ಸಡಿಲಗೊಳಿಸಲಾಯಿತು. ಅಮೆರಿಕದಲ್ಲಿ ಬಂದೂಕು ಸಂಸ್ಕೃತಿಯನ್ನು ನಿಷೇಧಿಸುವ ಬಗ್ಗೆ ಸಾಕಷ್ಟು ಚರ್ಚೆ ನಡೆದಿದೆ, ನಡೆಯುತ್ತಿದೆ. ಪ್ರತಿಸಲ ಅಮಾಯಕರ ಮೇಲೆ ಗುಂಡಿನ ಮಳೆಗರೆದಾಗಲೂ ಬಂದೂಕು ನಿಷೇಧದ ಬಗ್ಗೆ ಚರ್ಚೆ ಭುಗಿಲೇಳುತ್ತದೆ. ಆದರೆ ಬಂದೂಕಿನ ಪರವಾಗಿರುವವರೇ ಮೇಲುಗೈ ಪಡೆದಿದ್ದಾರೆ. ಅಮೆರಿಕ ಸರಕಾರವೂ ಕೂಡ ಇದನ್ನು ಗಂಭೀರವಾಗಿ ಪರಿಗಣಿಸಿಲ್ಲ. ಇದರಿಂದಾಗಿ 'ಬಂದೂಕು ಸಂಸ್ಕೃತಿ'ಗೆ ಇತಿಶ್ರೀ ಇಲ್ಲ.

**ಸೀಯಾರ್ಕೆ**
'ಚೌಬೀನ', ನಂ. ೮೪೫, ೬ನೇ ಕ್ರಾಸ್ ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್ ಕತ್ರಿಗುಪ್ಪೆ
ಬೆಂಗಳೂರು-೫೬೦ ೦೮೫

## ಕಪ್ಪುಹಣ ಪ್ರಪಂಚದಲ್ಲೆಷ್ಟಿದೆ ?

ಪ್ರಪಂಚದಲ್ಲಿ ಕೂಡಿಟ್ಟಿರುವ ಕಪ್ಪುಹಣದ ಮೊತ್ತ ೨೦ ಟ್ರಿಲಿಯನ್ ಡಾಲರುಗಳು ಎಂಬುದು ಇತ್ತೀಚಿನ ಅಂದಾಜು. ತೆರಿಗೆ ತಪ್ಪಿಸಿ ಅತಿ ಶ್ರೀಮಂತರು ತಮ್ಮ ದೇಶದ ಹೊರಗೆ ಬೇರೆ ಬೇರೆ ಬ್ಯಾಂಕುಗಳಲ್ಲಿ ಇಟ್ಟಿರುವ ಹಣ ಇದು. ಟ್ಯಾಕ್ಸ್ ಜಸ್ಟಿಸ್ ನೆಟ್‌ವರ್ಕ್ ಎಂಬ ಸಂಸ್ಥೆ ವಿವರಗಳನ್ನು ಪ್ರಕಟಿಸಿದೆ. ಈ ಹಣ ಹತ್ತು ದೊಡ್ಡ ಖಾಸಗಿ ಬ್ಯಾಂಕುಗಳಲ್ಲಿ (ಮುಖ್ಯವಾಗಿ ಸ್ವಿಟ್ಜರ್‌ಲೆಂಡಿನಲ್ಲಿ) ಇದೆ. ಐದು ವರ್ಷಗಳ ಹಿಂದೆ ೨ ಟ್ರಿಲಿಯನ್ ಡಾಲರುಗಳಿದ್ದ ಕಪ್ಪುಹಣ ಈಗ ೨೦ ಟ್ರಿಲಿಯನ್ ಆಗಿದೆ. ಜಾಗತೀಕರಣದ ಪ್ರಭಾವವೆ ಇದು ? ಈ ವರದಿಯ ಪ್ರಕಾರ ಕಪ್ಪುಹಣದಲ್ಲಿ ೧೦ ಟ್ರಿಲಿಯನ್ ಡಾಲರುಗಳು ೯೨,೦೦೦ ಶ್ರೀಮಂತರಿಗೆ ಅಥವಾ ಪ್ರಪಂಚದ ಜನಸಂಖ್ಯೆಯಲ್ಲಿ ಶೇ. ೦.೦೧ ಜನರಿಗೆ ಸೇರಿದೆ. ೨೦ ಟ್ರಿಲಿಯನ್ ಅಮೆರಿಕ ಮತ್ತು ಜಪಾನ್ ದೇಶಗಳ ಒಟ್ಟು ಜಿಡಿಪಿಗೆ ಸಮ ಎಂದು ಹೇಳಲಾಗಿದೆ. ಈ ಕಪ್ಪುಹಣದಲ್ಲಿ ಭಾರತದ ಪಾಲೆಷ್ಟು? ೩ ಟ್ರಿಲಿಯನ್ ಎಂದು ಅಂದಾಜು.

ಒಂದು ಟ್ರಿಲಿಯನ್ ಎಂದರೆ ಎಷ್ಟು?

ಅಮೆರಿಕದ ಟ್ರಿಲಿಯನ್ : ಹತ್ತು ಲಕ್ಷದ ಹತ್ತು ಲಕ್ಷ ಅಥವಾ ಒಂದು ಲಕ್ಷ ಕೋಟಿ (೧,೦೦೦,೦೦೦,೦೦೦,೦೦೦ ಯಾ $೧೦^{೧೨}$).

ಬ್ರಿಟನ್ನಿನ ಟ್ರಿಲಿಯನ್ : ಹತ್ತುಲಕ್ಷದ, ಹತ್ತು ಲಕ್ಷದ, ಹತ್ತು ಲಕ್ಷ (೧,೦೦೦,೦೦೦,೦೦೦,೦೦೦,೦೦೦,೦೦೦ ಯಾ $೧೦^{೧೮}$).

## ಡಾ|| ಪ್ರಕಾಶ್ ಸಿ. ರಾವ್

**ಆರೋಗ್ಯವೆಂದರೆ ದೈಹಿಕ – ಮಾನಸಿಕ – ಸಾಮಾಜಿಕ ಸುಸ್ಥಿತಿ, ರೋಗಗಳಿರುವುದಲ್ಲ. ವಿಶ್ವ ಆರೋಗ್ಯ ಸಂಸ್ಥೆಯ ಈ ವ್ಯಾಖ್ಯಾನದ ಹಿನ್ನೆಲೆಯಲ್ಲಿ ಜನರ ಆರೋಗ್ಯ ಕಾಪಾಡಲು ಕುಟುಂಬ ವೈದ್ಯ ಪ್ರಮುಖ ಪಾತ್ರ ವಹಿಸುತ್ತಾನೆ. ರೋಗ ತಡೆಗಟ್ಟಿ ಚಿಕಿತ್ಸೆ ನೀಡಿ ವ್ಯಕ್ತಿಯ ಆರೋಗ್ಯ ಸುಧಾರಿಸುವಲ್ಲಿ ಕುಟುಂಬ ವೈದ್ಯ ಇತರೇ ವೈದ್ಯರಿಗಿಂತ ಹೆಚ್ಚು ಪ್ರಸ್ತುತವಾಗುತ್ತಾನೆ. ಸಮಾಜದಲ್ಲಿ ಕುಟುಂಬ ವೈದ್ಯರ ಸಂಖ್ಯೆ ಇತರೆ ವೈದ್ಯರಿಗಿಂತ ಅತಿ ಹೆಚ್ಚು.**

# ಕುಟುಂಬ ವೈದ್ಯ



**ಭಾ**ರತದಲ್ಲಿ ವೈದ್ಯ ವೃತ್ತಿಯಲ್ಲಿ ಹಲವಾರು ತರಹದ ವೈದ್ಯರಿದ್ದಾರೆ – ಅರ್ಹ ವೈದ್ಯರು ಹಾಗೂ ಅನರ್ಹ ವೈದ್ಯರು. ಅನರ್ಹ ವೈದ್ಯರು ಯಾವುದೇ ವಿಶೇಷ ತರಬೇತಿ ಪಡೆಯದೆ, ಕೆಲವು ಸಮಯ ಒಬ್ಬ ವೈದ್ಯನಲ್ಲಿ ಅವನ ಸಹಾಯಕನಾಗಿ ಕೆಲಸ ಮಾಡಿ, ವೈದ್ಯ ವೃತ್ತಿ ಪ್ರಾರಂಭ ಮಾಡಿರುತ್ತಾರೆ. ತರಬೇತಿ ಹೊಂದಿದ ವೈದ್ಯರಲ್ಲಿ (ಅರ್ಹ) ಕುಟುಂಬ ವೈದ್ಯರು, ಆಸ್ಪತ್ರೆ ವೈದ್ಯರೆಂದು ವಿಂಗಡಿಸಬಹುದು. ಕುಟುಂಬ ವೈದ್ಯರು, ಸಾಮಾನ್ಯವಾಗಿ ಖಾಸಗೀ ವೈದ್ಯರಾಗಿರುತ್ತಾರೆ, ಅವರು ಮೂಲ ವೈದ್ಯ ತರಬೇತಿ (ಎಂ.ಬಿ.ಬಿ.ಎಸ್.) ಹೊಂದಿರುತ್ತಾರೆ. ಕೆಲವರು ಕುಟುಂಬ ವೈದ್ಯರಾಗಿದ್ದು, ಆಸ್ಪತ್ರೆಗಳ ಹೊರರೋಗಿ ವಿಭಾಗದಲ್ಲಿ ಕೆಲಸ ಮಾಡುತ್ತಿರುತ್ತಾರೆ. ಇನ್ನು ಕೆಲವರು ಕುಟುಂಬ ವೈದ್ಯರಾಗಿದ್ದು, ಸ್ನಾತಕೋತ್ತರ ಪದವಿಯನ್ನು ಪಡೆದುಕೊಂಡಿರುತ್ತಾರೆ. ಭಾರತದಲ್ಲಿ ಇವರ ಸಂಖ್ಯೆ ಕಡಿಮೆ. ವಿಶೇಷ ವೈದ್ಯರು ಬೇರೆ ಬೇರೆ ವೈದ್ಯ ಜ್ಞಾನದ ಶಾಖೆಯಲ್ಲಿ (ಮಕ್ಕಳ, ಮಹಿಳೆಯ, ವೃದ್ಧರ) ಪರಿಣಿತಿ ಗಳಿಸಿರುತ್ತಾರೆ. ಅವರನ್ನು ಸ್ಪೆಷಲಿಸ್ಟ್ ಎನ್ನುತ್ತಾರೆ. ಇನ್ನು ಕೆಲವರು ಸೂಪರ್ ಸ್ಪೆಷಲಿಸ್ಟ್ ಆಗಿದ್ದು ಸ್ನಾತಕೋತ್ತರ ಪದವಿಗಳಿಸಿದ ಮೇಲೆ ವಿಶೇಷ ತರಬೇತಿ ಪಡೆದಿರುತ್ತಾರೆ. ಉದಾಹರಣೆ : ನರರೋಗ, ಹೃದಯರೋಗ.

ಕುಟುಂಬ ವೈದ್ಯ, ಸ್ಪೆಷಲಿಸ್ಟ್, ಸೂಪರ್ ಸ್ಪೆಷಲಿಸ್ಟ್ ಎಲ್ಲರೂ ತಮ್ಮ ತಮ್ಮ ವಿಷಯದಲ್ಲಿ ತಜ್ಞ ವೈದ್ಯರು. ಇವರಲ್ಲಿ ಮೇಲು ಕೀಳು ಎಂಬುದಿಲ್ಲದಿದ್ದರೂ ಕುಟುಂಬ ವೈದ್ಯನಿಗಿಂತ ಸ್ಪೆಷಲಿಸ್ಟ್ ಹೆಚ್ಚು, ಸ್ಪೆಷಲಿಸ್ಟ್‌ಗಿಂತ ಸೂಪರ್ ಸ್ಪೆಷಲಿಸ್ಟ್ ಹೆಚ್ಚು ಎಂಬ ಕಲ್ಪನೆ ಜನಸಾಮಾನ್ಯರಲ್ಲಿ ಬಂದಿದೆ. ಸ್ಪೆಷಲಿಸ್ಟ್ ಹಾಗೂ ಸೂಪರ್ ಸ್ಪೆಷಲಿಸ್ಟರು ಆಸ್ಪತ್ರೆಯಲ್ಲಿ ಕೆಲಸ ಮಾಡುತ್ತಿರುತ್ತಾರೆ. ಆದರೆ ಈಗಿನ ದಿನಗಳಲ್ಲಿ ಇವರು ಕುಟುಂಬ ವೈದ್ಯನ ತರಹ ತಮ್ಮದೇ ಕ್ಲಿನಿಕ್ ತೆಗೆದು ವೃತ್ತಿಯನ್ನು ಮುಂದುವರಿಸುತ್ತಾರೆ.

ಕುಟುಂಬ ವೈದ್ಯರು ಸಮಾಜಕ್ಕೆ ಅತ್ಯಗತ್ಯ. ಕುಟುಂಬ ವೈದ್ಯನ ಪರಿಕಲ್ಪನೆ ಪುರಾತನವಾದರೂ ಆ ಪರಿಕಲ್ಪನೆ ಮಸುಕಾಗಿಬಿಟ್ಟಿತ್ತು. ಆದರೆ ಈಗ ಮತ್ತೆ ಆ ಪರಿಕಲ್ಪನೆ ಪ್ರಾಮುಖ್ಯತೆ ಪಡೆಯುತ್ತಿದೆ.

**ಯಾರು ಈ ಕುಟುಂಬ ವೈದ್ಯ ?** ಮೊದಲ ಸಂಪರ್ಕದ ವೈದ್ಯ, ಕುಟುಂಬದ ಯಾವುದೇ ವ್ಯಕ್ತಿ ಮೊದಲು ಸಂಪರ್ಕಿಸುವ ವೈದ್ಯ, ಯಾವುದೇ ಆರೋಗ್ಯ ಸಮಸ್ಯೆ ಇದ್ದರೂ ಮೊದಲು ಸಂಪರ್ಕಿಸುವ ವೈದ್ಯ, ನಿಮ್ಮನ್ನು ಆತ್ಮೀಯತೆಯಿಂದ ಗುರುತಿಸುವ, ನಿಮ್ಮ ಆರೋಗ್ಯ ಸಮಸ್ಯೆಯನ್ನು ಸರಿಪಡಿಸಲು ತೊಡಗುವ ವೈದ್ಯ, ನಿಮ್ಮ ಪರೀಕ್ಷೆ ಮಾಡುವಾಗ ಕುಟುಂಬದ ಇತರ ವ್ಯಕ್ತಿಗಳ ಆರೋಗ್ಯವನ್ನು ವಿಚಾರಿಸುವ ವೈದ್ಯ, ನಿಮ್ಮ ತಂದೆ ತಾಯಿ, ತಾತ ಮುಂತಾದವರಿಗೂ ಚಿಕಿತ್ಸೆ ನೀಡಿದ ವೈದ್ಯ, ನಿಮ್ಮ ಕುಟುಂಬದ ವ್ಯಕ್ತಿಯಂತೆ ವರ್ತಿಸುವ ವೈದ್ಯ. ನಿಮ್ಮ ಕುಟುಂಬದ ಹಲವಾರು ವಿಷಯಗಳನ್ನು ಅರಿತವನು, ಅನೇಕ ವೇಳೆ ಅಗತ್ಯಬಿದ್ದಾಗ ಮನೆಯ ಹಿರಿಯರಿಗೂ ಇತರೆ ಅನೇಕ ವಿಷಯಗಳಿಗೆ ಸಲಹೆ ನೀಡುವ ವೈದ್ಯ. ಈ ವೈದ್ಯರಲ್ಲಿ ಕೆಲವರು ಆಧುನಿಕ ವೈದ್ಯಪದ್ಧತಿಯನ್ನು ಅನುಸರಿಸಿದರೆ ಇನ್ನುಳಿದವರು ಆಯುರ್ವೇದ, ಹೋಮಿಯೋಪತಿ, ಸಿದ್ಧ, ಯುನಾನಿ ಪದ್ಧತಿಯನ್ನು ಅನುಸರಿಸುತ್ತಾರೆ.

ಆದರ್ಶ ಕುಟುಂಬ ವೈದ್ಯ ಜಗತ್ತಿನಾದ್ಯಂತ ವೈದ್ಯಕೀಯ ವ್ಯವಸ್ಥೆಯ ಕೇಂದ್ರಬಿಂದುವಾಗಿದ್ದಾನೆ. ಎಲ್ಲ ವೈದ್ಯಕೀಯ ಸಮಸ್ಯೆಗಳಿಗೂ, ಎಲ್ಲ ವಯಸ್ಸಿನವರಿಗೂ ಮೊದಲ ಸಂಪರ್ಕದ ವೈದ್ಯ. ಮೊದಲನೇ ಹಂತದ ವೈದ್ಯನಾದ್ದರಿಂದ ರೋಗಿ ತನ್ನ ಸಮಸ್ಯೆಗಳಿಗೆ, ಚಿಕಿತ್ಸೆ ಪಡೆಯಲು ಬರುತ್ತಾನೆ. ಅನಕ್ಷರತೆ, ಆಧುನಿಕ ವಿಜ್ಞಾನದ ಮಾಹಿತಿ ಇಲ್ಲದಿರುವುದರಿಂದ, ರೋಗಿಗೆ ವೈದ್ಯನೇ ಆರೋಗ್ಯ ವಿಷಯಗಳನ್ನು ಸ್ಪಷ್ಟವಾಗಿ ತಿಳಿಸಬೇಕಾಗುತ್ತದೆ. ಈಗಿನ ದಿನಗಳಲ್ಲಿ ವ್ಯಾಪಾರೀಕರಣದಿಂದಾಗಿ ಚಿಕಿತ್ಸೆ ದುಬಾರಿ. ವಿಜ್ಞಾನದ ಬಳಕೆ ಹೆಚ್ಚಾಗಿರುವುದರಿಂದ ವೈವಿಧ್ಯಮಯ ಚಿಕಿತ್ಸೆಯಿಂದಾಗಿ ಗೊಂದಲವಿದೆ. ಹಲವಾರು ಚಿಕಿತ್ಸಾ ಕೇಂದ್ರಗಳು ಲಭ್ಯವಿರುವುದರಿಂದ ಜನಸಾಮಾನ್ಯರಿಗೆ ಯಾವುದು ಸೂಕ್ತ ಎಂಬ ಮಾಹಿತಿ ನೀಡಲು ಕುಟುಂಬ ವೈದ್ಯನು ಸೂಕ್ತ ವ್ಯಕ್ತಿ. ಈಗಿನ ದಿನಗಳಲ್ಲಿ ದೈಹಿಕ ರೋಗವಲ್ಲದೆ ಮಾನಸಿಕ ಆತಂಕ ಎಲ್ಲರನ್ನೂ ಕಾಡುತ್ತಿರುತ್ತದೆ. ಚಿಕಿತ್ಸೆಯಲ್ಲದೆ ವ್ಯಕ್ತಿಗೆ ವೈದ್ಯ ಪರೋಕ್ಷವಾಗಿ ನೀಡುವ ಆತ್ಮಸಮಾಲೋಚನ ಹೆಚ್ಚು ಪ್ರಯೋಜಕವಾಗುತ್ತದೆ.

ಕುಟುಂಬ ವೈದ್ಯ ಮೊದಲ ಹಂತದಲ್ಲಿ ರೋಗಿಯೊಂದಿಗೆ ಆತ್ಮೀಯತೆಯ ಕ್ಷಣಗಳನ್ನು ಕಳೆದ ನಂತರ ಆತನಿಗಿರುವ ಆರೋಗ್ಯ ಸಮಸ್ಯೆಗಳ ಬಗ್ಗೆ ವಿಚಾರಿಸುತ್ತಾನೆ. ಆ ಕುರಿತ ವಿವರಗಳನ್ನು ತೆಗೆದುಕೊಳ್ಳುತ್ತಾನೆ. ರೋಗಿಯ ದೈಹಿಕ, ಮಾನಸಿಕ, ಸಾಮಾಜಿಕ, ಲೈಂಗಿಕ ವಿಷಯಗಳನ್ನು ತಿಳಿದುಕೊಳ್ಳುತ್ತಾನೆ. ರೋಗಿಯ ವೈದ್ಯಕೀಯ ಸಮಸ್ಯೆ ಏನು, ರೋಗಿಯ ಆರ್ಥಿಕ, ಕೌಟುಂಬಿಕ ಹಿನ್ನೆಲೆ ಏನು, ವೈಯಕ್ತಿಕ ಸಾಮರ್ಥ್ಯವೇನು ಎಂಬುದನ್ನು ತಿಳಿದುಕೊಳ್ಳುತ್ತಾನೆ. ನಂತರ ವ್ಯಕ್ತಿಯನ್ನು ಪರೀಕ್ಷೆ ಮಾಡಿ, ರೋಗವಿದೆಯೇ ಎಂಬುದನ್ನು ಖಚಿತಪಡಿಸಿಕೊಳ್ಳುತ್ತಾನೆ. ಅಗತ್ಯ ಬಿದ್ದರೆ ಕೆಲವು ನಿರ್ದಿಷ್ಟ ಪರೀಕ್ಷೆಗಳನ್ನು ಮಾಡುತ್ತಾನೆ. ರಕ್ತ, ಮೂತ್ರ, ಮಲ, ಕ್ಷಕಿರಣ ಪರೀಕ್ಷೆ ಇತ್ಯಾದಿ. ನಂತರ ಚಿಕಿತ್ಸೆ ನೀಡಲು ಮುಂದಾಗುತ್ತಾನೆ.

ನಂತರ ರೋಗ ಯಾವುದು, ಅದನ್ನು ಸರಿಪಡಿಸಲು ಕೊಡುವ ಔಷಧಿ ಎಷ್ಟು ದಿನಗಳವರೆಗೆ ಬಳಸಬೇಕು, ಔಷಧಿಯಿಂದ ಗುಣಹೊಂದದಿದ್ದರೆ ಏನು ಮಾಡಬೇಕು ಮುಂತಾದವುಗಳನ್ನು ರೋಗಿ ಮತ್ತು ಅವರ ಸಂಬಂಧಿಕರಿಗೆ ತಿಳಿಸುತ್ತಾನೆ. ಚಿಕಿತ್ಸೆಯೊಂದಿಗೆ ರೋಗ ತಡೆಗಟ್ಟಲು ಏನು ಮಾಡಬೇಕು, ಮುಂದೆ ಯಾವ ಸಮಸ್ಯೆ

ಬರಬಹುದು. ಅವೆಲ್ಲವನ್ನು ರೋಗಿಯೊಂದಿಗೆ ಚರ್ಚಿಸುತ್ತಾನೆ. ರೋಗದ ಬಗ್ಗೆ ಸಕಾರಾತ್ಮಕ ಅಭಿಪ್ರಾಯ ವ್ಯಕ್ತಪಡಿಸುತ್ತಾ, ಅಪಾಯಕರ ಸನ್ನಿವೇಶಗಳು, ರೋಗಿ ಜೀವನಶೈಲಿಯಲ್ಲಿ ಮಾಡಿಕೊಳ್ಳಬೇಕಾದ ಬದಲಾವಣೆ ಮುಂತಾದವುಗಳ ಬಗ್ಗೆ ಮಾಹಿತಿ ನೀಡುತ್ತಾನೆ.

ಕುಟುಂಬ ವೈದ್ಯನ ಹಂತದಲ್ಲಿ ಕೇವಲ ರೋಗದ ಇತಿಹಾಸ ತಿಳಿದು, ರೋಗ ಪರೀಕ್ಷೆಯಿಂದಲೇ ಶೇಕಡ ೯೫ರಷ್ಟು ರೋಗಿಗಳನ್ನು ಗುಣಪಡಿಸಬಹುದು. ಸುಮಾರು ಜನರಿಗೆ ವೈದ್ಯನು ತನ್ನ ಜ್ಞಾನ ಹಾಗೂ ಅನುಭವದ ಆಧಾರದ ಮೇಲೆ ರೋಗ ಮುಂತಾದ ವಿಷಯದ ಬಗ್ಗೆ ವಿವರಣೆ ಕೊಡಬೇಕಾಗುತ್ತದೆ. ಒಮ್ಮೊಮ್ಮೆ ಅನಿವಾರ್ಯವಾಗಿ ವಿಶೇಷ ಪರೀಕ್ಷೆ ಅಗತ್ಯವಾಗಬಹುದು. ಉದಾಹರಣೆಗೆ, ರಕ್ತ ಪರೀಕ್ಷೆ/ಇಸಿಜಿ/ಕ್ಷಕಿರಣ, ಕೈಗೊಂಡು ವಿಶೇಷ ಅಭಿಪ್ರಾಯ ಪಡೆಯಬೇಕಾಗುತ್ತದೆ. ಅವನು ವಿಶೇಷ ಪರೀಕ್ಷೆ ಮಾಡಲಿಲ್ಲವೆಂದು ರೋಗಿಯು ಅಸಮಾಧಾನ ಪಡಬೇಕಾಗಿಲ್ಲ. ವೈದ್ಯನಿಗೆ ರೋಗಿಯ ಸಮಸ್ಯೆ ತಿಳಿಯದಿದ್ದರೆ ಚಿಕಿತ್ಸೆಯನ್ನು ಮುಂದುವರಿಸದೆ, ರೋಗಿಯನ್ನು ವಿಶೇಷ ತಜ್ಞನಲ್ಲಿಗೆ ಕಳುಹಿಸಿ ಅವರ ಅಭಿಪ್ರಾಯ ಪಡೆಯುತ್ತಾನೆ. ನಂತರ ರೋಗಿಗೆ ಚಿಕಿತ್ಸೆ ನೀಡುತ್ತಾನೆ.

**ಕುಟುಂಬ ವೈದ್ಯನು ಗರ್ಭದಿಂದ ಗೋರಿಯವರೆಗೂ, ವ್ಯಕ್ತಿ ಹುಟ್ಟಿದಾಗಿನಿಂದ ಸಾಯುವವರೆಗೂ ಚಿಕಿತ್ಸೆ ನೀಡುತ್ತಾನೆ.**

ಭಾರತದಲ್ಲಿ ಬಡತನ/ಅನಕ್ಷರತೆ/ಪ್ರಾಥಮಿಕ ಆರೋಗ್ಯ ಪಾಲನೆಯ ವ್ಯವಸ್ಥೆ ಬಗ್ಗೆ ಹೆಚ್ಚು ಜನರಿಗೆ ತಿಳುವಳಿಕೆ ಇಲ್ಲದಿರುವುದರಿಂದ ಕುಟುಂಬ ವೈದ್ಯರು ರೋಗಿಯನ್ನು ಮತ್ತು ಅವನ ಸಮಸ್ಯೆಯನ್ನು ಗಮನದಲ್ಲಿಟ್ಟುಕೊಂಡು ಚಿಕಿತ್ಸೆ ನೀಡಬೇಕಾಗುತ್ತದೆ. ಭಾರತದಲ್ಲಿ ಸಾರ್ವಜನಿಕ ಆರೋಗ್ಯ ವ್ಯವಸ್ಥೆ ಜನರ ಆರೋಗ್ಯ ಸಮಸ್ಯೆಗಳನ್ನು ಕಡೆಗಣಿಸಿರುವುದರಿಂದ ಈ ವಿಷಯದ ಬಗ್ಗೆ ಕುಟುಂಬ ವೈದ್ಯ ಹೆಚ್ಚಿನ ಜಾಗರೂಕತೆ ವಹಿಸಬೇಕು.

ಕುಟುಂಬ ವೈದ್ಯ ನೈರ್ಮಲ್ಯ, ಸ್ವಚ್ಛ ಕುಡಿಯುವ ನೀರು, ಪೌಷ್ಟಿಕ ಆಹಾರ, ಮಾನಸಿಕ ನೆಮ್ಮದಿ ಬಗ್ಗೆ ಮಾಹಿತಿ ನೀಡಿ ಪ್ರಾಥಮಿಕ ವೈದ್ಯಕೀಯ ಚಿಕಿತ್ಸೆಯನ್ನು ಪ್ರಾರಂಭಿಸಬೇಕಾಗುತ್ತದೆ. ಅನಗತ್ಯವಾಗಿ ಪರೀಕ್ಷೆ ಮಾಡುವುದಾಗಲೀ, ಅನಗತ್ಯವಾಗಿ ಔಷಧಿ ಚಿಕಿತ್ಸೆಗಳನ್ನು ನೀಡುವುದರ ಬಗ್ಗೆ ಜಾಗರೂಕತೆ ವಹಿಸಬೇಕು. ಇಂದು ಔಷಧಿ ಕ್ಷೇತ್ರ ಅನಗತ್ಯ ಔಷಧಿಗಳನ್ನು ಹೊರತಂದಿದೆ. ಸರಕಾರ, ಔಷಧಿ ನಿಯಂತ್ರಣದ ಬಗ್ಗೆ ಗಮನ ಹರಿಸಿಲ್ಲ. ಇಂತಹ ಪರಿಸ್ಥಿತಿಯಲ್ಲಿ ವೈದ್ಯನೇ ಕೇವಲ ಅಗತ್ಯ ಔಷಧಿಗಳನ್ನು ಬರೆದು ಕೊಟ್ಟು ಸಮಂಜಸವಾದ ಚಿಕಿತ್ಸೆ ನೀಡಬೇಕು. ಅನೇಕ ಬಾರಿ ರೋಗ ಬಂದಾಗ ಯಾವ ಪರೀಕ್ಷೆಯ ಅಗತ್ಯವಾಗಲಾರದು ಹಾಗೂ ಪ್ರಯೋಜನವಾಗಲಾರದು, ಅತಿ ಕನಿಷ್ಠ ಔಷಧೋಪಚಾರ ಬೇಕಾಗಬಹುದು ಅಷ್ಟೆ. ಆತ್ಮಸಮಾಲೋಚನೆ ಮಾತ್ರ ಬೇಕಾಗಬಹುದು. ಇಂಥ ಚಿಕಿತ್ಸೆಗಳನ್ನು ಕುಟುಂಬ ವೈದ್ಯ ನೀಡಲು ಮುಂದಾಗಬೇಕು. ಕುಟುಂಬ ವೈದ್ಯ ರೋಗಿಗೆ ಆತ್ಮವಿಶ್ವಾಸ ತುಂಬಲು ನೆರವಾಗಬೇಕಾಗುತ್ತದೆ.

ಕುಟುಂಬ ವೈದ್ಯ ಸಮಗ್ರ ಪ್ರಾಥಮಿಕ ಆರೋಗ್ಯ ಚಿಕಿತ್ಸೆ (ರೋಗ ತಡೆಗಟ್ಟುವ, ಚಿಕಿತ್ಸೆ ನೀಡುವ, ಆರೋಗ್ಯ ಸುಧಾರಿಸುವ) ನೀಡಲು ಮುಂದಾಗಬೇಕು. ಕುಟುಂಬ ವೈದ್ಯನಿಗೆ 'ರೋಗಕ್ಕಿಂತ ರೋಗಿ ಮುಖ್ಯ' ಎಂಬ ತತ್ವ ಪ್ರಾಮುಖ್ಯತೆ ತಿಳಿದಿರಬೇಕು. ಕುಟುಂಬ ವೈದ್ಯ ಕುಟುಂಬಗಳ ಆರೋಗ್ಯ ಪಾಲನೆಗೆ ಬದ್ಧ. ಕುಟುಂಬದ ಎಲ್ಲ ವ್ಯಕ್ತಿಗಳು ಅವನಿಗೆ ಪರಿಚಿತರು. ಅವರ ದೈಹಿಕ, ಮಾನಸಿಕ, ಲೈಂಗಿಕ, ಸಾಮಾಜಿಕ, ಆರ್ಥಿಕ, ವೈಯಕ್ತಿಕ ವಿಷಯಗಳು ವೈದ್ಯನಿಗೆ ಪರಿಚಯವಿರುತ್ತದೆ.

ಚಿಕಿತ್ಸೆ ನೀಡುತ್ತಾ ವ್ಯಕ್ತಿಯ ದೇಹ ಹಾಗೂ ಮನಸ್ಸು ಯಾವ ರೀತಿ ಪ್ರತಿಕ್ರಿಯಿಸುತ್ತವೆ ಎಂಬುದು ಅರ್ಥವಾಗಿ ಅವನು ರೋಗಿಗೆ ಮುಂದೆ ಯಾವ ಆರೋಗ್ಯ ಸಮಸ್ಯೆ (ನಿರೀಕ್ಷಾ ಪಾಲನೆ) ಬರಲು ಸಾಧ್ಯ ಎಂದು ಊಹಿಸಲು ಸಾಧ್ಯವಾಗುತ್ತದೆ. ಈ ಊಹೆಯಿಂದ ಮುಂದೆ ಬರಬಹುದಾದ ಅನೇಕ ಸಮಸ್ಯೆಗಳನ್ನು ತಡೆಗಟ್ಟಬಹುದು. ಉದಾಹರಣೆಗೆ : ಹೃದಯಾಘಾತ.

ವೈದ್ಯ ವಿಜ್ಞಾನ ವೇಗವಾಗಿ ಬೆಳೆಯುತ್ತಿದೆ. ವಿಜ್ಞಾನದ ಬೆಳವಣಿಗೆಯಾದಂತೆ ಜನರಿಗೆ ದೊರಕುವ ಮಾಹಿತಿಯೂ ಬೆಳೆಯಬೇಕಾಗುತ್ತದೆ. ಇಲ್ಲದಿದ್ದರೆ ತಪ್ಪು ನಂಬಿಕೆಗಳು ಹುಟ್ಟಿಕೊಳ್ಳುತ್ತವೆ. ಕುಟುಂಬ ವೈದ್ಯ ಇಂತಹ ತಪ್ಪು ಹಾಗೂ ಮೂಢನಂಬಿಕೆಗಳನ್ನು ಎದುರಿಸಬೇಕಾಗುತ್ತದೆ ಹಾಗೂ ಕೂಡಲೇ ಸರಿಪಡಿಸಬೇಕಾಗುತ್ತದೆ. ಈ ಮೂಢನಂಬಿಕೆಗಳು ರೋಗ, ಔಷಧಿ, ವೈದ್ಯ, ಉಪಕರಣಗಳ ಸುತ್ತಲೂ ಹೆಣೆದುಕೊಳ್ಳುತ್ತವೆ ಹಾಗೂ ಚಿಕಿತ್ಸೆ ಪರಿಣಾಮಕಾರಿಯಾಗದಿರಲು ಒಮ್ಮೊಮ್ಮೆ ಕಾರಣವಾಗುತ್ತವೆ.

ಈಗಿನ ದಿನಗಳಲ್ಲಿ ಆಸ್ಪತ್ರೆಗಳು ಹೆಚ್ಚುತ್ತಿವೆ. ಇಲ್ಲಿ ದ್ವಿತೀಯ, ತೃತೀಯ ಹಂತದ ಚಿಕಿತ್ಸೆ ದೊರೆಯುತ್ತದೆ. ಈ ಚಿಕಿತ್ಸೆಗಳಲ್ಲಿ ಅನೇಕ ಪರೀಕ್ಷೆಗಳು, ಅನೇಕ ವೈದ್ಯರ ಅಭಿಪ್ರಾಯಗಳು ರೋಗವನ್ನು ಗುಣಪಡಿಸಲು ಅಗತ್ಯವಾಗುತ್ತವೆ. ಒಬ್ಬ ವ್ಯಕ್ತಿ ತನ್ನ ಸಮಸ್ಯೆಗೆ ಕುಟುಂಬ ವೈದ್ಯನ ಚಿಕಿತ್ಸೆಯಿಂದ ಪರಿಹಾರ ಕಾಣದಿದ್ದರೆ ವಿಶೇಷ ಚಿಕಿತ್ಸೆ ಪಡೆಯಬೇಕಾಗುತ್ತದೆ. ಕುಟುಂಬ ವೈದ್ಯನೇ ಈ ಚಿಕಿತ್ಸೆ ತೆಗೆದುಕೊಳ್ಳಲು ಮಾರ್ಗದರ್ಶನ ನೀಡಬೇಕಾಗುತ್ತದೆ. ಈ ಕಾರಣದಿಂದ ಪ್ರಾಥಮಿಕ ಆರೋಗ್ಯ ಪಾಲನೆ ಮೊದಲ ಹಂತದ ಚಿಕಿತ್ಸೆಯಾದರೆ, ದ್ವಿತೀಯ ಹಾಗೂ ತೃತೀಯ ಆರೋಗ್ಯ ಪಾಲನೆ ನಂತರದ ಅನಿವಾರ್ಯ ಚಿಕಿತ್ಸೆಗಳಾಗುತ್ತವೆ.

ಕುಟುಂಬ ವೈದ್ಯ ಗರ್ಭದಿಂದ ಗೋರಿಯವರೆಗೂ ಚಿಕಿತ್ಸೆ ನೀಡುತ್ತಾನೆ

## ಮಗ ಕ್ಲಿಕ್ಕಿಸಿದ ಚಿತ್ರ

ಈರುಳ್ಳಿ ಬೆಳ್ಳುಳ್ಳಿ ಸೊಪ್ಪು
ತರಕಾರಿಗಳ ಹೆಚ್ಚುತ್ತಾ
ಮಸಾಲೆ ಒಗ್ಗರಣೆ ಮಧ್ಯೆ
ಬೆಂಕಿಯೊಡನೆ ಉರಿಯುತ್ತಾ
ಬೆವರ ಹನಿ ಹನಿಸಿ
ಅವ್ವ ಇದ್ದಾಳೆ ಒಳಗೆ
ಪಾತ್ರೆಗಳ ಜತೆ ತಾನೂ
ಕುದಿಯುತ್ತಾ
ರುಚಿಗಟ್ಟಿದ ಪದಾರ್ಥವಾಗಿಸಲು

ಕುಳಿತಿದ್ದಾನೆ ಹೊರಗೆ ಹಜಾರದಲ್ಲಿ
ಒಂದಷ್ಟು ಹಾಳೆಗಳ ಹರಡಿ
ಕಿಟ್ಟೆಲ್ ಕೋಶವ ತಿರುವಿ
ಏನೋ ಗೀಚಿ, ತಿದ್ದಿ, ಹರಿದು
ಉಂಡೆ ಮಾಡಿ ತಿಪ್ಪೆಗೆಸೆದು
ಶಬ್ದಗಳ ಹಿಡಿದು ರುಬ್ಬುತ್ತಾನೆ
ಅವ್ವ ಅಕ್ಕಿ ರುಬ್ಬುವ ಹಾಗೆ
ಅರ್ಥ ಅಪಾರ್ಥವಾಗದ ಹಾಗೆ
ಪರಿಮಳದ ಪದ್ಯವಾಗಿಸಲು

ಜಗಲಿಯಲ್ಲಿ ಕೂತ ಮಗ
ಸೀಮೆ ಸುಣ್ಣ ಬಳಸಿ
ಉದ್ದಕ್ಕೆ ಗೆರೆ ಎಳೆದು
ಚಿತ್ರ ಬರೆದಿದ್ದಾನೆ

ಅಲ್ಲೊಂದು ಅಡಿಗೆ ಮನೆ
ಒಳಗಿದ್ದಾಳೆ ಅವ್ವ
ಹೊರಗೊಂದು ಹಜಾರ
ಅವನಿದ್ದಾನೆ ಪುಸ್ತಕ ರಾಶಿಯ ನಡುವೆ

ಅಗಣಿ ತೆಗೆದರೆ ಜಗಲಿ
ಹಾರಿದರೆ ಅಂಗಳ
ತಂಗಿ ಬಿಡಿಸಿಟ್ಟ ರಂಗೋಲಿ
ಅಲ್ಲೊಂದು ಬಾವಿಕಟ್ಟೆ, ಬೇಲಿ
ಆಚೆ ಕುಂಟೋಬಿಲ್ಲೆಯಾಡುವ
ಪಕ್ಕದ್ಮನೆ ಹುಡುಗಿ

ಮಗ ಕ್ಲಿಕ್ಕಿಸಿದ ಚಿತ್ರ
ಹರಿದಿದೆ ಹೀಗೆ
ಅನಂತವಾಗಿ

**ಚೇತನ್ ಮುಂಡಾಜೆ**
ಕಳ್ಳಿಗೆ ಅಂಚೆ, ಬಂಟ್ವಾಳ ತಾಲೂಕು, ದಕ್ಷಿಣ ಕನ್ನಡ ಜಿಲ್ಲೆ - ೫೭೪ ೨೯೭

ಎಂಬ ಮಾತಿದೆ. ಅಂದರೆ ಮಹಿಳೆ ಗರ್ಭವತಿಯಾದಾಗಿನಿಂದಲೂ ವ್ಯಕ್ತಿ ಮರಣ ಹೊಂದುವ ವರೆಗೂ ಎಲ್ಲ ವೈದ್ಯಕೀಯ ಸಮಸ್ಯೆಗಳ ಜವಾಬ್ದಾರಿಯನ್ನು ಕುಟುಂಬ ವೈದ್ಯನೇ ಹೊತ್ತಿರುತ್ತಾನೆ. ಈ ಹಂತದಲ್ಲಿ ತನ್ನ ರೋಗಿಯನ್ನು ಗುಣಪಡಿಸಲಾಗದಿದ್ದರೆ ವಿಶೇಷ ತಜ್ಞನ ಅಭಿಪ್ರಾಯವನ್ನು ಪಡೆಯುತ್ತಾನೆ. ಅನೇಕ ಬಾರಿ ಬೇರೆ ಬೇರೆ ಪರೀಕ್ಷೆಗಳನ್ನು ಮಾಡಿಸಿ ಅವುಗಳ ಆಧಾರದ ಮೇಲೆ ಚಿಕಿತ್ಸೆ ಮಾಡುತ್ತಾನೆ. ರೋಗಿಯ ಆರೋಗ್ಯದ ಬಗೆಗಿನ ಜವಾಬ್ದಾರಿ ಕುಟುಂಬ ವೈದ್ಯನದು. ನೆಗಡಿ ಒಂದು ಅತಿ ಸಾಮಾನ್ಯ ರೋಗ. ಹೆಚ್ಚಿನ ಜನರು ನೆಗಡಿ ಚಿಕಿತ್ಸೆಗೆ ಈ ವೈದ್ಯನಲ್ಲಿಗೆ ಬರುತ್ತಾರೆ. ಅವನು ಈ ಸಾಮಾನ್ಯ ರೋಗ ಚಿಕಿತ್ಸೆಯಲ್ಲಿ ವಿಶೇಷ ತಜ್ಞನೆಂದೇ ಹೇಳಬಹುದು. ಇದಲ್ಲದೆ ಎಲ್ಲ ಆರೋಗ್ಯ ಸಮಸ್ಯೆಗಳ ಜವಾಬ್ದಾರಿ ಹೊತ್ತು ಕ್ಯಾನ್ಸರ್‌ನಂತಹ ರೋಗ ಚಿಕಿತ್ಸೆಯಲ್ಲೂ ವಿಶೇಷ ತಜ್ಞರ ಆದೇಶದಂತೆ ತನ್ನನ್ನು ತಾನು ತೊಡಗಿಸಿಕೊಳ್ಳುತ್ತಾನೆ. ಅಂದರೆ ಈ ವೈದ್ಯ ಒಂದೇ ರೋಗದ ಬಗ್ಗೆ (ಸಕ್ಕರೆ ಕಾಯಿಲೆ) ಅಥವಾ ಒಂದೇ ಗುಂಪಿನ ರೋಗದ ಬಗ್ಗೆ (ಮಕ್ಕಳ ರೋಗಗಳು) ಮಾತ್ರ ಗಮನಹರಿಸುವ ವೈದ್ಯನಲ್ಲ. ಕೆಲವು ಕುಟುಂಬ ವೈದ್ಯರು ಕೆಲವು ವಿಶೇಷ ವೈದ್ಯಕೀಯ ತರಬೇತಿ ಪಡೆದು ಕುಟುಂಬ ವೈದ್ಯಕೀಯದೊಂದಿಗೆ ಆ ವೈದ್ಯಕೀಯ ವಿಭಾಗದಲ್ಲಿ ರೋಗಿಗಳನ್ನು ನೋಡಲು ಮುಂದಾಗುತ್ತಾರೆ. ಕುಟುಂಬ ವೈದ್ಯ + ಸ್ತ್ರೀರೋಗ, ಕುಟುಂಬ ವೈದ್ಯ + ಮಕ್ಕಳ ರೋಗ, ಕುಟುಂಬ ವೈದ್ಯ + ಮಾನಸಿಕ ರೋಗ : ಇದು ಒಳ್ಳೆಯ ಪದ್ಧತಿ ಕೂಡ.




ಕುಟುಂಬ ವೈದ್ಯ ಲೈಂಗಿಕ ವಿಷಯಗಳ ಬಗ್ಗೆ ಮಾಹಿತಿ ನೀಡಿ ಚಿಕಿತ್ಸೆ ನೀಡಲು ಮುಂದಾಗುತ್ತಾನೆ. ಲೈಂಗಿಕ ಕಾಯಿಲೆಗಳ ಬಗೆಗಿನ ಅರಿವು ಈ ವೈದ್ಯನಿಗೆ ಇರಬೇಕು.

ಆದರೆ ನಮ್ಮ ದೇಶದಲ್ಲಿ ಕುಟುಂಬ ವೈದ್ಯನ ಪರಿಕಲ್ಪನೆ ಜನರಲ್ಲಿ ಮಸುಕಾಗಿದೆ. ಸರಕಾರ ಇತ್ತೀಚೆಗೆ ಕುಟುಂಬದ ವೈದ್ಯಕೀಯದಲ್ಲಿ ತರಬೇತಿ ಹಾಗೂ ಸ್ನಾತಕೋತ್ತರ ಪದವಿಗಳನ್ನು ನೀಡುತ್ತಿದೆ. ಈ ತರಬೇತಿ ನೀಡಲು ಎಲ್ಲ ವೈದ್ಯಕೀಯ ವಿಭಾಗದ ವಿಶೇಷ ತಜ್ಞರು ಇರುತ್ತಾರೆ, ಕುಟುಂಬ ವೈದ್ಯರನ್ನು ಬಿಟ್ಟು!

ಕುಟುಂಬ ವೈದ್ಯ ಪ್ರಾಥಮಿಕ ಆರೋಗ್ಯ ಪಾಲನೆಯಲ್ಲಿ ತೊಡಗಿರುವುದಿಂದ ಸಮಾಜದ ಆರೋಗ್ಯ ವೆಚ್ಚ ಕಡಿಮೆಯಾಗುತ್ತದೆ ಎಂದು ಅಂದಾಜು ಮಾಡಲಾಗಿದೆ. ಭಾರತದ ಆರೋಗ್ಯ ನೀತಿ (೨೦೦೨) ಕೂಡ ಕುಟುಂಬ ವೈದ್ಯನನ್ನು ಗುರುತಿಸಿದೆ. ಆದರೆ ವ್ಯವಸ್ಥೆಯಲ್ಲಿ ಜಾರಿಗೆ ತಂದಿಲ್ಲ, ನಮ್ಮ ನೆರೆಹೊರೆಯ ರಾಷ್ಟ್ರಗಳಾದ ನೇಪಾಳ, ಶ್ರೀಲಂಕಾ ಹಾಗೂ ಪಾಕಿಸ್ತಾನದಲ್ಲಿ ಕುಟುಂಬ ವೈದ್ಯನ ಸೇವೆಯನ್ನು ಸರಕಾರ ಪರಿಣಾಮಕಾರಿಯಾಗಿ ಉಪಯೋಗಿಸಿಕೊಳ್ಳುತ್ತಿದೆ.

ಕುಟುಂಬ ವೈದ್ಯ ಒಂದು ನಿರ್ದಿಷ್ಟ ಪ್ರದೇಶದಲ್ಲಿ ವೃತ್ತಿಯಲ್ಲಿರುತ್ತಾನೆ. ಅವನಲ್ಲಿಗೆ ಸುತ್ತಮುತ್ತಲಿನ ಸ್ಥಳೀಯ ಜನ ಚಿಕಿತ್ಸೆಗೆ ಬರುತ್ತಾರೆ. ಆದರೆ ಒಬ್ಬ ಸ್ಪೆಷಲಿಸ್ಟ್ ಹಾಗೂ ಸೂಪರ್ ಸ್ಪೆಷಲಿಸ್ಟ್ ವೈದ್ಯನಲ್ಲಿಗೆ ದೂರ ದೂರದಿಂದ ಜನರು ಚಿಕಿತ್ಸೆಗೆ ಬರುತ್ತಾರೆ. ಕುಟುಂಬ ವೈದ್ಯ ತಾನಿರುವ ಸ್ಥಳದಲ್ಲಿ ಎಲ್ಲರಿಗೂ ಪರಿಚಿತನಾಗಿರುತ್ತಾನೆ. ಆದ್ದರಿಂದ ಜನರು ಅವನೊಂದಿಗೆ ಆತ್ಮೀಯತೆಯಿಂದ ವರ್ತಿಸುತ್ತಾರೆ. ಅನೇಕ ಬಾರಿ ರೋಗಿಗೆ ಕುಟುಂಬ ವೈದ್ಯನ ಚಿಕಿತ್ಸಾಲಯಕ್ಕೆ ಬರಲು ಆಗದಿದ್ದರೆ, ವೈದ್ಯನೇ ರೋಗಿಯ ಮನೆಗೆ ಹೋಗಿ ಚಿಕಿತ್ಸೆ ನೀಡುತ್ತಾನೆ. ಈ ಪ್ರವೃತ್ತಿ ಖಾಸಗೀ ಕುಟುಂಬ ವೈದ್ಯನಲ್ಲಿ ಕಂಡುಬರುತ್ತದೆ. ಆದರೆ ಆಸ್ಪತ್ರೆ ಕುಟುಂಬ ವೈದ್ಯನಲ್ಲಿ ಕಂಡುಬರುವುದಿಲ್ಲ.

**ಕುಟುಂಬ ವೈದ್ಯನ ಪರಿಕಲ್ಪನೆ/ವಿಶೇಷತೆ**

೧. ಚಿಕಿತ್ಸೆ ದುಬಾರಿಯಾಗುವುದಿಲ್ಲ, ಕಾರಣ ಕುಟುಂಬ ವೈದ್ಯ ಮೊದಲ ಸಂಪರ್ಕದ ವೈದ್ಯನಾದ್ದರಿಂದ ವಿಶೇಷ ಪರೀಕ್ಷೆಗಳನ್ನು ಮಾಡಿಸುವ ಪರಿಸ್ಥಿತಿ ಇರುವುದಿಲ್ಲ, ಎಲ್ಲ ಪರೀಕ್ಷೆಗಳನ್ನು ಮಾಡಿಸುವ ಅನಿವಾರ್ಯತೆ ಇರುವುದಿಲ್ಲ, ಆದ್ದರಿಂದ ಚಿಕಿತ್ಸೆ ದುಬಾರಿಯಲ್ಲ.

೨. ಚಿಕಿತ್ಸೆಗೆ ದೀರ್ಘಕಾಲ ಕಾಯಬೇಕಾಗಿಲ್ಲ.

೩. ಚಿಕಿತ್ಸೆಯೊಂದಿಗೆ ಮಾಹಿತಿಯೂ ದೊರಕುತ್ತದೆ. ವಿಶೇಷ ಚಿಕಿತ್ಸೆ ದೊರಕುತ್ತದೆ. ಅಗತ್ಯವಿದ್ದರೆ ಕೊನೆಯ ಹಂತದ ಚಿಕಿತ್ಸೆಯೂ ದೊರಕುತ್ತದೆ.

೪. ಚಿಕಿತ್ಸೆ ವೈಜ್ಞಾನಿಕವಾಗಿರುತ್ತದೆ. ಕಡಿಮೆ ಔಷಧಿ ಉಪಯೋಗಿಸಬಹುದಾಗಿದೆ. ಹಾಗೂ ರೋಗಿಗೆ ಸ್ವೀಕೃತವಾಗುತ್ತದೆ.

ನಮ್ಮ ಸಮಾಜದಲ್ಲಿ ಆಸ್ಪತ್ರೆಗಳು ಹೆಚ್ಚುತ್ತಿವೆ. ವೈದ್ಯರ ಸಂಖ್ಯೆ ಹೆಚ್ಚುತ್ತಿದೆ. ಸೌಲಭ್ಯಗಳೂ ಹೆಚ್ಚುತ್ತಿವೆ. ಔಷಧಿಗಳೂ ಹೆಚ್ಚುತ್ತಿವೆ. ಆದರೂ ಕುಟುಂಬ ವೈದ್ಯನ ಅಗತ್ಯತೆಯೂ ಹೆಚ್ಚುತ್ತಿದೆ!

**ಕುಟುಂಬ ವೈದ್ಯನ ಚಿಕಿತ್ಸೆ**

ಮೊದಲ ಹಂತದ ಚಿಕಿತ್ಸೆಯ ಹಂತದಲ್ಲಿ ರೋಗದ ಮೂಲಗಳು, ಚಿಹ್ನೆಗಳು ಸಂಪೂರ್ಣವಾಗಿ ಕಂಡು ಬರುವುದಿಲ್ಲ ಹಾಗೂ ಪ್ರಕಟವಾಗುವುದಿಲ್ಲ. ಈ ಹಂತದಲ್ಲಿ ಕುಟುಂಬ ವೈದ್ಯ ತನ್ನ ಅನುಭವ, ರೋಗಿಯ ಕುಟುಂಬದ ಹಿನ್ನೆಲೆ, ವೈಜ್ಞಾನಿಕ ಪರೀಕ್ಷೆ ಹಾಗೂ ಚಿಕಿತ್ಸಾ ಪದ್ಧತಿಗಳ ಆಧಾರದ ಮೇಲೆ ಚಿಕಿತ್ಸೆ ನೀಡಬೇಕಾಗುತ್ತದೆ. ಅನೇಕ ವೇಳೆ ದೈಹಿಕ ರೋಗದೊಂದಿಗೆ ಮಾನಸಿಕ ಒತ್ತಡಗಳೂ ಈ ಹಂತದಲ್ಲಿ ರೋಗಿಯಲ್ಲಿ ಕಂಡುಬರುತ್ತವೆ. ಕುಟುಂಬ ವೈದ್ಯ ಈ ಹಂತದಲ್ಲಿ ಅನೇಕ ಅನಿಶ್ಚಿತತೆಗಳನ್ನು ಎದುರಿಸಬೇಕಾಗುತ್ತದೆ. ಉದಾಹರಣೆಗೆ: ರೋಗಿ ವೈದ್ಯರಲ್ಲಿಗೆ ಸಮಯಕ್ಕೆ ಸರಿಯಾಗಿ ಬರದೇ ಇರುವುದು, ಚಿಕಿತ್ಸೆಯನ್ನು ಸಂಪೂರ್ಣವಾಗಿ ಉಪಯೋಗಿಸದೆ ಇರುವುದು. ವೈದ್ಯನಿಗೆ ರೋಗದ ಹಲವಾರು ಆಯಾಮಗಳು (ವೈದ್ಯವೃತ್ತಿಯನ್ನು ಪ್ರಾರಂಭಿಸಿದಾಗ) ತಿಳಿಯದೇ ಇದ್ದಾಗ ಚಿಕಿತ್ಸೆ ಪರಿಣಾಮಕಾರಿಯಾಗದಿರಬಹುದು. ರೋಗಿಗೆ ಚಿಕಿತ್ಸೆ ಪರಿಣಾಮಕಾರಿಯಾಗದಿದ್ದರೆ ಅನೇಕ ಬಾರಿ ಚಿಕಿತ್ಸೆ ನಿಲ್ಲಿಸಿ ಬೇರೆಡೆಗೆ ಹೋಗುತ್ತಾನೆ.

ಕುಟುಂಬ ವೈದ್ಯನಿಗೆ ಸಾಮಾನ್ಯವಾಗಿ ಮುಂದುವರಿದ ಕಲಿಕೆಯ ಸೌಲಭ್ಯಗಳು ಇಲ್ಲದಿರುವುದಿಂದ ಅನೇಕ ಬಾರಿ ಚಿಕಿತ್ಸೆಯನ್ನು ಕೇವಲ ಅಭ್ಯಾಸ ಬಲದಿಂದ ಮುಂದುವರಿಸಿಕೊಂಡು ಹೋಗುತ್ತಾನೆ. ಇದರಿಂದ ಅನಗತ್ಯ ಪರೀಕ್ಷೆ, ಅನಗತ್ಯ ಚಿಕಿತ್ಸೆಗಳೂ ಸಾಮಾನ್ಯವಾಗಿ ಬಿಡುತ್ತವೆ.

ಭಾರತದಲ್ಲಿ ವೈದ್ಯವೃತ್ತಿ ಪೂರ್ತಿಗೊಳಿಸಿದ ಮೇಲೆ, ವಿಶೇಷ ತಜ್ಞನಾಗುವ ಹಂಬಲ ವೈದ್ಯರದ್ದು. ಅದು ಆಸಕ್ತಿಯ ವಿಷಯವಾದರೂ, ಕಾರಣ ಬೇರೆ ಬೇರೆ. ವಿಶೇಷ ತಜ್ಞನ ಆದಾಯ ಸಾಮಾನ್ಯ ವೈದ್ಯನಿಗಿಂತ ಹೆಚ್ಚು. ಆದರೆ ವಿಶೇಷ ತಜ್ಞನಾಗುವುದು ಕಷ್ಟದ ವಿಷಯ. ಹೆಚ್ಚು ಅಂಕಗಳಿಸಿ ಉತ್ತೀರ್ಣನಾದವನಿಗೆ ಸರಕಾರಿ ಸಂಸ್ಥೆಗಳಲ್ಲಿ ಸೀಟ್ ಸಿಗುತ್ತದೆ. ಕಡಿಮೆ ಅಂಕ ಗಳಿಸಿದವನಿಗೆ ಅಪಾರ ಹಣವಿದ್ದರೆ ಮಾತ್ರ ಸ್ನಾತಕೋತ್ತರ ಸೀಟು ದೊರಕಲು ಸಾಧ್ಯ. ಆದ್ದರಿಂದ ಬಹಳಷ್ಟು ಜನರಿಗೆ ಬೇರೆ ದಾರಿ ಇಲ್ಲದೆ ಕುಟುಂಬ ವೈದ್ಯರಾಗುತ್ತಾರೆ.

ಅಂತರರಾಷ್ಟ್ರೀಯ ಮಟ್ಟದಲ್ಲಿ ೧೯೬೯ರಲ್ಲಿ ಫ್ಯಾಮಿಲಿ ಮೆಡಿಸಿನ್‌ಅನ್ನು ಒಂದು ಸ್ಪೆಶಾಲಿಟಿಯೆಂದು ಪರಿಗಣಿಸಲಾಯಿತು. ಬ್ರಿಟನ್, ಅಮೆರಿಕಾಗಳಲ್ಲಿ ಕುಟುಂಬ ವೈದ್ಯಕೀಯ ವೃತ್ತಿಯಲ್ಲಿರಬೇಕಾದರೆ ಸ್ನಾತಕೋತ್ತರ ಪರೀಕ್ಷೆಯಲ್ಲಿ ಉತ್ತೀರ್ಣನಾಗಬೇಕು, ಭಾರತದಲ್ಲಿ ಇದು ಕಡ್ಡಾಯವೇನಲ್ಲ. ಭಾರತದಲ್ಲಿ ೨೦೦೨ರಲ್ಲಿ, ಭಾರತ ಆರೋಗ್ಯ ನೀತಿ ಕುಟುಂಬ ವೈದ್ಯನ ಅಗತ್ಯತೆಯನ್ನು ಮನಗಂಡು ಮೂರು ವರ್ಷದ ಎಂ.ಡಿ. ಸ್ನಾತಕೋತ್ತರ ಪದವಿಯನ್ನು ಪ್ರಾರಂಭಿಸಿತು. ಇಂದು ಎಂ.ಸಿ.ಐ. ಆದೇಶದ ಮೇಲೆ ಭಾರತದಲ್ಲಿ ಡಿ.ಎನ್.ಬಿ. ಕುಟುಂಬ ವೈದ್ಯಕೀಯದಲ್ಲಿ ಪಡೆಯಬಹುದು. ತಡವಾಗಿಯಾದರೂ ಪ್ರಾರಂಭವಾಗಿದೆಯಲ್ಲ ಎಂಬುದು ಸಂತೋಷದ ವಿಷಯ.

**ಕುಟುಂಬ ವೈದ್ಯ ವೃತ್ತಿಯ ಸಮಸ್ಯೆಗಳು**

ಮುಂದುವರಿದ ರಾಷ್ಟ್ರಗಳಲ್ಲಿ ಕುಟುಂಬ ವೈದ್ಯಕೀಯದ ಭಾಗ ಮಾನ್ಯತೆ ಪಡೆದಿದೆ. ವೈದ್ಯಕೀಯ ಪದವಿಯ ನಂತರ ವಿಶೇಷ ತರಬೇತಿ ಪಡೆಯಲು ವಿದ್ಯಾರ್ಥಿಗಳು ಕುಟುಂಬ ವೈದ್ಯಕೀಯವನ್ನು ಆರಿಸಿಕೊಳ್ಳುತ್ತಾರೆ. ಆದರೆ ಭಾರತದಲ್ಲಿ ಕುಟುಂಬ ವೈದ್ಯಕೀಯ ಅಷ್ಟೇನೂ ವಿಶೇಷತೆ ಪಡೆದಿಲ್ಲ, ಆದರೂ ವೈದ್ಯ ವೃತ್ತಿ ಮುಗಿದ ನಂತರ ಅನಿವಾರ್ಯವಾಗಿ ಬಹಳ ಜನರು ಕುಟುಂಬ ವೈದ್ಯಕೀಯ ವೃತ್ತಿಯನ್ನು ಮುಂದುವರಿಸುತ್ತಾರೆ. ತಮ್ಮ ತಮ್ಮ ಗ್ರಾಮ, ಪಟ್ಟಣಗಳಲ್ಲಿ ಕುಟುಂಬ ವೈದ್ಯಕೀಯ ವೃತ್ತಿಯನ್ನು ಪ್ರಾರಂಭಿಸುತ್ತಾರೆ.

೧) ಮೊದಲನೆಯ ಸಮಸ್ಯೆ, ಕುಟುಂಬ ವೈದ್ಯರಿಗೆ ಮುಂದುವರಿದ ಕಲಿಕೆಯ ಸೌಲಭ್ಯ ಇಲ್ಲದಿರುವುದು. ಇದು ಸರಕಾರದ ಜವಾಬ್ದಾರಿ. ಆದರೆ ಇದರ ಬಗ್ಗೆ ಸರಕಾರ ಮೌನ ವಹಿಸಿದೆ. ಕುಟುಂಬ ವೈದ್ಯಕೀಯದ ಬಗ್ಗೆ ತರಬೇತಿ ಇಲ್ಲದಿದ್ದರೂ, ವೈದ್ಯರು

ಪ್ರಯೋಗ/ತಪ್ಪು ವಿಧಾನವನ್ನು ಅನುಸರಿಸುತ್ತಾರೆ. ಕೆಲವರು ತಮ್ಮ ವೃತ್ತಿಯಲ್ಲಿ ಹೆಚ್ಚು ಜನರನ್ನು ಆಕರ್ಷಿಸಿ ಕೂಡಲೇ ಮುಂದೆ ಬರುತ್ತಾರೆ. ಇದು ಗ್ರಾಮೀಣ ಪ್ರದೇಶ/ತಾಲ್ಲೂಕು ಪ್ರದೇಶಗಳಲ್ಲಿರುವ ಪರಿಸ್ಥಿತಿ. ಕೆಲವರು ಅಷ್ಟೇನೂ ರೋಗಿಗಳಿಲ್ಲದೆ ವೃತ್ತಿಯನ್ನು ಮುಂದುವರಿಸಿ ಕೊಂಡು ಹೋಗುತ್ತಾರೆ.

೨) ಕುಟುಂಬ ವೈದ್ಯರು ಕೇವಲ ರೋಗ ತೊಂದರೆಗೆ (ಲಕ್ಷಣಗಳಿಗೆ) ಪ್ರಾಮುಖ್ಯತೆ ನೀಡುತ್ತ ರೋಗದ ಆಳಕ್ಕೆ ಹೋಗದೆ, ಮಾತ್ರೆ ಇಂಜೆಕ್ಷನ್ ಕೊಟ್ಟು ರೋಗಿಯನ್ನು ಗುಣಪಡಿಸಲು ಮುಂದಾಗುತ್ತಾರೆ. ರೋಗವೇನು, ಕಾರಣವೇನು, ಹೇಗೆ ಹರಡಬಹುದು, ರೋಗಿಗೆ ರೋಗದ ಬಗ್ಗೆ ಮಾಹಿತಿ ನೀಡುವುದು, ಅಗತ್ಯಬಿದ್ದರೆ ರೋಗಿಯೊಂದಿಗೆ ಸಮಾಲೋಚನೆ ನಡೆಸುವುದು ಮುಂತಾದವುಗಳ ಬಗ್ಗೆ ಹೆಚ್ಚಿನ ಆಸಕ್ತಿ ತೋರುವುದಿಲ್ಲ.

೩) ಚಿಕಿತ್ಸೆಯಲ್ಲಿ ಮಾತ್ರೆ, ಇಂಜೆಕ್ಷನ್ ಮುಂತಾದವುಗಳನ್ನು ಬಳಸುತ್ತಾರೆ. ಕೆಲವೊಮ್ಮೆ ಅವೈಜ್ಞಾನಿಕವಾಗಿರುತ್ತದೆ.

೪) ಅನೇಕ ಬಾರಿ ರೋಗ ಪತ್ತೆಯಾಗದಿದ್ದರೂ ಮೇಲ್ನೋಟಕ್ಕೆ ಕಂಡುಬರುವ ತೊಂದರೆಯ ಆಧಾರದ ಮೇಲೆ ಚಿಕಿತ್ಸೆ ನೀಡಿ, ಮುಂದುವರಿಯುತ್ತಾರೆ. ಸಾಮಾನ್ಯವಾಗಿ ಒಬ್ಬನೇ ಕುಟುಂಬ ವೈದ್ಯ ತನ್ನ ರೋಗಿಯ ಚಿಕಿತ್ಸೆಯಲ್ಲಿ ಮಗ್ನನಾಗಿರುವುದರಿಂದ, ಚಿಕಿತ್ಸೆ ಪರಿಣಾಮಕಾರಿಯಾಗದಿದ್ದಾಗ ರೋಗ ಪತ್ತೆಹಚ್ಚಲು ಇತರ ವೈದ್ಯರ ಅಭಿಪ್ರಾಯ ಪಡೆಯುವ ಗೋಜಿಗೆ ಹೋಗುವುದೇ ಇಲ್ಲ. ಅನೇಕ ಬಾರಿ ರೋಗಿ ಪ್ರಶ್ನೆ ಮಾಡಿದರೂ, ''ನಿನಗೇನು ಗೊತ್ತಾಗುತ್ತದೆ'' ಎಂದು ರೋಗಿಯ ಬಾಯಿ ಮುಚ್ಚಿಸಿಬಿಡುತ್ತಾನೆ. ರೋಗ ಗುಣಹೊಂದದಿದ್ದರೆ, ರೋಗಿಯ ಕಾಯಿಲೆ ತೀವ್ರವಾದರೆ ಕೂಡಲೇ ನರ್ಸಿಂಗ್ ಹೋಮ್‌ಗಳಿಗೆ ರೋಗಿಯನ್ನು ಚಿಕಿತ್ಸೆಗೆ ಕಳುಹಿಸುತ್ತಾರೆ. ರೋಗದ ವೈಜ್ಞಾನಿಕ ವಿಶ್ಲೇಷಣೆಯಾಗುವುದೇ ಇಲ್ಲ.

೫) ಕುಟುಂಬ ವೈದ್ಯನಿಗೆ ರೋಗ, ಚಿಕಿತ್ಸೆ ಮುಂತಾದವುಗಳ ಬಗ್ಗೆ ಮಾಹಿತಿ ದೊರಕುವುದಿಲ್ಲ. ಕಾರಣ ಮುಂದುವರಿದ ಕಲಿಕೆಯ ವ್ಯವಸ್ಥೆ ಇರುವುದಿಲ್ಲ. ಕೆಲವೊಮ್ಮೆ ವೈದ್ಯ ೪೦ ವರುಷ ವೈದ್ಯ ವೃತ್ತಿಯಲ್ಲಿ ಮುಂದುವರಿದಿದ್ದರೂ ಯಾವ ಮಾಹಿತಿಯನ್ನೂ ಪಡೆಯಲು ಮುಂದಾಗುವುದಿಲ್ಲ. ಆದರೆ ಪ್ರತಿನಿತ್ಯ ಔಷಧಿ ಕಂಪನಿಗಳ ಪ್ರತಿನಿಧಿಗಳು ಬಂದು ಅನೇಕ ರೋಗ/ಔಷಧಿ ಬಗ್ಗೆ ಪ್ರಸ್ತಾವನೆ ಇಟ್ಟು ತಮ್ಮ ಕಂಪನಿಯ ಔಷಧಿಗಳನ್ನು ಬರೆದು ಕೊಡಲು ಒತ್ತಡ ತರುತ್ತಾರೆ. ಈ ಪ್ರತಿನಿಧಿಗಳು ಅನಗತ್ಯ ಔಷಧಿಗಳ ಬಗ್ಗೆ ಹೆಚ್ಚು ಒತ್ತಾಯ ತರುತ್ತಾರೆ. ಅಗತ್ಯ ಔಷಧಿಗಳ ಬಗ್ಗೆಯೂ ಹೆಚ್ಚು ತಿಳಿಸುವುದಿಲ್ಲ. ಆದರೆ ಒತ್ತಡ ತರುತ್ತಾರೆ. ವೈದ್ಯ ವಿಜ್ಞಾನದಲ್ಲಿನ ಆವಿಷ್ಕಾರಗಳು ಅಪಾರವಾದರೂ ವೈದ್ಯರಿಗೆ ಈ ಮಾಹಿತಿ ದೊರಕದಿರುವುದರಿಂದ, ಸೂಕ್ತವಾದ ಮಾಹಿತಿಯಿಂದ ವಂಚಿತರಾಗುತ್ತಾರೆ. ಇದರಿಂದಾಗಿ ತಪ್ಪು ಔಷಧಿ, ಕಡಿಮೆ ಪ್ರಮಾಣದ ಔಷಧಿ, ಹೆಚ್ಚು ಪ್ರಮಾಣದ ಔಷಧಿ, ದುಬಾರಿ ಔಷಧಿ, ಅಗತ್ಯತೆ ಇಲ್ಲದಿದ್ದರೂ ಔಷಧಿಗಳನ್ನು ಬರೆಯುವ ಅಭ್ಯಾಸವನ್ನು ರೂಢಿಸಿಕೊಳ್ಳುತ್ತಾರೆ. ಅನೇಕ ಬಾರಿ ಮಾನಸಿಕ ರೋಗಗಳ ಬಗ್ಗೆ ಮಾಹಿತಿ ಇರದೆ ಇರುವುದರಿಂದ ರೋಗಿಗೆ ವಿಟಮಿನ್, ಮಿನರಲ್ಸ್ ಮಾತ್ರೆಗಳನ್ನೇ ನೀಡಿ ತಪ್ಪು ಚಿಕಿತ್ಸೆಯಲ್ಲಿ ತೊಡಗುತ್ತಾರೆ. ಭಾರತದಲ್ಲಿ ಅನಗತ್ಯ, ಅಪಾಯಕರ ಔಷಧಿಗಳು ಮಾರುಕಟ್ಟೆಯಲ್ಲಿ ಈಗಲೂ ದೊರಕುತ್ತವೆ. ಇದರಿಂದ ವೈದ್ಯ ಪ್ರಭಾವಿತನಾಗಿ ಅನಗತ್ಯ ಔಷಧಿಗಳನ್ನು ಬರೆದುಕೊಡಲು ಮುಂದಾಗುತ್ತಾನೆ. ಅನಗತ್ಯ ಔಷಧಿಗಳನ್ನು ಮಾರಲು ಔಷಧಿ ನಿಯಂತ್ರಣ ಪರವಾನಗಿ ನೀಡುತ್ತದೆ ! ಅದರ ಬಗ್ಗೆ ಸರಕಾರ ತಲೆ ಕೆಡಿಸಿಕೊಂಡಿಲ್ಲ.

೬) ಕುಟುಂಬ ವೈದ್ಯಕೀಯ ಎಲ್ಲರಿಗೂ ಮುಕ್ತವಾಗಿದೆ. ಅಂದರೆ ಯಾರೂ ಬೇಕಾದರೂ ಆ ವೃತ್ತಿಯನ್ನು ಮಾಡಬಹುದು. ಗ್ರಾಮೀಣ ಪ್ರದೇಶಗಳಲ್ಲಿ ಕಾಂಪೌಂಡರ್‌ಗಳು ಹಾಗೂ ಇತರೇ ವೃತ್ತಿಯವರು ಔಷಧಿ ನೀಡುವುದು ವ್ಯಾಪಕವಾಗಿ ಕಂಡುಬರುತ್ತದೆ. ಪಟ್ಟಣಗಳಲ್ಲಿ ಔಷಧಿ ಪ್ರತಿನಿಧಿಗಳು, ವೈದ್ಯಕೀಯ ಕಾಲೇಜುಗಳಲ್ಲಿ ಪಾಠ ಮಾಡುವವರು ಚಿಕಿತ್ಸೆಯನ್ನು ನೀಡದ ವೈದ್ಯರು ವೃತ್ತಿಯನ್ನು ಮುಂದುವರಿಸುತ್ತಾರೆ. ವೈದ್ಯನಲ್ಲಿಗೆ ಹೋಗುವಾಗ ಜನರು ವೈದ್ಯನ ಅರ್ಹತೆಯ ಬಗ್ಗೆ ಗಮನಹರಿಸುವುದಿಲ್ಲ. ಅನೇಕ ಬಾರಿ ವೈದ್ಯನ ಮಾತು, ಚಿಕಿತ್ಸೆಗಳು ಸರಳವೆನಿಸಿ ರೋಗಿ ಆಕರ್ಷಿತಗೊಂಡು ವೈದ್ಯ ಆತ್ಮೀಯನಾಗಿದ್ದಾನೆಂಬ ಕಾರಣಕ್ಕೆ ಅನೇಕರು ಅರ್ಹತೆ ಇಲ್ಲದಿದ್ದರೂ ಅಂಥವರಿಂದ ಚಿಕಿತ್ಸೆ ಪಡೆಯಲು ಮುಂದಾಗುತ್ತಾರೆ.

೭) ಕುಟುಂಬ ವೈದ್ಯನಿಗೆ ಅನೇಕ ರೀತಿಯ ಪೈಪೋಟಿ ಇರುತ್ತದೆ. ಇತರೆ ಕುಟುಂಬ ವೈದ್ಯರು, ಖೊಟ್ಟಿ ವೈದ್ಯರು, ಇತರೆ ಪದ್ಧತಿಯ ವೈದ್ಯರು (ಆಯುರ್ವೇದ, ಹೋಮಿಯೋಪತಿ), ಸ್ಪೆಷಲಿಸ್ಟ್ ವೈದ್ಯರು, ಆಸ್ಪತ್ರೆಗಳು, ನರ್ಸಿಂಗ್ ಹೋಂಗಳು, ಈ ವೈದ್ಯನಿಗೆ ಪೈಪೋಟಿ ನೀಡುತ್ತವೆ. ನಮ್ಮಲ್ಲಿ ಕುಟುಂಬ ವೈದ್ಯನ ಪರಿಕಲ್ಪನೆ ಮಸುಕಾಗಿರುವುದರಿಂದ ಯಾವ ವೈದ್ಯನಲ್ಲಿಗೆ ಹೋಗಬೇಕು ಎಂದು ಜನರಿಗೆ ಅರಿವಿರುವುದಿಲ್ಲ. ನಾಲ್ಕು ಗೋಡೆಗಳ ಮಧ್ಯೆ ಕುಟುಂಬ ವೈದ್ಯ ಹಲವಾರು ದಶಕಗಳವರೆಗೆ ವೃತ್ತಿಯಲ್ಲಿ ಇರುತ್ತಾನೆ. ಅವನಿಗೆ ಬರುವ ಆದಾಯ ರೋಗಿಯಿಂದ ಪಡೆಯುವ ಫೀಸು. ಕೆಲವು ಬಾರಿ ತಿಂಗಳುಗಟ್ಟಲೆ ರೋಗಿಗಳು ಬರುವುದೇ ಇಲ್ಲ. ಆದ್ದರಿಂದ ಬೇಸರಗೊಳ್ಳುತ್ತಾನೆ. ಕುಟುಂಬ ವೈದ್ಯರಲ್ಲಿ ಖಿನ್ನತೆ ಸಾಮಾನ್ಯವಾಗಿರುತ್ತದೆ. ಅನೇಕ ಬಾರಿ ಕುಟುಂಬ ವೈದ್ಯ ಕನಿಷ್ಠ ಆದಾಯಕ್ಕಾಗಿ ಇತರೇ ವೃತ್ತಿಯಲ್ಲಿ ತೊಡಗುತ್ತಾನೆ. (ಉದಾಹರಣೆ : ರಿಯಲ್ ಎಸ್ಟೇಟ್ ದಂಧೆ). ಇನ್ನು ಕೆಲವರು ಅನಗತ್ಯ ಪರೀಕ್ಷೆ, ಚಿಕಿತ್ಸೆ, ಆಸ್ಪತ್ರೆಗೆ ದಾಖಲು ಮಾಡುವುದು ಮುಂತಾದವುಗಳಿಂದ ಕಮಿಷನ್ ಹಣಗಳಿಸಲು ಮುಂದಾಗುತ್ತಾರೆ. ಈಗಿನ ದಿನಗಳಲ್ಲಿ ಕುಟುಂಬ ವೈದ್ಯಕೀಯ ಒಂದು ವ್ಯಾಪಾರವೆಂದು ಪರಿಗಣಿಸಲ್ಪಟ್ಟಿದೆ ಹಾಗೂ ಮೇಲೆ ತಿಳಿಸಿದ ಎಲ್ಲ ತಪ್ಪು ವ್ಯವಹಾರಗಳನ್ನು ಕುಟುಂಬ ವೈದ್ಯ ಮುಂದುವರಿಸಿಕೊಂಡು ಹೋಗುತ್ತಾನೆ. ಅದಲ್ಲದೆ, ವೈಜ್ಞಾನಿಕವಾದ ಕುಟುಂಬ ವೈದ್ಯಕೀಯ ವಿಧಾನದ ಬಗ್ಗೆ ಸರಿಯಾದ ತಿಳುವಳಿಕೆ ಇಲ್ಲದಿರುವುದರಿಂದ ವೈದ್ಯಕೀಯ ವ್ಯಾಪಾರ ಮುಂದುವರಿದು ಜನರಿಗೆ ಸಾಕಷ್ಟು ತೊಂದರೆಯಾಗುತ್ತದೆ. ಆದರೆ ಇದರ ಬಗ್ಗೆ ಜನರಿಗೂ ಅರಿವಿರುವುದಿಲ್ಲ. ಅರಿವಿದ್ದರೂ ಏನೂ ಮಾಡುವಂತಿಲ್ಲ! ವೈದ್ಯನ ಒಳ್ಳೆ ನಡವಳಿಕೆ ಅವನ ತಪ್ಪುಗಳನ್ನು ಮುಚ್ಚಿಹಾಕಲು ಸಹಾಯಕವಾಗುತ್ತದೆ. ಕುಟುಂಬ ವೈದ್ಯನಲ್ಲದೆ ಯಾವುದೇ ಖಾಸಗೀ ವೃತ್ತಿಯಲ್ಲಿರುವ ಇತರೇ ವೈದ್ಯರೂ ಈ ರೀತಿ ತಪ್ಪು ವೃತ್ತಿಗೆ ಇಳಿದಿರುವುದು ವ್ಯಾಪಕವಾಗಿ ಕಂಡುಬರುತ್ತದೆ.

೮) ಕುಟುಂಬ ವೈದ್ಯಕೀಯದ ಇತರೆ ಸಮಸ್ಯೆಗಳು :

ಅನಗತ್ಯ ಇಂಜೆಕ್ಷನ್ ಹಾಕುವುದು, ಗ್ಲೂಕೋಸ್/ಸಲೈನ್ ಹಾಕುವುದು, ಅಗತ್ಯ ಔಷಧಿಗಳನ್ನು ಹಾಗೂ ಅನಗತ್ಯ ಔಷಧಿಗಳನ್ನು ಬರೆದುಕೊಡುವುದು (ಆಂಟಿಬಯೋಟಿಕ್ಸ್, ವಿಟಮಿನ್, ಮಿನರಲ್ಸ್, ಟಾನಿಕ್, ಇತ್ಯಾದಿ ಔಷಧಿಗಳನ್ನು ತಿಂಗಳುಗಟ್ಟಲೆ ಮುಂದುವರಿಸುವುದು, ಆರೋಗ್ಯವರ್ಧಕಗಳನ್ನು ಬರೆದುಕೊಡುವುದು, ಪ್ರೋಟೀನ್ ಪುಡಿ, ಪೇಯಗಳು) ಇವು ನಿಜವಾದ ಆರೋಗ್ಯವರ್ಧಕಗಳಲ್ಲ. ಎಕ್ಸರೇ, ಸ್ಕ್ಯಾನಿಂಗ್, ರಕ್ತಪರೀಕ್ಷೆ ಮಾಡಿಸುವುದು, ಆಸ್ಪತ್ರೆಗೆ ದಾಖಲಿಸುವುದು ಇತ್ಯಾದಿ.

೯) ವೈದ್ಯ ವಿಜ್ಞಾನದ ಬೆಳವಣಿಗೆ ಅಪಾರ, ಅದರೊಂದಿಗೆ ಅನೇಕ ನೈತಿಕ ಸಮಸ್ಯೆಗಳೂ ಹೆಚ್ಚಾಗುತ್ತಿವೆ. ಕುಟುಂಬ ವೈದ್ಯರ ಈ ಸಮಸ್ಯೆಗಳನ್ನು ಚರ್ಚಿಸಿ ಸರಿಪಡಿಸಿ ಕೊಳ್ಳಬೇಕಾಗಿದೆ. ಆಧುನಿಕ ಕುಟುಂಬ ವೈದ್ಯ ನಿರೀಕ್ಷಾ ಪಾಲನೆ, ನಿರಂತರ ಪಾಲನೆ, ಕೊನೆಯ ಹಂತದ ಪಾಲನೆ, ಲೈಂಗಿಕ ಚಿಕಿತ್ಸೆ, ಮನೆಗೆ ಭೇಟಿ ಕೊಟ್ಟು ಚಿಕಿತ್ಸೆ ನೀಡುವುದರ ಬಗ್ಗೆ ಗಮನಹರಿಸುತ್ತಿಲ್ಲ. ರೋಗಿಗೆ ಚಿಕಿತ್ಸೆ ಬರೆದುಕೊಡುವುದು, ಪರೀಕ್ಷೆ ಮಾಡಿಸುವುದು (ಸ್ಕ್ಯಾನಿಂಗ್, ಸಿ.ಟಿ. ಸ್ಕ್ಯಾನ್, ಅಲ್ಟ್ರಾಸೌಂಡ್), ಆಸ್ಪತ್ರೆಯಲ್ಲಿ ದಾಖಲು ಮಾಡಿ ಚಿಕಿತ್ಸೆ ಮಾಡುವುದರಲ್ಲಿ ತೊಡಗಿದ್ದಾನೆ. ಇವು ವಾಸ್ತವವಾಗಿ ಸ್ಪೆಷಲಿಸ್ಟ್ ವೈದ್ಯನ ವಿಧಾನಗಳು.

೧೦) ಆಧುನಿಕ ಕುಟುಂಬ ವೈದ್ಯನ ಇನ್ನೊಂದು ಸಮಸ್ಯೆ ಫೋನ್ ಚಿಕಿತ್ಸೆಗಳು, ಈ ಚಿಕಿತ್ಸೆಗಳು ಹೆಚ್ಚುತ್ತಿವೆ. ಆದರೆ ಈ ಚಿಕಿತ್ಸೆಗೆ ಇತಿಮಿತಿಗಳಿವೆ. ಕುಟುಂಬ ವೈದ್ಯ ಫೋನ್ ಚಿಕಿತ್ಸೆಗಳನ್ನು ಕಡಿಮೆ ಮಾಡಲು ಇಚ್ಛಿಸಿದರೂ, ಜನರು ಈ ಚಿಕಿತ್ಸೆಗಳನ್ನು ಪಡೆಯಲು ಮುಂದಾಗುತ್ತಾರೆ.

ಕುಟುಂಬ ವೈದ್ಯಕೀಯ ಚಿಕಿತ್ಸೆಗಳು ಅವೈಜ್ಞಾನಿಕವಾಗುತ್ತಿವೆ. ಕುಟುಂಬ ವೈದ್ಯರೇ ತಮ್ಮ ಸಮಸ್ಯೆಯನ್ನು ಬಗೆಹರಿಸಿಕೊಳ್ಳಲು ಮುಂದಾಗಬೇಕು. ಸರಕಾರ ಅಪಾರ ಸಂಖ್ಯೆಯಲ್ಲಿರುವ ಕುಟುಂಬ ವೈದ್ಯರ ಸೇವೆಗಳನ್ನು ನ್ಯಾಯಯುತವಾಗಿ ಬಳಸಿದಲ್ಲಿ, ಸಮಾಜಕ್ಕೂ ಜನರಿಗೂ ಒಳ್ಳೆಯದೇ ಆಗುತ್ತದೆ. ಕುಟುಂಬ ವೈದ್ಯಕೀಯದಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ, ಸಂಶೋಧನೆಗಳಾಗುತ್ತಿವೆ. ಆದರೆ ಈಗಲೂ ಭಾರತದಲ್ಲಿ ಕುಟುಂಬ ವೈದ್ಯರು ಸಾಂಪ್ರದಾಯಿಕ ಕುಟುಂಬ ವೈದ್ಯಕೀಯದಲ್ಲಿ ತೊಡಗಿದ್ದಾರೆ. ಜನಾರೋಗ್ಯ ಸುಧಾರಿಸಲು ಕುಟುಂಬ ವೈದ್ಯರು ಪ್ರಾಮಾಣಿಕ ಪ್ರಯತ್ನ ಮಾಡಿದಲ್ಲಿ, ಆರೋಗ್ಯದ ಅಂಕಿ-ಸಂಖ್ಯೆಗಳಲ್ಲಿಯೂ ಬದಲಾವಣೆ ತರಲು ಸಾಧ್ಯ.

**ಡಾ|| ಪ್ರಕಾಶ್ ಸಿ. ರಾವ್**
ಅಪರ್ಣಾ ಕ್ಲಿನಿಕ್, ನಂ. ೧೯೯೪, ೫ನೇ ಅಡ್ಡರಸ್ತೆ, ೬ನೇ ಮುಖ್ಯರಸ್ತೆ
ಕೆ. ಎನ್. ಬಡಾವಣೆ, ಯಶವಂತಪುರ, ಬೆಂಗಳೂರು - ೫೬೦ ೦೨೨

**ನಿಜನಾ ?**

ವೀಕ್ಷಕರ
ಮೂರ್ಖರಾಗಿ
ಮಾಡುವ ನೀನೆಂಬ
ದೂರು ಸತ್ಯನಾ ?
ನೀನೇ ನುಡಿವೆ
ದೂರದರ್ಶನ ।

**ಡಾ|| ವಿ. ಪುಗಳೇಂದಿ**
ಬಳ್ಳಾರಿ

# ಅಪರೂಪದ ವಿಶಿಷ್ಟ ದೇವಾಲಯ







ಪುಸ್ತಕದ ಹೆಸರು
**ಇಕ್ಕೇರಿ ಅಘೋರೇಶ್ವರ**

ಲೇಖಕರು
**ಡಾ|| ಅ. ಸುಂದರ**

ಪುಟ : ೮೦+೮ ವರ್ಣ ಪುಟಗಳು

ಬೆಲೆ : **ರೂ. ೧೦೦/-**

ಪ್ರಕಾಶಕರು
**ಶಾಂತಲಾ ಪ್ರಕಾಶನ**
ನಂ. ೮೭, ಶಾಂತಲಾ, ಕುವೆಂಪು ರಸ್ತೆ
ಶಿವಮೊಗ್ಗ - ೫೭೭೨೦೧

**ಎಚ್. ಎಸ್. ಗೋಪಾಲ ರಾವ್**

**ಡಾ||** ಅ. ಸುಂದರ ಅವರನ್ನು ಕರ್ನಾಟಕದ ಮಾತ್ರವಲ್ಲದೆ, ಬಹುತೇಕ ಅನೇಕ ಅಂತರರಾಷ್ಟ್ರೀಯ ವಿದ್ವಾಂಸರು ಬಲ್ಲರು. ಸರಳತೆ ಮತ್ತು ಸಜ್ಜನಿಕೆಗಳು ಮೂರ್ತರೂಪವಾಗಿರುವ ಶ್ರೀಯುತರು ಶ್ರಮಸಹಿತ ಸಂಶೋಧನೆಗೆ ಮತ್ತೊಂದು ಹೆಸರಾದವರು. ೮೦ನೆಯ ವಯಸ್ಸಿನಲ್ಲೂ, ಅನಾರೋಗ್ಯವನ್ನು ಲೆಕ್ಕಕ್ಕಿಡದೆ ಸಂಶೋಧನೆಯನ್ನು ಉಸಿರಾಗಿಸಿಕೊಂಡಿರುವ ಡಾ|| ಅ. ಸುಂದರ ಪ್ರಾಧ್ಯಾಪಕ ಎಂಬ ಪದಕ್ಕೆ ನಿಜದ ಅರ್ಥ ತಂದುಕೊಟ್ಟಿದ್ದಾರೆ. ಅವರೊಡನೆ ಅವರ ೭೮ನೆಯ ಹರೆಯದಲ್ಲೂ ಬಾದಾಮಿಯ ಗುಡ್ಡಗಳ ಮೂಲೆಮೊಡಕುಗಳನ್ನು ಸುತ್ತಿ ಅನುಭವ ಶ್ರೀಮಂತನಾಗಿರುವಂತಹ ನನ್ನಂತೆಯೇ ಅವರ ಒಡನಾಟದಿಂದ ಶ್ರೀಮಂತ ಅನುಭವಗಳನ್ನು ತಮ್ಮದಾಗಿಸಿಕೊಂಡಿರುವ ಅನೇಕ ಸಂಶೋಧಕರಿದ್ದಾರೆ. ಪ್ರಾಗಿತಿಹಾಸ, ವಾಸ್ತುಶಿಲ್ಪ, ಮೂರ್ತಶಿಲ್ಪ, ಶಾಸನಶಾಸ್ತ್ರ, ನಾಣ್ಯಶಾಸ್ತ್ರ ಇತ್ಯಾದಿ ಪುರಾತತ್ವದ ಎಲ್ಲ ವಿಷಯಗಳಲ್ಲಿ ಅಪಾರ ಜ್ಞಾನ ಪಡೆದಿರುವ ಮತ್ತು ಅದನ್ನು ಯಾವುದೇ ಕೃಪಣತೆ ಇಲ್ಲದೆ, ಆಸಕ್ತಿ ಇರುವವರೆಲ್ಲರಿಗೂ ಹಂಚುವ ಅಪರೂಪದ ವಿದ್ವಾಂಸ ಡಾ|| ಅ. ಸುಂದರ. ಡಾ|| ಸುಂದರ ಅಡಿಗರು ಮೂಲತಃ ದಕ್ಷಿಣ ಕನ್ನಡ ಜಿಲ್ಲೆಯವರಾದರೂ ಇಡೀ ಕರ್ನಾಟಕದಲ್ಲಿ ಅವರ ಛಾಪನ್ನು ಗುರುತಿಸಬಹುದು.

ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಗಳ ಬಗ್ಗೆ ವಿಶ್ಲೇಷಣಾತ್ಮಕವಾಗಿ ಚರ್ಚಿಸುವ ಡಾ|| ಅ. ಸುಂದರ ಅವರು ಇತ್ತೀಚೆಗೆ ಆಸಕ್ತ ಓದುಗರ ಕೈಗಳಿಗೆ ದಾಟಿಸಿರುವ ಕಿರುಕೃತಿ 'ಇಕ್ಕೇರಿ ಅಘೋರೇಶ್ವರ'. ಇದನ್ನು ಪ್ರಕಟಿಸಿರುವ ಶಿವಮೊಗ್ಗದ ಶಾಂತಲಾ ಪ್ರಕಾಶನ ಸಾರ್ಥಕತೆ ಪಡೆದಿದೆ.

ಕೆಳದಿ, ಇಕ್ಕೇರಿ ಮತ್ತು ನಗರಗಳು ಕೆಳದಿ ರಾಜ್ಯದ ಪ್ರಮುಖ ನೆಲೆಗಳು. ಇವು ಒಂದಲ್ಲ ಒಂದು ಸಂದರ್ಭದಲ್ಲಿ ಕೆಳದಿ ಅರಸರ ಆಡಳಿತ ಕೇಂದ್ರಗಳಾಗಿದ್ದವು. ಅಳಿದುಳಿದಿರುವ ಇಲ್ಲಿನ ಕೋಟೆಯ ಅವಶೇಷಗಳು ಮತ್ತು ದೇವಾಲಯಗಳು ಮತ್ತು ಶಾಸನಗಳು ಮಾತ್ರವಲ್ಲದೆ, ಸಮಕಾಲೀನ ಸಾಹಿತ್ಯ ಕೃತಿಗಳು ಹಾಗೂ ಹಸ್ತಪ್ರತಿ ದಾಖಲೆಗಳು ಹಾಗೂ ವಿದೇಶೀ ಪ್ರವಾಸಿಗಳ ಪ್ರವಾಸಕಥನಗಳು ಕೆಳದಿ ನಾಯಕರು ಮತ್ತು ಅವರ ಕಾಲದ ವಾಸ್ತು ಮತ್ತು ಮೂರ್ತಿ ಶಿಲ್ಪಗಳು ಹಾಗೂ ಸಂಸ್ಕೃತಿಯ ಬಗ್ಗೆ ತಿಳಿಸುತ್ತವೆ. ಆ ಬಗ್ಗೆ ಸಾಕಷ್ಟು ಅಧ್ಯಯನಗಳೂ ಆಗಿವೆ ಮತ್ತು ಆಗುತ್ತಿವೆ. ಈ ಎಲ್ಲ ಆಗಿರುವ ಮತ್ತು ಆಗುತ್ತಿರುವ ಅಧ್ಯಯನಗಳ ಹಿನ್ನೆಲೆಯಲ್ಲಿ ಎಲ್ಲೋ ಒಂದೆಡೆ ಡಾ|| ಅ. ಸುಂದರ ಇದ್ದೇ ಇರುತ್ತಾರೆ.

ಕೆಳದಿ ನಾಯಕರ ಕಾಲದ ವಾಸ್ತು ಮತ್ತು ಮೂರ್ತಿಶಿಲ್ಪಗಳನ್ನು ಕುರಿತು ಹಲವು ಅಧ್ಯಯನಗಳು ಆಗಿವೆ. ಆ ಪೈಕಿ ಇಕ್ಕೇರಿಯ ಅಘೋರೇಶ್ವರ ದೇವಾಲಯ ಮತ್ತು ಅಘೋರೇಶ್ವರ ಮೂರ್ತಿಯ ಬಗ್ಗೆ ಇನ್ನೂ ಅಧ್ಯಯನ ಆಗುತ್ತಲೇ ಇದೆ. ಡಾ|| ಅ. ಸುಂದರ ಅವರೇ ಈ ಬಗ್ಗೆ ಬೇರೆಡೆಗೆ ಬರೆಯುತ್ತಾ, 'ಕೆಳದಿ ಅರಸರ ಕಾಲದ ಇಕ್ಕೇರಿ, ಭುವನಗಿರಿ, ಬಿದನೂರು, ಶಿವಮೊಗ್ಗ ಮೊದಲಾದ ಸ್ಥಳಗಳಲ್ಲಿಯ ದೇವಾಲಯಗಳಲ್ಲಿ ಇಸ್ಲಾಂ ವಾಸ್ತುಶಿಲ್ಪ ಶೈಲಿಯ ಮಾಡಿನಂಚಿನಲ್ಲಿ ಕಂಗುರ, ಮುಂಭಾಗದ ಮಾಡಿನ ಮೂಲೆಗಳಲ್ಲಿ ಕಿರಿಯ ಮೀನಾರು, ಗುಮ್ಮಟ, ಕಮಾನುಗಳನ್ನು ಹದವರಿತು ಬಳಸಲಾಗಿದೆ' ಎಂದು ದಾಖಲಿಸಿದ್ದಾರೆ. ಇಕ್ಕೇರಿಯ ಅಘೋರೇಶ್ವರ ದೇವಾಲಯ ಕುರಿತು ಮೈಸೂರು ಪುರಾತತ್ವ ಇಲಾಖೆಯ ೧೯೧೧ರ ವಾರ್ಷಿಕ ವರದಿಯಲ್ಲೂ ದಾಖಲಾಗಿದೆ. ನಿರಂತರ ಅಧ್ಯಯನಕ್ಕೆ ಅವಕಾಶ ಕಲ್ಪಿಸುತ್ತಲೇ ಇರುವ ಅಘೋರೇಶ್ವರ ದೇವಾಲಯದ ವಾಸ್ತುಶೈಲಿಯ ಬಗ್ಗೆ ಈ ಮೊದಲು ಡಾ|| ಅ. ಸುಂದರ ಅವರ ಮಾತುಗಳ ಮೂಲಕವೇ ತಿಳಿಸಲಾಗಿದೆ. ಎತ್ತರದ ಅಧಿಷ್ಠಾನ ಮತ್ತು ಅತ್ಯಂತ ವಿಶಾಲ ಎಂದೇ ಹೇಳಬಹುದಾದ ಮುಚ್ಚಿದ ಮುಖಮಂಟಪವಿರುವ ದೇವಾಲಯದ ಎತ್ತರವೂ ಸಾಮಾನ್ಯ ಎತ್ತರಕ್ಕಿಂತ ಹೆಚ್ಚು. ಅದಕ್ಕೆ ತಕ್ಕಂತೆ ಗರ್ಭಗೃಹದೊಳಗಿನ ಎತ್ತರದ ಪಾಣಿಪೀಠವಿದೆ. ಪಾಣಿಪೀಠದ ಮೇಲೆ ಈಗ ಪ್ರತಿಷ್ಠೆಗೊಂಡಿರುವ ಲಿಂಗವೇ ಅಘೋರೇಶ್ವರನ ಮೂರ್ತರೂಪ ಎಂದು ಭಾವಿಸಲಾಗಿದೆ. ಶಿವನ ಯಾವುದೇ ರೂಪವನ್ನು ಪ್ರತಿನಿಧಿಸುವುದು ಲಿಂಗವೇ ಆದ್ದರಿಂದ ಇದು ಒಪ್ಪಿತವಾಗಿದೆ. ಡಾ|| ಅ. ಸುಂದರ ಅವರು ಮೊದಲೇ 'ಸದಾಶಿವನಾಯಕನ ಆಳ್ವಿಕೆಯ ಕೊನೆಯ ಹಂತದಲ್ಲಿ ಇವನ ಅಣ್ಣ ಸಂಕಣ್ಣ ನಾಯಕನಿಂದ ಎರಡನೇ ರಾಜಧಾನಿ ಇಕ್ಕೇರಿಯಲ್ಲಿ ಕಟ್ಟಿಸಲ್ಪಟ್ಟ ಅಘೋರೇಶ್ವರ ದೇವಾಲಯವು ಆ ಕಾಲದ ವಾಸ್ತುಶಿಲ್ಪದ ಘನತೆಗೆ, ಶ್ರೇಷ್ಠತೆಗೆ ಮಕುಟಪ್ರಾಯವಾಗಿದೆ' ಎಂದು ದೇವಾಲಯವನ್ನು ಪರಿಚಯಿಸಿದ್ದಾರೆ.

ಕೆಳದಿ ಇತಿಹಾಸ ರಚನೆಗೆ ಪ್ರಮುಖ ಸಾಹಿತ್ಯಿಕ ಆಕರಗಳಾದ ಶಿವತತ್ವ ರತ್ನಾಕರ, ಕೆಳದಿ ನೃಪವಿಜಯ ಮತ್ತು ಕರ್ನಾಟಕ ಶಿವಗೀತೆಗಳ ಮೂಲಕ ಅಘೋರೇಶ್ವರ ದೇವಾಲಯ ಮತ್ತು ಅಘೋರೇಶ್ವರ ಮೂರ್ತಿಯ ಬಗ್ಗೆ ತಿಳಿಯುವ ವಿವರಗಳನ್ನು ಆಗಮ, ಶಿಲ್ಪ ಲಕ್ಷಣಶಾಸ್ತ್ರಗಳ ಮೂಲಕ ಡಾ|| ಅ. ಸುಂದರ ಪರಿಶೀಲಿಸಿದ್ದಾರೆ. ಒಬ್ಬ ಇತಿಹಾಸಕಾರನಿಗೆ ಆಯಾ ಕಾಲದ ಸಾಹಿತ್ಯ ಕೃತಿಗಳ ಪರಿಚಯವಿದ್ದರೆ ಮಾತ್ರ ಅವನ ಅಭಿಪ್ರಾಯಗಳು ಮಹತ್ವ ಪಡೆಯಲು ಸಾಧ್ಯ. ಶಿವತತ್ವ ರತ್ನಾಕರ ಮತ್ತು ಕೆಳದಿ ನೃಪವಿಜಯಗಳಲ್ಲಿ ಪ್ರಸ್ತಾಪಿತವಾಗಿರುವ ವಿಷಯಗಳನ್ನು ಉಲ್ಲೇಖಿಸಿ, ಡಾ|| ಅ. ಸುಂದರ ದೇವಾಲಯ ಮತ್ತು ಮೂರ್ತಿಯ ಬಗ್ಗೆ ವಿವರಣೆ ನೀಡಿದ್ದಾರೆ. ಜೊತೆಗೆ ೧೬೨೩ರ ನವೆಂಬರ್ ೧೫ರಂದು ರಾತ್ರಿ ದೇವಾಲಯವನ್ನು ನೋಡಿದ್ದ ಇಟಲಿಯ ಪ್ರವಾಸಿ ಪಿಯತ್ರೊ ದೆಲ್ಲವಲೆಯ ಹೇಳಿಕೆಯನ್ನು ಪರಿಶೀಲಿಸುವುದರ ಜೊತೆಗೆ ದೆಲ್ಲವಲೆಯು ನೀಡಿರುವ ದೇವಾಲಯದ ತಳವಿನ್ಯಾಸದ ನಕ್ಷೆಯ ಮೂಲಕ ಆಗ ದೇವಾಲಯದ ಮುಂದೆ ನಂದಿ ಮಂಟಪ ಇರಲಿಲ್ಲ ಎಂದು ಸ್ಪಷ್ಟಪಡಿಸಿದ್ದಾರೆ. ದೇವಾಲಯದಲ್ಲಿದ್ದ ಪೂಜಾ ಮೂರ್ತಿಗೆ ೩೨ ಬಾಹುಗಳಿದ್ದ ವಿಷಯವನ್ನೂ ದೆಲ್ಲವಲೆ ತಿಳಿಸಿದ್ದಾನೆ. ಇದರಿಂದ ಒಂದು ಮುಖದ ಅಘೋರೇಶ್ವರ ಮೂರ್ತಿಗೆ ೩೨ ಬಾಹುಗಳಿದ್ದವು ಮತ್ತು ಆ

ಹೊತ್ತಿಗೆ ದೇವಾಲಯದ ಮುಂದಿನ ನಂದಿಮಂಟಪದ ನಿರ್ಮಾಣ ಆಗಿರಲಿಲ್ಲ ಎಂದು ಸ್ಪಷ್ಟವಾಗುತ್ತದೆ.

ದೆಲ್ಲವಲೆಯ ಇಟಾಲಿಯನ್ ಪ್ರವಾಸ ಕಥನವನ್ನು ೧೬೬೪ರಲ್ಲಿ ಇಂಗ್ಲಿಷ್‌ಗೆ ಅನುವಾದಿಸಿದ ಜೆ. ಗ್ರೇವರ್ಸ್. ಇವುಗಳಲ್ಲಿನ ವಿವರಣೆಯನ್ನು ಡಾ|| ಅ. ಸುಂದರ ಪರಿಶೀಲಿಸಿ, ಕ್ರಿ.ಶ.೧೬೭೨ರ ನಂತರ ವೆಂಕಟಪ್ಪನ ಕಾಲದಲ್ಲಿ ಪ್ರತ್ಯೇಕ ನಂದಿಮಂಟಪವನ್ನು ಕಟ್ಟಿಸಿರಬಹುದೆಂಬ ತೀರ್ಮಾನಕ್ಕೆ ಬಂದಿದ್ದಾರೆ.

ಅಘೋರೇಶ್ವರ ಮೂರ್ತಿಯನ್ನು ಕುರಿತಾಗಿ ಡಾ|| ಅ. ಸುಂದರ ಅವರ ವಿವರಣೆಯು ಅತ್ಯಂತ ಮಹತ್ವದ್ದಾಗಿದೆ. ಬಸವಪ್ಪ ನಾಯಕನು ತನ್ನ ಶಿವತತ್ವ ರತ್ನಾಕರ ಗ್ರಂಥದಲ್ಲಿ ವಿವರಿಸಿರುವ ಅಘೋರೇಶ್ವರ ಮೂರ್ತಿಯ ಲಕ್ಷಣಗಳು ಮತ್ತು ಜೊತೆಗಿನ ಶಕ್ತಿದೇವತೆಗಳ ಪರಿಚಯ ವಿಶಿಷ್ಟವಾಗಿದೆ. ಈ ಲಕ್ಷಣಗಳ ಪ್ರತಿಷ್ಠಿತ ಮೂರ್ತಿಯು ಈಗ ಇಕ್ಕೇರಿಯ ದೇವಾಲಯದಲ್ಲಿಲ್ಲ, ಆ ಲಕ್ಷಣಗಳ ಉತ್ಸವ ಮೂರ್ತಿ ಮಾತ್ರ ಇದೆ. ಅದು ಸುರಕ್ಷಿತವಾಗಿದ್ದು, ವರ್ಷಕ್ಕೊಮ್ಮೆ ಇಕ್ಕೇರಿಗೆ ಬರುತ್ತದೆ. ಡಾ|| ಅ. ಸುಂದರ ಅವರು ತಮ್ಮ ವಿಚಾರಗಳನ್ನು೧೯೧೧ರ ಮ. ಮ. ಆರ್. ನರಸಿಂಹಾಚಾರ್, ೧೯೨೮ರ ಡಾ|| ಎಂ. ಎಚ್. ಕೃಷ್ಣ ಅವರ ಅಧ್ಯಯನಕ್ಕಷ್ಟೇ ಮಿತಿಗೊಳಿಸಿಕೊಳ್ಳದೆ ಇತ್ತೀಚಿನ ಅಧ್ಯಯನಗಳಿಂದಲೂ ಪುಷ್ಟಿಗೊಳಿಸುತ್ತಾರೆ. ಅದಕ್ಕೆ ತಮ್ಮ ಅಧ್ಯಯನದಲ್ಲಿ ಡಾ|| ಜಿ. ವಿ. ಕಲ್ಲಾಪುರ ಗಮನಿಸಿರುವ ವಿಚಾರಗಳನ್ನೂ ಸೇರಿಸಿಕೊಂಡಿದ್ದಾರೆ. ಇದು ತರುಣ ಸಂಶೋಧಕರ ಒಳ್ಳೆಯ ಕೆಲಸಗಳಿಗೆ ಮೆಚ್ಚುಗೆ ಸೂಚಿಸುವ ವಿಧಾನ.

ದೇವಾಲಯದ ಹೊರಭಾಗದಲ್ಲಿ ಪ್ರಾಕಾರದ ಒಳಗೇ ಒಂದು ಪಾಣಿಪೀಠದ ಭಗ್ನಾವಶೇಷವಿದೆ. ಅದರಲ್ಲಿ ಭಗ್ನಗೊಂಡ ಜೋಡಿ ಪಾದಗಳು ಮತ್ತು ಅದರ ಎರಡೂ ಬದಿಗೆ ಒಂದೊಂದು ಜೋಡಿ ಪಾದಗಳು ಉಳಿದಿವೆ. ಪೀಠದ ಮುಂಭಾಗದಲ್ಲಿ ಸಿಂಹ ಮುಖವಿದೆ. ಈ ಪೀಠದ ಈಗ ಉಳಿದಿರುವ ಲಕ್ಷಣಗಳನ್ನು ಗಮನಿಸಿ, ಡಾ|| ಅ. ಸುಂದರ ಅವರು ಆ ಪೀಠದ ಮೇಲಿದ್ದ ಶಿಲ್ಪವು ವೀರಭದ್ರ ಅಥವಾ ಭದ್ರಕಾಳಿಯದಾಗಿರಬಹುದು ಎಂಬ ತೀರ್ಮಾನಕ್ಕೆ ಬರುತ್ತಾರೆ. ಇದು ಅತ್ಯಂತ ಮಹತ್ವದ ಪ್ರಮೇಯ.

ದೇವಾಲಯದ ಗರ್ಭಗೃಹದೊಳಗಿನ ಪ್ರತಿಷ್ಠಾಪಿತ ಮೂರ್ತಿಯು ಈಗಿರುವಂತೆ ಲಿಂಗವಾಗಿರದೆ ಅಘೋರೇಶ್ವರ ಮೂರ್ತಿಯೇ ಆಗಿದ್ದರೆ, ಬದಲಾವಣೆಯು ಯಾವಾಗ ಆಗಿರಬಹುದು ಎಂಬ ಕುತೂಹಲ ಸಹಜವಾಗಿಯೇ ಇರುತ್ತದೆ. ನಂದಿಮಂಟಪದ ರಚನೆಯು ನಂತರದ ಕಾಲದಲ್ಲಿ ಆಗಿರುವಂತೆ, ದೇವಾಲಯವು ಯಾವಾಗಲೋ ದಾಳಿಗೆ ಒಳಗಾಗಿದ್ದು, ನಂತರ ಈಗಿನ ರೂಪವನ್ನು ಪಡೆದಿರಬೇಕು. ಕೆಳದಿಯ ಡಾ|| ವೆಂಕಟೇಶ್ ಪತ್ತೆ ಮಾಡಿರುವ ದಾಖಲೆಯ ಪ್ರಕಾರ ಕ್ರಿ.ಶ.೧೭೫೦ರ ಸುಮಾರಿನಲ್ಲಿ ಮರಾಠಾ ಸೈನ್ಯಾಧಿಕಾರಿ ಪರಶುರಾಮ್ ಬಾವು ಮಾಡಿದ ದಾಳಿಯಲ್ಲಿ ಮೂರ್ತಿಯು ಹಾಳಾಗಿರುವ ಸಾಧ್ಯತೆಗಳಿವೆ ಎಂಬ ಅನುಮಾನವನ್ನು ಡಾ|| ಅ. ಸುಂದರ ವ್ಯಕ್ತಪಡಿಸುತ್ತಾರೆ.

ಯಾವುದೇ ಒಂದು ಪ್ರಾಚೀನ ದೇವಾಲಯವನ್ನು ಅಭ್ಯಾಸಮಾಡುವ ಕ್ರಮಕ್ಕೆ ಡಾ|| ಅ. ಸುಂದರ ಅವರ 'ಇಕ್ಕೇರಿ ಅಘೋರೇಶ್ವರ' ಕೃತಿ ಒಂದು ಮಾದರಿಯಾಗಿದೆ. ಶಾಸನಗಳು ಮತ್ತು ಹಸ್ತಪ್ರತಿ, ಪ್ರವಾಸಕಥನ, ಸರ್ಕಾರದ ವರದಿಗಳು ಇತ್ಯಾದಿ ಇತರ ಬರವಣಿಗೆಯ ದಾಖಲೆಗಳು ಮತ್ತು ಶಿಲ್ಪಲಕ್ಷಣ ಶಾಸ್ತ್ರ ಹಾಗೂ ಆಗಮ ಶಾಸ್ತ್ರದ ಜೊತೆಗೆ ವಾಸ್ತು ಮತ್ತು ಮೂರ್ತಿಶಿಲ್ಪಗಳ ಸಮಗ್ರ ಅಧ್ಯಯನದಿಂದ ಯಾವುದೇ ದೇವಾಲಯದ ಅಧ್ಯಯನ ಮಾಡಿದಾಗ ಅದು ಸಮರ್ಪಕ ಆಗುತ್ತದೆ ಎಂಬ ನಂಬಿಕೆಯನ್ನು ಈ ಕೃತಿ ನೀಡುತ್ತದೆ.

**ಎಚ್. ಎಸ್. ಗೋಪಾಲ ರಾವ್**
ನಂ. ೧೪೪, 'ಸ್ವಸ್ತಿಶ್ರೀ ಸ್ಕಂದ', ಐ.ವೈ.ಡಿ. ರಸ್ತೆ, ಅರಸಿನಕುಂಟೆ, ನೆಲಮಂಗಲ ತಾಲ್ಲೂಕು
ಬೆಂಗಳೂರು ಗ್ರಾಮಾಂತರ ಜಿಲ್ಲೆ - ೫೬೨ ೧೨೩.

# ಮಾಯೆ

ಗಂಡು 'ಮಾಯೆ' ಎಂಬ ಅರಿವಿದ್ದರೂ
ನಿನಗೆ ಗಂಡಾಂತರ ತಪ್ಪಲಿಲ್ಲ
ಅದು,
ಕೌಶಿಕನ ರೂಪದಲ್ಲಿ ಕಾಡಿತ್ತೆ, ಅಕ್ಕಾ ?
'ಸಾವಕೆಡುವ ಗಂಡಂದಿರಿಗೆ'
ಉರುಳು ಪದ ಹಾಡಿದ ನಿನಗೆ
ಯಾವ 'ಮಾಯೆ' ಸಂಚು ಮಾಡಿತೆ ?
ನಿಜದ ನಿರ್ಭಯ ಶರಣೆ
ದೇಹದೇಗುಲ ಮಾಡಿ
ಭೂಮ್ಯಾಂಬರದ
ಹಾಸು ಹೊದಿಕೆಯಲಿ
'ಚೆನ್ನಮಲ್ಲಿಕಾರ್ಜುನನ'
ಅಂಗದ ಲಿಂಗವಾಗುವ 'ಮಾಯೆ'
ಏಕೆ ಮುಸುಕಿತೆ ?
ಹಸಿದ ಕಣ್ಣುಗಳಿಗೆ
ಅಡವಿಟ್ಟ ದೇಹ
'ನೋಟ'ಗಳಿಗೆ ತೆತ್ತ ಬಡ್ಡಿ
'ಧರ್ಮ'ದ ಅಮಲಲ್ಲಿ
ನಿನಗರಿವಾಗಲಿಲ್ಲವೇನೆ ?
'ಮಯನಗರಿಯ'ಯ ಆಕ್ರಂದನ
ಕೇಳದ ಯಾವ 'ಮಾಯೆ'
ಮುಚ್ಚಿತ್ತು ಕಿವಿಯ ?
ಪೌರುಷದ ಡಂಭಾಚಾರಕ್ಕೆ
ಹೆಣವಾದವರ ಮೇಲೆ
ನಿನ್ನದೆಂತ ಶಿವಪೂಜೆಯೆ ?
ಹರನ ಕೂಡ ಹಾದರವನಾಡುವ
ನಿನ್ನ 'ಮಾಯೆ'ಗೆ ಬೆಚ್ಚಿ ನಿಂತಿದೆ
ಲೋಕ !
ಶೀಲದ ನೆಲೆ ಬಲ್ಲೆಡೆ ಹೇಳಿರೋ
ಎಂದ ಬೆನ್ನಿಗೇ
ಬಿಟ್ಟ ಹೆಣ್ಣ, ಮೆಲ್ಲುವ, ಕೂಡುವ
ಸಂಚಿನ ಮಾಯೆಗೆ ಒಪ್ಪಿದನೇ ನಿನ್ನ ಸಖ ?
'ಮೊದಲಿಲ್ಲದ' ಸೂತಕದ
ಮಾಯೆಗೆ ಜಗವೆಲ್ಲ ಹೆಣ್ಣು
ನೋಡ ಎಂದ ನೀನು
ಹೆಣ್ಣೋ ? ಗಂಡೋ ?
ನಿನ್ನ 'ವಾದ' ದಿಟವೊ ?
ಸಟೆಯೋ ?

**ಬಿ. ಸಿ. ಶೈಲಾ ನಾಗರಾಜ್**
'ಶೈನಾ', ೨ನೇ ಮುಖ್ಯರಸ್ತೆ, ೫ನೇ ಅಡ್ಡರಸ್ತೆ, ವಿಜಯನಗರ
ತುಮಕೂರು - ೫೭೨ ೧೦೨

